ಹಿಂದೆ ಹೇಳಿದ ಎಲ್ಲ ಉಪಕರಣಗಳಿದ್ದರೂ ತುಲಸಿ ಇಲ್ಲದ ಪೂಜೆಯನ್ನು ಭಗವಂತ ಎಂದಿಗೂ ಒಲ್ಲ. ಹಾರದಲ್ಲಿ ತುಲಸಿ ಇಲ್ಲದಿದ್ದರೆ ಅದು ವೈಜಯಂತಿಯಲ್ಲ.

ತುಲಸಿದಲವಿಲ್ಲದಿದ್ದರೆ ಎಲೆಗಳಿಂದ ಪೂಜಿಸಬಹುದು. ಅದೂ ಇಲ್ಲದಿದ್ದರೆ, ಒಣಗಿದ ತುಲಸಿಯಿಂದ, ಅಥವಾ ತುಲಸಿ ನಿರ್ಮಾಲ್ಯವಾಗಿದ್ದರೂ ಮೂರು ಸಲ ತೊಳೆದು ಪೂಜಿಸಬಹುದು. ಅಥವಾ ತುಲಸಿಯ ಕಾಷ್ಠ, ಮೃತ್ತಿಕೆಗಳಿಂದಲೂ ಪೂಜಿಸಬಹುದು.

ಕೊನೆಯ ಪಕ್ಷ 'ತುಲಸೀ' 'ತುಲಸೀ' ಎಂದು ಸ್ಮರಣೆಯಾದರೂ ಮಾಡಿ ಜಲಜಾಕ್ಷನ ಅರ್ಚಿಸಿರಯ್ಯ''

## ತುಲಸ್ಯಾಹರಣ

ತುಲಸಿ ತೆಗೆಯುವದಕ್ಕೆ ನಿಷಿದ್ಧವಾದ ಕಾಲ- ಮಂಗಲ, ಶುಕ್ರ ಭಾನುವಾರಗಳು. ವ್ಯತೀಪಾತ, ವೈಧೃತಿ, ಪೂರ್ಣಿಮಾ, ಅಮಾವಾಸ್ಯಾ, ಸಂಕ್ರಾಂತಿ, ಯುಗಾದಿ, ಮಧ್ಯಾಹ್ನದ ನಂತರದ ಕಾಲ ಹಾಗೂ ದ್ವಾದಶೀ ತಿಥಿ. ಈ ಎಲ್ಲ ಸಮಯಗಳು ನಿಷಿದ್ಧ,

ಕೆಲವು ಸ್ಮೃತಿವಾಕ್ಯಗಳ ಅನುಸಾರವಾಗಿ ಮೇಲೆ ಹೇಳಿದ ಎಲ್ಲ ಸಮಯವು ವಿಷ್ಣುಪೂಜೆಗಾಗಿ ತುಲಸಿ ತೆಗೆಯುವದಕ್ಕೆ ನಿಷಿದ್ಧವಾಗದಿದ್ದರೂ ದ್ವಾದಶೀ ತಿಥಿ ಮಾತ್ರ ನಿಷಿದ್ಧ (ಕೆಲವರ ಪ್ರಕಾರ ದ್ವಾದಶೀತಿಥಿಯೂ ನಿಷಿದ್ಧವಲ್ಲ.)

## ತುಲಸಿ ತೆಗೆಯುವ ಕ್ರಮ

ಮೊದಲು ಪ್ರಾರ್ಥನೆ.

**ಶ್ರಿಯಃ ಪ್ರಿಯೇ ಶ್ರಿಯಾವಾಸೇ ನಿತ್ಯಂ ಶ್ರೀಧರವಲ್ಲಭೇ ।**
**ಭಕ್ತ್ಯಾ ದತ್ತಂ ಮಯಾರ್ಘ್ಯಂ ಹಿ ತುಲಸಿ ಪ್ರತಿಗೃಹ್ಯತಾಮ್ ॥★॥**

'ಹೇ ತುಲಸಿ ! ನೀನು ನಾರಾಯಣನ ಪ್ರಿಯಳು. ಸಿರಿಗೂ ಮೆಚ್ಚಿನವಳು. ಸಿರಿಯ ಸನ್ನಿಧಾನವೂ ನಿನ್ನಲ್ಲಿದೆ. ನಾನು ಭಕ್ತಿಯಿಂದ ಸಲ್ಲಿಸುವ ಅರ್ಘ್ಯವನ್ನು ಪ್ರೀತಿಯಿಂದ ಸ್ವೀಕರಿಸು.'

**ಮನಃಪ್ರಸಾದಜನನಿ ಸುಖಸೌಭಾಗ್ಯವರ್ಧಿನಿ ।**
**ಆಧಿಂ ವ್ಯಾಧಿಂ ಚ ಹರ ಮೇ ತುಲಸಿ ತ್ವಾಂ ನಮಾಮ್ಯಹಮ್ ॥★॥**

'ಹೇ ತುಲಸಿ ! ಮನಸ್ಸಿಗೆ ಪ್ರಸನ್ನತೆಯನ್ನು ನೀಡುವ ಓ ಮಹಾತಾಯಿ! ಓ ಸುಖಸೌಭಾಗ್ಯವನ್ನು ಬೆಳೆಸುವ ದೇವಿ ! ನನ್ನ ಮನದ ಪೀಡೆಯನ್ನು ದೇಹದ ರೋಗವನ್ನು ಕಳೆದು ಹಾಕು. ನಾನು ನಿನ್ನನ್ನು ವಂದಿಸುವೆ.'

**ಶ್ರಿಯಂ ದೇಹಿ ಯಶೋ ದೇಹಿ ಕೀರ್ತಿಮಾಯುಸ್ತಥಾ ಸುಖಮ್ ।**
**ಬಲಂ ತುಷ್ಟಿಂ ತಥಾ ಧರ್ಮಂ ತುಲಸಿ ತ್ವಂ ಪ್ರಯಚ್ಛ ಮೇ ॥★॥**

'ಓ ತುಲಸಿ! ಸಿರಿ ಯಶಸ್ಸು, ಕೀರ್ತಿ, ಆಯುಸ್ಸು, ಸುಖ, ಬಲ, ಸಂತೋಷಗಳನ್ನು ಕೊಡು. ನನ್ನಿಂದ ಧರ್ಮಗಳನ್ನು ಮಾಡಿಸು.'

**ಪ್ರಸೀದ ಮಮ ದೇವೇಶಿ ಪ್ರಸೀದ ಹರಿವಲ್ಲಭೇ ।**
**ಕ್ಷೀರೋದಮಥನೋದ್ಭೂತೇ ತುಲಸಿ ತ್ವಂ ಪ್ರಸೀದ ಮೇ ॥★॥**

'ಓ ದೇವೋತ್ತಮಳೇ! ಹರಿಪ್ರಿಯಳೇ, ಹಾಲುಗಡಲು ಕಡೆದಾಗ ಪ್ರಕಟನಾದ ಧನ್ವಂತರಿಯ ಆನಂದಾಶ್ರುಗಳಿಂದ ಉದ್ಭವಿಸಿದವಳೇ, ನೀನು ಪ್ರಸನ್ನಳಾಗು.' ಹೀಗೆಂದು ಪ್ರಾರ್ಥಿಸುತ್ತ ತುಲಸಿಯ ಪಾದಗಳಿಗೆ ನೀರೆರೆಯಬೇಕು.

**ತುಲಸ್ಯಮೃತಜನ್ಮಾऽಸಿ ಸದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥಂ[೧] ವಿಚಿನುವೇ ವರದಾ ಭವ ಸುವ್ರತೇ ॥★॥**

'ಓ ಅಮೃತಜನ್ಮಳೇ! ಎಂದೆಂದಿಗೂ ಕೇಶವನ ಪ್ರಿಯೇ! ತುಲಸಿ! ವಿಷ್ಣುವಿನ ಪೂಜೆಗಾಗಿ ನಿನ್ನ ದಲಗಳನ್ನು ತೆಗೆಯುವೆ. ನಿನ್ನನ್ನೇ ದೇವರಿಗೆ ಸಮರ್ಪಿಸುವ ವ್ರತವನ್ನು ಕೈಗೊಂಡ ಓ ತುಲಸಿ! ನೀನು ವರಪ್ರದಳಾಗು.'

ಕೊನೆಯ ಮಂತ್ರದಿಂದ ತುಲಸೀದಲಗಳನ್ನು ಬಿಡಿಸಿಕೊಳ್ಳಬೇಕು. ದಲಗಳನ್ನು ತೆಗೆಯುವಾಗ ಉಗುರು ತಾಕಿಸಬಾರದು.

ನಂತರ ಸಾಧ್ಯವಿದ್ದರೆ ಪೂಜೆಗಾಗಿ ಮತ್ತೊಮ್ಮೆ ಸ್ನಾನಮಾಡಬೇಕು.

ಬಟ್ಟೆಯಿಂದ ಶೋಧಿಸಿದ (ಸೋಸಿದ) ನೀರಿನಿಂದ ನಾರಾಯಣಮಂತ್ರವನ್ನು ಪಠಿಸುತ್ತ ಅರ್ಘ್ಯೋದಕದ ಕಲಶವನ್ನು ತುಂಬಬೇಕು. ಕಲಶದ ಮುಖವನ್ನು ಬಟ್ಟೆಯಿಂದ ಮುಚ್ಚಬೇಕು. ಬಲಗೈಯಲ್ಲಿ ಅಥವಾ ತಲೆಯ ಮೇಲೆ ಧರಿಸಿ ತರಬೇಕು.

---

೧ ಕೇಶವಾರ್ಥೇ ಚಿನೋಮಿ ತ್ವಾಂ ಇತಿ ಪ್ರ.ಪಾಠಃ ।

ತರುವಾಗ ಮನುಷ್ಯರ ನೆರಳು ಬೀಳದಂತೆ, ನೀರಿಗೆ ಉಗುರು ತಾಕದಂತೆ ಎಚ್ಚರ ವಹಿಸಬೇಕು.

ಮನೆಯಲ್ಲಿ ಶುದ್ಧದೇಶದಲ್ಲಿ ಇಡಬೇಕು. ಒಳಗೆ ಬರುವಾಗ ಕೈಕಾಲುಗಳನ್ನು ತೊಳೆಯಬೇಕು.

ದೇವರಮನೆಯ ಕೋಣೆಯ ದ್ವಾರದಲ್ಲಿ ನಿಂತು ದ್ವಾರಪಾಲಕರನ್ನು ನಮಿಸಬೇಕು.

## ದ್ವಾರಪಾಲನಮನ

ಅನಾದ್ಯನಂತಕಾಲದ ಅನಂತಕೋಟಿಬ್ರಹ್ಮಾಂಡನಾಯಕನಾದ ಭಗವಂತನ ಪವಿತ್ರಕ್ಷೇತ್ರವೆನಿಸುವ ಪಾವನ ಪೂಜಾಗೃಹದಲ್ಲಿ ಪ್ರವೇಶಮಾಡಬೇಕು.

ಆಗ ಈರೀತಿ ಭಾವಿಸಬೇಕು. ದೇವಗೃಹಕ್ಕೆ ನಾಲ್ಕು ಪ್ರಾಕಾರಗಳು. ನಾಲ್ಕು ಪ್ರಾಕಾರಗಳಿಗೆ ನಾಲ್ಕು ದಿಕ್ಕುಗಳಲ್ಲಿ ಒಂದೊಂದು ದ್ವಾರಗಳು.

ಹೀಗೆ ಒಟ್ಟು ಹದಿನಾರು ದ್ವಾರಗಳು. ಆ ಎಲ್ಲ ದ್ವಾರಗಳಿಗೆ ಪಾಲಕ ದೇವತೆಗಳಿರುವರು.

| | | | |
|---|---|---|---|
| ಪೂರ್ವ | ಶ್ರೀ/ದ್ಯು(ಭಾರತೀ) | ಪ್ರಾಣ-ಚಕ್ಷು-ಸೂರ್ಯ | ಜಯ ವಿಜಯ |
| ದಕ್ಷಿಣ | ಶ್ರೀ/ದಿಕ್(ಭಾರತೀ) | ವ್ಯಾನ-ಶ್ರೋತ್ರ-ಸೋಮ | ಬಲ ಪ್ರಬಲ |
| ಪಶ್ಚಿಮ | ಶ್ರೀ/ಪೃಥಿವೀ (ಶ್ರೀ) | ಅಪಾನ-ವಾಕ್-ಅಗ್ನಿ | ನಂದ ಸುನಂದ |
| ಉತ್ತರ | ಶ್ರೀ/ವಿದ್ಯುತ್ (ಭಾರತೀ) | ಸಮಾನ-ಮನ-ಇಂದ್ರ | ಕುಮುದ ಕುಮುದಾಕ್ಷ |

(ಇದಕ್ಕೆ ಪ್ರಮಾಣ-ಛಾಂದೋಗ್ಯಭಾಷ್ಯ ೩ನೇ ಅಧ್ಯಾಯ, ಪರಿಶಿಷ್ಟದಲ್ಲಿ ನೋಡಿ.)(ಛಾಂದೋಗ್ಯಭಾಷ್ಯ ೩ನೇ ಅಧ್ಯಾಯ.)

ಈ ದೇವತೆಗಳು ಭಗವಂತನಿರುವ ನಮ್ಮ ಹೃನ್ಮಂದಿರಕ್ಕೂ ದ್ವಾರಪಾಲರಾಗಿದ್ದಾರೆ.

ಈ ಎಲ್ಲ ಮಹಾದೇವತೆಗಳನ್ನು ಹಾಗೂ ಉಪದೇವತೆಗಳನ್ನು ಮನಸಾರೆ ಸಾಷ್ಟಾಂಗವಾಗಿ ನಮಿಸಬೇಕು.

ಅನಂತಕೋಟಿಬ್ರಹ್ಮಾಂಡನಾಯಕ ಸರ್ವೋತ್ತಮನಾದ ದೇವರ ಸನ್ನಿಧಾನವಿರುವ ದೇವಗೃಹದಲ್ಲಿ ಪ್ರವೇಶಿಸುವವರಿದ್ದೇವೆ.

ಅಂಥಲ್ಲಿ ಪ್ರವೇಶಿಸಲು ನಮಗೇನಧಿಕಾರ? ನಾವು ಎಷ್ಟರವರು? ಹೀನ ಮಾನವ ಯೋನಿಯಲ್ಲಿ ಹುಟ್ಟಿದ ನಾವು ದಿವ್ಯೋತ್ತಮನಾದ ಭಗವಂತನ ಭವನದಲ್ಲಿ ಹೆಜ್ಜೆ ಇಡಲು ದ್ವಾರಪಾಲರ ಅನುಜ್ಞೆ ಬೇಡವೇ?

ಕಾರಣ ಆ ದೇವತೆಗಳನ್ನು ದಯಮಾಡಿ ಅನುಜ್ಞೆ ನೀಡಿರಿ ಎಂದು ಭಕ್ತಿಯಿಂದ ಪ್ರಾರ್ಥಿಸಬೇಕು.

ಅವರೆಲ್ಲರು ಭಗವಂತನಿಗೆ ಅತಿಸನಿಹದ ಭಕ್ತರು. ಅವರು ಭಗವಂತನ ಬಗೆಯನ್ನು ಬಲ್ಲವರು. ದೇವರ ಇಂಗಿತವನ್ನು ತಿಳಿದು ಅತ್ಯಲ್ಪ ಭಕ್ತರಾದ ನಮ್ಮ ಮೇಲೆ ಅನುಗ್ರಹಿಸುವರು ಹಾಗೂ ಅನುಮತಿಸುವರು ಎಂದು ತಿಳಿಯಬೇಕು.

**'ಓಂ ವಾಯವಾಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।**
**ತೇಷಾಂ ಪಾಹಿ ಶ್ರುಧೀ ಹವಮ್ ॥'**

ಈ ಮಂತ್ರದಿಂದ ದೇವರ ಮಂದಿರದ ಬಾಗಿಲನ್ನು ತೆರೆಯಬೇಕು.

**ಅಭಿಪ್ರಾಯ** ಭಕ್ತಿ ಶ್ರದ್ಧೆಗಳಿಂದ ಚೆಂದವಾದ ನನ್ನ ಮನಸ್ಸನ್ನು ಹಾಗೂ ಮನಸ್ಸಿನ ಪ್ರವೃತ್ತಿಗಳನ್ನು ನೀನು ಸ್ವೀಕರಿಸು.

ಅನ್ವಯ :- **ದರ್ಶತ! ವಾಯೋ! ಆಯಾಹಿ. ಇಮೇ ಸೋಮಾಃ ಅರಂಕೃತಾಃ. ತೇಷಾಂ (ತಾನ್) ಪಾಹಿ (ಪಿಬ). (ತೇಷಾಂ) ಹವಂ ಶ್ರುಧಿ.**

**ದರ್ಶತಸ್ತದೃಷ್ಟಿತ್ವಾತ್ ಸರ್ವಜ್ಞೋಽಸೌ ಯತೋ ವಿಭುಃ ।**
**ಭಕ್ತ್ಯಾದ್ಯಲಂಕೃತಾಃ ಸೋಮಾ ಮನಾಂಸ್ಯನ್ಯೇ ಹಿರಣ್ಮಯಾಃ ।**
**ಹಿರಣ್ಯಾಲಂಕೃತಾ ಯಸ್ಮಾದ್ಧೂಯಂತೇ ವಾಯವೇ ಸುತಾಃ ॥★॥**

**ತಾನ್ ಪಾಹಿ ಶ್ರುಧಿ ಚಾಹ್ವಾನಂ ಸ್ವಾತಂತ್ರ್ಯೇ ವ್ಯತ್ಯಯೋಽಪ್ಯಯಮ್ ।**
**ಮನೋಽಪಿ ಭೋಗ್ಯಮೀಶಸ್ಯ ಪ್ರೀತಿಮಾತ್ರೇಣ ಕೇವಲಮ್ ॥ ಋಗ್ಭಾಷ್ಯ೧/೨/೧**

**(ಟೀಕಾ - ದರ್ಶೇನ ದರ್ಶನೇನ ಜ್ಞಾನೇನ ತತ ಪೂರ್ಣ । ತೇಷಾಂ -ತಾನ್ ಸ್ವಾತಂತ್ರ್ಯೇ ವ್ಯತ್ಯಯಃ ತೇ ತ್ವದಧೀನಾನ್ ತಾನ್ ಇತ್ಯರ್ಥಃ । )**

''**ದರ್ಶತ**- ಓ ಅರಿವಿನ ಆಗರನೇ, **ವಾಯೋ**- ಓ ವಾಯುವೇ **ಆಯಾಹಿ**- ನೀನು ಬಾ. **ಇಮೇ ಸೋಮಾಃ** ನನ್ನೀ ಮನ ಹಾಗೂ ಮನದ ಒಲವುಗಳು, **ಅರಂಕೃತಾಃ** ಭಕ್ತಿಶ್ರದ್ಧೆಗಳಿಂದ ಶೋಭೆಗೊಂಡಿವೆ. **ತೇಷಾಂ (ತಾನ್)**

(ನಿನ್ನಧೀನವಾದ) ಆ ಮನವನ್ನು, ಮನದ ಒಲವುಗಳನ್ನು, ಪಾಹಿ (ಪಿಬ) ಸ್ವೀಕರಿಸು. (ತೇಷಾಂ) ನನ್ನ ಮನದ ಹವಂ ಶ್ರುಧಿ ಕರೆ ಕೇಳು. ದಯಮಾಡು.''

(ದೇವಗೃಹದ ಬಾಗಿಲು ತೆರೆದು ಬರುವಂತೆ ನನ್ನ ಮನದ ಕರೆ ಕೇಳಿ ಓಡಿ ಬಾ.)

**ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ**
**ಗಾಯತ್ರೀಂ ಭಾರತೀಂ ತಾಂ ಅಪಿ ಗರುಡಮನಂತಂ ಭಜೇ ರುದ್ರದೇವಮ್ ।**
**ದೇವೀಂ ವಂದೇ ಸುಪರ್ಣೀಂ ಅಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ**
**ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾಂಸ್ತದ್ಗುರೂನ್ ಮದ್ಗುರೂಂಶ್ಚ॥★॥**

'ಭಗವಂತ, ಶ್ರೀಭೂದೇವಿಯರು, ಬ್ರಹ್ಮವಾಯು, ಸರಸ್ವತೀಭಾರತೀ, ಗರುಡಶೇಷರುದ್ರ, ಸುಪರ್ಣೀವಾರುಣೀಪಾರ್ವತೀ, ಇಂದ್ರಕಾಮ ಮುಂತಾದ ಸಕಲ ದೇವತೆಗಳನ್ನು ಹಾಗೂ ಸಕಲ ಗುರುಗಳನ್ನು ವಂದಿಸುತ್ತೇನೆ' ಎಂದು ಅನ್ನಬೇಕು.

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥★॥**

'ಬ್ರಾಹ್ಮಣರಿಗೆ ಅನಾದಿಕಾಲದಿಂದಲೂ ಹಿತೈಷಿದೇವತೆಯಾದ ನಾರಾಯಣನಿಗೆ ನಮಃ. ಗೋಗಳಿಗೂ, ಬ್ರಾಹ್ಮಣರಿಗೂ ಹಿತವನ್ನು ಮಾಡುವ ದೇವರಿಗೆ ನಮಃ. ಸಮಸ್ತ ಜಗತ್ತಿನ ಸಾತ್ವಿಕರಿಗೆ ಹಿತಮಾಡುವ ಗೋವಿಂದಕೃಷ್ಣನಿಗೆ ನಮೋ ನಮಃ.'

ನಂತರ ಮೂರು ಬಾರಿ ಚಪ್ಪಾಳೆ ತಟ್ಟಿ ಹೊಸ್ತಿಲನ್ನು ಕಾಲಿನಿಂದ ಮೆಟ್ಟದೇ ಬಲಗಾಲಿನಿಂದ ಒಳಗೆ ಪ್ರವೇಶಿಸಬೇಕು.

ಪ್ರವೇಶಿಸುವಾಗ ಈ ಮಂತ್ರವನ್ನು ಪಠಿಸಿ ಅನುಸಂಧಾನಗೈಯಬೇಕು.

**ಓಂ [1]ಯಚ್ಚ ಕಿಂಚಿತ್ ಜಗತ್ ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।**

---

೨ ಬ್ರಹ್ಮಾತ್ಮದಾಸವ್ಯಾಖ್ಯಾ- ಕಿಂಚಿದೀಷನ್ಮನಾಗಲ್ಪೇ ಇತ್ಯಮರಃ । ಅಪಿ ವಾ ಇತ್ಯನೇನ ಯನ್ನ ದೃಶ್ಯತೇ ನಾಪಿ ಶ್ರೂಯತೇ ತತ್ ಸಮುಚ್ಚಿನೋತಿ । ಅಯಿ, ಪಂಚಭಿರ್ವೇದ್ಯೈಃ ಅನುಕ್ತಮಶ್ರೂಯಮಾಣಂ ವಸ್ತು ನಾಸ್ತಿ ಕಿಲ । ಸಾಮಾನ್ಯತೋಽಪೀತಿ ಪ್ರಕ್ಷಿಪ್ತಂ ಚೇತ್ ಸುಶ್ಲಿಷ್ಟಮ್ । ನ ಹಿ ಗಾಂಗಂ ವಾಲುಕಂ ವಿಶಿಷ್ಯೋಕ್ತಮ್ । ಅದೃಶ್ಯಮಾನಂ ತು ಶೇಷಾದ್ಯೈರಿತ್ಯೇವ । ನ ತು ಈಶಾದ್ಯೈರಪಿ । ಅಸತ್ವಾತ್ । ಚಃ ಅಪ್ಯರ್ಥೇ । (ಗೀ.ತಾ.) ಏಕಮಪಿ ಕರ್ಮ ಇತಿವತ್ ಅಭಿವ್ಯಾಪ್ತೌ ವಾ । ಸರ್ವಪದೇನ ಸ್ವಸ್ಯಾಪಿ ಗ್ರಹಣೇ

**ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥★॥**

**ಅಭಿಪ್ರಾಯ ಃ-** ಪ್ರತ್ಯಕ್ಷದಿಂದ ಕಂಡ, ಆಗಮದಿಂದ ಕೇಳಿಬಂದ ಮಹತ್ತಾದ, ಕ್ಷುದ್ರವಾದ ಎಲ್ಲ ಪದಾರ್ಥಗಳ ಒಳ ಹೊರಗೆ ದೇವರು ತುಂಬಿರುವ.

**ಅನ್ವಯ ಃ- ಕಿಂಚಿತ್ ಸರ್ವಂ ಯತ್ ಜಗತ್ ದೃಶ್ಯತೇ ಶ್ರೂಯತೇ ಅಪಿ ವಾ ತತ್ ಸರ್ವಂ ಅಂತರ್ಬಹಿಶ್ಚ ವ್ಯಾಪ್ಯ ನಾರಾಯಣಃ ಸ್ಥಿತಃ.**

'**ಕಿಂಚಿತ್** ಕ್ಷುದ್ರವಾದುದು **ಸರ್ವಂ** ಮಹತ್ತಾದುದು **ಯತ್ ಜಗತ್** ಯಾವುದೆಲ್ಲ **ದೃಶ್ಯತೇ** ಕಾಣುತ್ತದೋ **ಶ್ರೂಯತೇ** ಆಗಮಗಳಿಂದ (ಸಾಮಾನ್ಯ-ವಾಗಿ) ಕೇಳಿ ಬರುವದೋ **ಅಪಿ ವಾ** ಯಾವುದೆಲ್ಲ ಕಣ್ಣಿಗೂ ಕಾಣದೇ, ಆಗಮಗಳಿಂದಲೂ (ಪ್ರತ್ಯೇಕವಾಗಿ, ವಿಶೇಷವಾಗಿ) ಕೇಳಿಬಾರದೇ ಇರುವದೋ, **ತತ್ ಸರ್ವಂ** ಅದೆಲ್ಲವನ್ನೂ **ಅಂತರ್ಬಹಿಶ್ಚ** ಒಳ-ಹೊರಗೆ **ವ್ಯಾಪ್ಯ** (ವಿ-ತನ್ನಧೀನ-ವಾಗಿರುವಂತೇ) ವ್ಯಾಪಿಸಿ **ನಾರಾಯಣಃ** (ಪರಮ ಮಹದ್ರೂಪಿಯಾದ) ನಾರಾಯಣನು **ಸ್ಥಿತಃ** ಇರುವನು.'

ದೇವರು ಈ ದೇಗುಲದ ಒಳಗೆ ಎಲ್ಲೆಡೆ ತುಂಬಿದ್ದಾನೆ.

ಆತ ನಿಂತ ನೆಲ, ಸುತ್ತಣ ಗೋಡೆ, ಹೊರಗಣ ಬಾಗಿಲು, ಏರುವ ವೇದಿಕೆ, ಸುಂದರ ಮಂಟಪ, ಎತ್ತರದ ಸ್ತಂಭ, ನಿರ್ಮಲ ನೀರು, ಬಳಸುವ ಪಾತ್ರೆ, ಅರ್ಚಿಸುವ ಹೂ, ಅರ್ಪಿಸುವ ಹಣ್ಣು, ಪೂಸುವ ಗಂಧ, ಬೆಳಗುವ ದೀಪ, ಸೂಸುವ ಧೂಪ, ಮಾಡುವ ನೈವೇದ್ಯ, ಹಾಗೂ ಅರ್ಚನೀಯ ಪ್ರತಿಮೆ ಅದಕ್ಕೂ ಮಿಗಿಲಾಗಿ ಅರ್ಚಕನ ಅಂಗಾಂಗಗಳು ಹಾಗೂ ಹೃದಯಾಂತರಂಗ ಇವುಗಳಲ್ಲೆಲ್ಲ ಅಂತರ್ಯಾಮಿಯಾಗಿರುವನು.

ಇದೆಲ್ಲ ಅವನಧೀನ. ಇದಕ್ಕೆಲ್ಲ ಅವನೇ ನಿಯಾಮಕ. ಇದನ್ನೆಲ್ಲ ಅವನೇ ನಿರ್ಮಿಸಿದವ. ಅಂತೆಯೇ ಅವನಿಗಾಗಿ ಇದೆಲ್ಲ ಎಂಬ ಅನುಸಂಧಾನ ಪೂಜೆಯ ಪ್ರಧಾನವಾದ ಅಂಗ.

**ಓಂ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।**
**ಹವ್ಯವಾಡ್ ಜುಹ್ವಾಸ್ಯಃ ॥** (ಋಗ್ವೇದ ೧-೧೨-೬)

---

**ಬಾಧಕಾಭಾವಾತ್ ಸ್ವಸ್ಯಾಪಿ ಸ್ವಯಮೇವ ಅಂತರ್ಬಹಿಶ್ಚ । ಅಣೋರಣೀಯಾಂಸಂ ಮಹತೋ ಮಹೀಯಾಂಸಂ ಚ ಶುಶ್ರುವಿಮ ।**

ಅಭಿಪ್ರಾಯ :- ಹವಿಸ್ಸನ್ನು ದೇವತೆಗಳಿಗೆ ಸಮರ್ಪಿಸುವ ಅಗ್ನಿಯು ಅಗ್ನಿನಾಮಕ ತೇಜಃಪುಂಜ ದೇವರಿಂದ ತೇಜಸ್ಸನ್ನು ಪಡೆಯುತ್ತಾನೆ.

ಅನ್ವಯ :- ಕವಿಃ, ಗೃಹಪತಿಃ, ಯುವಾ, ಹವ್ಯವಾಟ್, ಜುಹ್ವಾಸ್ಯಃ ಅಗ್ನಿಃ ಅಗ್ನಿನಾ ಸಮಿಧ್ಯತೇ.

ಋಗ್ಭಾಷ್ಯೇ - ಯಸ್ಯಾಸ್ಯೇ ಹೂಯತೇ ಸೋಽಗ್ನಿಃ ಪರೇಶೇನ ಸಮಿಧ್ಯತೇ ॥

ಟೀಕಾ - ಯಸ್ಯಾಸ್ಯೇ ಹವಿಃ ಹೂಯತೇ ಸ ಜುಹ್ವಾಸ್ಯಃ । ಜುಹು ಹವನಾಧಿಕರಣಂ ಆಸ್ಯಂ ಯಸ್ಯೇತಿ । ಕವಿಃ ಸರ್ವಜ್ಞಃ, ಗೃಹಾಣಾಂ ಪತಿಃ ಗೃಹಪತಿಃ, ಯುವಾ ತರುಣಃ ಹವ್ಯವಾಟ್ ಅಗ್ನಿನಾ ಪರೇಶೇನ ತ್ವಯಾ ಸಮಿಧ್ಯತೇ ಸಂದೀಪ್ತೋ ಭವತಿ । ಅಗ್ನ್ಯಾದೀನಾಂ ದೀಪ್ತ್ಯಾದಿಗುಣಪ್ರದಸ್ತ್ವಂ ಇತಿ ಯಾವತ್ ।

''ಕವಿಃ ಎಲ್ಲವನ್ನು ಬಲ್ಲ, ಗೃಹಪತಿಃ ಮನೆಯನ್ನು ಕಾಪಾಡುವ, ಯುವಾ ತರುಣನಾದ, ಹವ್ಯವಾಟ್ ಹವಿಸ್ಸನ್ನು ಒಯ್ದು ದೇವತೆಗಳಿಗೆ ತಲುಪಿಸುವ, ಜುಹ್ವಾಸ್ಯಃ ಯಾವನ ಮುಖದಲ್ಲಿ ಹವಿಸ್ಸನ್ನು ಹೋಮಿಸುತ್ತೇವೆಯೋ ಅಂಥ ಅಗ್ನಿಃ ಅಗ್ನಿದೇವತೆಯು ಅಗ್ನಿನಾ ಸರ್ವೋತ್ತಮ ಅಗ್ನಿಯಾದ ಭಗವಂತನಿಂದ ಸಮಿಧ್ಯತೇ- ಬೆಳಗುತ್ತಾನೆ.''

(ಅಗ್ನಿಗೆ ಬೆಳಕು ಕೊಡುವ ದೇವರು ದೇವಗೃಹವನ್ನು ಬೆಳಗಲಿ ಎಂದಭಿಪ್ರಾಯ.)

ಒಳಗೆ ಹೋಗುತ್ತಲೇ ಈ ಮಂತ್ರದಿಂದ ದೀಪವನ್ನು ಬೆಳಗಬೇಕು.

ದೀಪದ ಅಭಿಮಾನಿಗಳು ನಕ್ಷತ್ರ ದೇವತೆಗಳು. ಅವರು ಬೆಳಗುವರು. ಮೇಲಾಗಿ ತ್ರೈಲೋಕ್ಯದ ಆಚೆಗೂ ಈಚೆಗೂ ಬೆಳಕು ಬೀರುವ ಲಕ್ಷ್ಮೀನಾರಾಯಣರು ದೀಪದಲ್ಲಿ ಇದ್ದು ಈ ಮಂದಿರವನ್ನೂ ಬೆಳಗುವರು ಎಂದು ಸ್ಮರಿಸಿ ಅವರನ್ನು ವಂದಿಸಬೇಕು.

### ವಿಘ್ನನಿವಾರಣ - ಭೂತೋಚ್ಚಾಟನ

ದ್ಯುಲೋಕ, ಅಂತರಿಕ್ಷ ಹಾಗೂ ಭೂಮಿಗಳಲ್ಲಿ ಬಗೆ ಬಗೆಯ ವಿಘ್ನಗಳು ಇರುವ ಸಂಭವವಿದೆ. ದ್ಯುಲೋಕಸ್ಥ ವಿಘ್ನಗಳನ್ನು ಕಣ್ಣೋಟದಿಂದ, ಅಂತರಿಕ್ಷದಲ್ಲಿರುವ ವಿಘ್ನಗಳನ್ನು ಹೂ ಚೆಲ್ಲಿ, ಭೂಮಿಯಲ್ಲಿರುವ ವಿಘ್ನಗಳನ್ನು ಕಾಲಿನ ಹಿಂಬಡವನ್ನು ಮೂರು ಸಲ ನೆಲಕ್ಕೆ ಬಡಿದು ಉಚ್ಚಾಟನೆ ಮಾಡಬೇಕು.

**ಅಪಸರ್ಪಂತು ಯೇ ಭೂತಾಃ ಯೇ ಭೂತಾ ಭುವಿ ಸಂಸ್ಥಿತಾಃ ।**
**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥★॥**

ಎಂಬ ಮಂತ್ರದಿಂದ ಮೂರು ಬಾರಿ ಚಪ್ಪಾಳೆ ತಟ್ಟಿ ಭೂತಗಳ ನಿವಾರಣೆ ಮಾಡಬೇಕು.

**ಶ್ಲೋಕಾರ್ಥ** :- 'ಭೂಮಿಯಲ್ಲಿರುವ ಯಾವ ಭೂತಗಳು ವಿಘ್ನಮಾಡುತ್ತವೋ ಅವುಗಳು ಶಿವನ ಆಜ್ಞೆಯಿಂದ ದೂರವಾಗಲಿ, ನಶಿಸಿ ಹೋಗಲಿ.'

ನಾರಾಚ ಮುದ್ರೆಯಿಂದ ಎಲ್ಲ ದಿಕ್ಕುಗಳನ್ನು ಬಂಧಿಸಬೇಕು

ಸಾಮಾನ್ಯವಾಗಿ ಸತ್ಕಾರ್ಯಗಳಿಗೆ ಬಗೆಬಗೆಯ ವಿಘ್ನಗಳು ನಿಶ್ಚಿತ.

ಎಡರುಗಳನ್ನು ತಂದಿಡುವವರು ಅಸುರರು, ಭೂತರು, ಪಿಶಾಚರು. ಅದರಲ್ಲೂ ದೇವತಾರ್ಚನೆ ಮುಂತಾದ ಸತ್ಕರ್ಮಗಳಿಗೆ ಸಾಕಷ್ಟು ವಿಘ್ನಕರ್ತರು ಇರುತ್ತಾರೆ.

ಅವರನ್ನು ಪರಿಹರಿಸಿಕೊಳ್ಳದಿದ್ದರೆ ದೇವತಾರ್ಚನೆಗೆ ವಿಘ್ನವಾಗುವದು ನಿಶ್ಚಿತ.

ಕಾರಣ ರುದ್ರದೇವ, ತದಂತರ್ಯಾಮಿ ವಾಯು, ತದಂತರ್ಯಾಮಿ ನೃಸಿಂಹದೇವರನ್ನು ವಿಘ್ನಗಳ ಪರಿಹಾರಕ್ಕಾಗಿ ಪ್ರಾರ್ಥಿಸಬೇಕು.

ಎಲ್ಲ ವಿಘ್ನಗಳ ನಿವಾರಣೆಗಾಗಿ 'ಪಾಂತ್ವಸ್ಮಾನ್' ಎಂಬ ಎರಡು ಶ್ಲೋಕಗಳನ್ನು ಪಠಿಸಬೇಕು. ರುದ್ರದೇವರು ತದಂತರ್ಯಾಮಿ ಭಾರತೀರಮಣ ಮುಖ್ಯ-ಪ್ರಾಣಾಂತರ್ಗತ ನರಸಿಂಹ ಈ ವಿಘ್ನಗಳನ್ನೆಲ್ಲ ಪರಿಹರಿಸಿ 'ಅರ್ಚನೆಗೆ ಅನುಕೂಲ ಮಾಡುವನು' ಎಂದು ಅನುಸಂಧಾನಿಸಬೇಕು.

## ಪ್ರಾರ್ಥನೆ

**ಲಕ್ಷ್ಮೀಕಾಂತ ನಮಸ್ತೇಸ್ತು ಸ್ವಾಮಿನ್ ಭೀತೋ ಭವಾಂಬುಧೇಃ ।**
**ಪೂಜಯಾಮ್ಯಹಮದ್ಯ ತ್ವಾಂ ಪ್ರಸೀದ ಪುರುಷೋತ್ತಮ ॥★॥**

'ಓ ಇಡಿಯ ಜಗತ್ತಿನೊಡೆಯ! ಓ ಸಿರಿಯರಸ! ಭಗವನ್ ! ನಿನಗೆ ನಮನ. ಸ್ವಾಮಿನ್! ಸಂಸಾರಸಾಗರದಿಂದ ನಾನು ಬಳಲಿ ಬೆಂಡಾಗಿರುವೆ. ಓ ಸರ್ವೇಶ ! ಸರ್ವೋತ್ತಮ ! ಇಂದು ನಾ ನಿನ್ನನ್ನು ಪೂಜಿಸುವೆ. ನನ್ನ ಮೇಲೆ ದಯೆ ತೋರು.'

**ತ್ವಾಮೇವ ಶರಣಂ ಯಾಮಿ ಶರಣಾಗತವತ್ಸಲ ।**
**ಕುರುಷ್ವ ಸಫಲಾಂ ಪೂಜಾಂ ಪೂಜಾರ್ಹಂ ಮಾಂ ಚ ಮಾಧವ ॥★॥**

'ಓ ಶರಣಾಗತವತ್ಸಲ ! ನೀನೇ ನನಗೆ ಶರಣು. ನನಗಿನ್ನಾರು ಗತಿಯಿಲ್ಲ. ಓ ಫಲಪ್ರದವಾಸುದೇವ ! ನಾ ಮಾಡುವ ಪೂಜೆಯನ್ನು ಸಫಲಗೊಳಿಸು.

ಸಿರಿಕರಪೂಜಿತನೇ ! ನಾನು (ಪಾಮರ,ಅಜ್ಞ, ಮೂಢ, ಕಾಮಾದಿಗಳಿಂದ ಬೆಂದವ, ಅಹಂಕಾರಿ, ನೃಶಂಸ, ಭಕ್ತಿಹೀನ,) ಪೂಜೆಗೈಯಲು ಏನೂ ಯೋಗ್ಯತೆ ಇಲ್ಲದವ. ನನ್ನನ್ನು ಯೋಗ್ಯನನ್ನು ಮಾಡು, ದಯೆ ತೋರು'

**ಕಾಯಿಕಾನ್ ವಾಚಿಕಾನ್ ದೋಷಾನ್ ಮಾನಸಾನಪಿ ಸರ್ವದಾ ।**
**ವೈಷ್ಣವದ್ವೇಷಹೇತೂನ್ ಮೇ ಭಸ್ಮಸಾತ್ ಕುರು ಮಾಧವ ॥★॥**

'ಬುದ್ಧಿಪೂರ್ವಕವೋ, ಅಬುದ್ಧಿಪೂರ್ವಕವೋ, (ತಿಳಿದೂ, ತಿಳಿಯದೆಯೊ) ಅಶಕ್ತಿಯಿಂದಲೂ, ಆಲಸ್ಯದಿಂದಲೂ, ದುರ್ಭಾವನೆಯಿಂದಲೂ ನಾನು ಮಾಡಿದ ದೈಹಿಕ ವಾಚಿಕ ಮಾನಸಿಕ ಅಪರಾಧಗಳನ್ನು ಕ್ಷಮಿಸು.

ಅದರಲ್ಲೂ ವಿಷ್ಣುವೈಷ್ಣವ ದ್ವೇಷದಿಂದ ಆದ ಹಾಗೂ ಅಂಥ ದ್ವೇಷವನ್ನು ನನ್ನಿಂದ ಮಾಡಿಸುವ ಪಾಪಗಳನ್ನು ಸುಟ್ಟು ಬೂದಿಮಾಡು.'

**ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।**
**ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಮಧುಸೂದನ ॥★॥**

'ಇರುಳು ಹಗಲು ಸಾವಿರ ಸಾವಿರ ಅಪರಾಧಗಳನ್ನು ನಾನು ಮಾಡುತ್ತಲಿರುವೆ. ಅವನ್ನೆಲ್ಲ ಕ್ಷಮಿಸು.'

**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।**
**ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷ ರಮಾಪತೇ ॥★॥**

'ನನಗೆ ಬೇರೊಬ್ಬರು ಗತಿಯಿಲ್ಲ. ನೀನೇ ಎನಗೆ ಶರಣು. ಆದುದರಿಂದ ಕರುಣೆಯಿಂದ ನನ್ನನ್ನು ಕಾಪಾಡು, ಕಾಪಾಡು.'

ಹೀಗೆ ಪುನಃ ಪುನಃ ತನ್ನ ದೋಷಗಳನ್ನು ವಿಜ್ಞಾಪಿಸಿ ಕ್ಷಮಿಸಲು ಪ್ರಾರ್ಥಿಸಬೇಕು. ದಯೆಯ ಕಡಲು ಭಗವಂತ. ವಿನಯದಿಂದ ಬಾಗಿ ಬೇಡಿದವರ ಪಾಪಗಳನ್ನು ಪರಿಹರಿಸುವನು. ಸಂದೇಹವಿಲ್ಲ.

ಮಾತ್ರ, ಪ್ರಾರ್ಥನೆಯ ಹಿನ್ನೆಲೆಯಲ್ಲಿ ಆರ್ತತೆಯ ಆಳವಿರಬೇಕು. ಪ್ರಾಮಾಣಿಕ ಉದ್ಧಾರಾಕಾಂಕ್ಷೆ ಇರಬೇಕು.

ನಾಲಿಗೆಯ ಭಾಷೆ ಸಾಲದು; ಮನಸ್ಸಿನ ಭಾವ ಬೇಕು. ಕೆಲವರು ಮಂತ್ರದಲ್ಲಿ ಮಾತ್ರ ಪಂಡಿತರು ಮನಸ್ಸಿನಲ್ಲಿ ಅಗಾಧರಲ್ಲ. (ಕೆಲವರಿಗೆ ಮನಸ್ಸೂ ಇಲ್ಲ ಮಂತ್ರವೂ ಇಲ್ಲ.)

**ಸತ್ಪತ್ರಗಂಧಪುಷ್ಪಾದ್ಯೈಃ ಅರ್ಚಯಾಮಿ ಯದಾ ಹರೇ ।**
**ಅನುಜ್ಞಾಂ ದೇಹಿ ದೇವೇಶ ಸಂಸಾರಾರ್ತಿನಿವೃತ್ತಯೇ ॥★॥**

**ಶ್ಲೋಕಾರ್ಥ :-** 'ಶಾಸ್ತ್ರವಿಹಿತವಾದ ಎಲೆ, ಗಂಧ, ಪುಷ್ಪ ಮುಂತಾದವುಗಳಿಂದ ನಿನ್ನನ್ನು ಸಂಸಾರದ ದುಃಖ ನೀಗುವದಕ್ಕಾಗಿ ಪೂಜಿಸುವೆನು. ಹೇ ದೇವತೆಗಳಿಗೊಡೆಯ! ನನಗೆ ಅನುಜ್ಞೆಯನ್ನು ಕೊಡು.'

## ಮನುಷ್ಯಗಂಧ ನಿವಾರಣ

ನಾವೆಲ್ಲರೂ ಮಾನವರು. ನಮ್ಮ ಶರೀರ ಮರ್ತ್ಯ, ದುರ್ಗಂಧಿ, ಕೊಳೆ ತುಂಬಿಹೊದದ್ದು.

ಭಗವಂತ ಅಪ್ರಾಕೃತ, 'ಪುಣ್ಯೋ ಗಂಧಃ' ಪರಮಾತ್ಮನೇ ಭಾಗ್ಯಸ್ವರೂಪ. ಅಂಥ ದೇವರ ಸನಿಹದಲ್ಲಿ ನಮ್ಮಂಥವರು ಹೋಗುವದು ಮಹಾಪರಾಧ.

ನಿಯಮದ ಪ್ರಕಾರ ಸಾಮಾನ್ಯ ದೇವತೆಗಳೇ ದುರ್ಗಂಧಿ ಮರ್ತ್ಯರಿಂದ ದೂರವಿರುವರು ಎಂದಮೇಲೆ ದೇವತಾಚೂಡಾಮಣಿಯಾದ ಭಗವಂತ ತೀರದೂರವಿರುವನು.

ಹಾಗಿದ್ದರೂ ನಾವು ದೇವರ ಸಮೀಪಕ್ಕೆ ಹೋಗದೇ ದೇವರನ್ನು ಪೂಜಿಸಲು ಸಾಧ್ಯವಿಲ್ಲ. ಆದ್ದರಿಂದ ಭಗವಂತನಿಗೆ ನಾವು ಕ್ಷಮೆಯನ್ನು ಯಾಚಿಸಬೇಕು.

**'ಓಂ ತೇಭ್ಯೋ ಹ ವೈ ದೇವಾ ಅಪೈವಾಬೀಭತ್ಸಂತ ಮನುಷ್ಯಗಂಧಾತ್ ತ ಏತೇ ಧಾಯ್ಯೇ ಅಂತರ್ ಅದಧತ '** (ಐತರೇಯಬ್ರಾಹ್ಮಣ ೩-೩೦-೩)

(ಮುಂದಿನ ಈ ಎರಡು ಮಂತ್ರಗಳು ದುರ್ಗಂಧವನ್ನು ಮರೆ ಮಾಡುವ ಮಧ್ಯದ ತೆರೆಯಂತೆ ಕೆಲಸ ಮಾಡುವವು.)

**ಅನ್ವಯ :-** ಮನುಷ್ಯಗಂಧಾತ್ ದೇವಾಃ ತೇಭ್ಯಃ ಅಪ ಅಬೀಭತ್ಸಂತ ತೇ ಏತೇ ಧಾಯ್ಯೇ ಅಂತರ್ ಅದಧತ.

''ಮನುಷ್ಯಗಂಧಾತ್ ಮಾನುಷದುರ್ಗಂಧದಿಂದಾಗಿ ದೇವಾಃ ಸುರರೆಲ್ಲ, ತೇಭ್ಯಃ ನರರಿಂದ ಅಪ ಅಬೀಭತ್ಸಂತ ಬೀಭತ್ಸೆಗೊಳ್ಳುತ್ತಾರೆ, ಜುಗುಪ್ಸೆಪಡುತ್ತಾರೆ. ಕಾರಣ, ತೇ ಏತೇ ಧಾಯ್ಯೇ ಮಧ್ಯ (ಜವನಿಕೆಯಂತೆ) ಸೇರಿಸುವ ಎರಡು ಮಂತ್ರಗಳನ್ನು ಅಂತರ್ ನಮ್ಮ ಹಾಗೂ ದೇವತೆಗಳ ಮಧ್ಯದಲ್ಲಿ ಅದಧತ-ಇಟ್ಟರು, (ಇಡಬೇಕು)''

ಓಂ ೩ಯೇಭ್ಯೋ ಮಾತಾ ಮಧುಮತ್ ಪಿನ್ವತೇ ಪಯಃ ಪೀಯೂಷಂ ದ್ಯೌರದಿತಿರದ್ರಿಬರ್ಹಾಃ । ಉಕ್ಥಶುಷ್ಮಾನ್ ವೃಷಭರಾನ್ ತ್ಸ್ವಪ್ನಸಸ್ತಾಂ ಆದಿತ್ಯಾ ಅನು ಮದಾ ಸ್ವಸ್ತಯೇ ॥ (ಋಗ್ವೇದ ೧೦-೬೩-೩)

**ಅಭಿಪ್ರಾಯ** ಕಾಂತಿಯುತಳಾದ ತಾಯಿ ಅದಿತಿದೇವಿ ಅಮೃತಹಾಲನ್ನು ಕುಡಿಸಿ ಬೆಳೆಸಿದ, ಶ್ಲಾಘನೀಯ ಬಲವುಳ್ಳ, ಭಕ್ತರಿಗೆ ಬಯಸಿದ್ದನ್ನು ಕರುಣಿಸುವ ಉತ್ತಮ ಕರ್ಮಗಳನ್ನು ಎಸಗುವ, ಸಂತಸವನ್ನೇ ಅನುಭವಿಸುವ ದೇವತೆಗಳು ನಮ್ಮ ಸೌಖ್ಯಕ್ಕಾಗಿ ಮುದಗೊಳ್ಳಲಿ.

ಅನ್ವಯ :- ಅದ್ರಿಬರ್ಹಾಃ ದ್ಯೌಃ ಮಾತಾ ಅದಿತಿಃ ಯೇಭ್ಯಃ ಮಧುಮತ್ ಪೀಯೂಷಂ ಪಯಃ ಪಿನ್ವತೇ, ತಾನ್ ಉಕ್ಥಶುಷ್ಮಾನ್ ವೃಷಭರಾನ್ ಸ್ವಪ್ನಸಃ ಆದಿತ್ಯಾನ್ (ಅಸ್ಮಾಕಂ) ಸ್ವಸ್ತಯೇ ಅನುಮದ.

''ಅದ್ರಿಬರ್ಹಾಃ ತಾನು ಬೆಳೆಸಿದ ವನಸ್ಪತಿಯಿಂದ ಜೀವರೆಲ್ಲರನ್ನು ಪೋಷಿಸುವ ಬೆಟ್ಟದಂತೆ, ತಾನು ಹೆತ್ತ ದೇವತೆಗಳಿಂದ ಜೀವರೆಲ್ಲರನ್ನು ಪೋಷಿಸುವ ದ್ಯೌಃ ಕಾಂತಿಮತಿಯಾದ ಮಾತಾ ತಾಯಿ ಅದಿತಿಃ ಅದಿತಿಯು ಯೇಭ್ಯಃ ಯಾವ ದೇವತೆಗಳಿಗೆ ಪಿಯೂಷಂ ಮಧುಮತ್ ಪಯಃ ಅಮೃತದಂತೆ ಸವಿಯಾದ ಹಾಲನ್ನು ಪಿನ್ವತೇ ಕುಡಿಸುತ್ತಾಳೋ (ಎಂದೆಂದಿಗೂ ದಿವ್ಯ ಸೌಖ್ಯದಲ್ಲೇ ಬೆಳೆದ (ಮಾನವರ ಅಸಹ್ಯವನ್ನು ಅನುಭವಿಸದ) ಉಕ್ಥಶುಷ್ಮಾನ್ ಶ್ಲಾಘನೀಯ ಶಕ್ತಿಶಾಲಿಗಳಾದ ವೃಷಭರಾನ್ (ಭಕ್ತರಿಗೆ) (ಸುರಿಯಬೇಕಾದದ್ದನ್ನು)

---

೩ ಬ್ರ.ವ್ಯಾಖ್ಯಾ- ಅದ್ರಿವತ್ ಪ್ರಜಾಃ ಬೃಂಹಯತಿ ಇತಿ ಅದ್ರಿಬರ್ಹಾಃ । ದ್ಯೌಃ ದ್ಯೋತಮಾನಾ । ಉಕ್ಥಂ ಸ್ತುತ್ಯಂ ಶುಷ್ಮಂ ಬಲಂ ಯೇಷಾಮ್ । ವೃಷಂ ವರ್ಷಣೀಯಂ ಭಕ್ತೇಭ್ಯೋ ದೇಯಂ ಹರಂತಿ ಆಹರಂತಿ ಇತಿ ವೃಷಭರಾಃ । ಹಸ್ಯ ಭಃ ಛಂದಸಿ । ಸ್ವಪ್ನಸಃ ಶೋಭನಾನಿ ಅಪ್ನಾನಿ ಆಪಃ ಕರ್ಮಾಣಿ ಯೇಷಾಮ್ । ಸುಖಮೇವ ಆಪ್ನುವಂತೋ ವಾ । ಮದ ಮಾದಯ ।

ಕೊಡಬೇಕಾದದ್ದನ್ನು ತರುವ ಸ್ವಪ್ನಸಃ ಉನ್ನತ ಕರ್ಮಗಳನ್ನಾಚರಿಸುವ, ಸುಖವನ್ನೇ ಹೊಂದಿದ ತಾನ್ ಆದಿತ್ಯಾನ್ ಆ ದೇವತೆಗಳನ್ನು ಸ್ವಸ್ತಯೇ ನಮ್ಮ ಸುಖಕ್ಕಾಗಿ ಅನುಮದ ಸಂತೋಷಗೊಳಿಸು.''

(ನಮ್ಮ ದುರ್ಗಂಧದಿಂದ ಅವರಿಗೆ ಪೀಡೆಯಾದರೆ ಶಾಪನೀಡುವರು. ಕಾರಣ, ನಮ್ಮ ಒಳಿತಿಗಾಗಿ ನಮ್ಮ ದುರ್ಗಂಧದಿಂದ ಅವರಿಗೆ ಪೀಡೆಯಾಗದಂತೆ ಮಾಡು.)

**ಓಂ [1]ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ। ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಮ್॥** (ಋಗ್ವೇದ ೪-೫೦-೬)

**ಅಭಿಪ್ರಾಯ :-** ಜಗದೊಡೆಯ ಇಷ್ಟಪ್ರದ ತಂದೆ ವಿಷ್ಣುವಿಗೆ ಮನಸ್ಸು, ದ್ರವ್ಯ ಹಾಗೂ ಕ್ರಿಯೆಗಳಿಂದ ಸೇವಿಸೋಣ. ಅದರಿಂದ ಕ್ರಿಯೆಯಲ್ಲಿ ಬಲವಂತರು, ದ್ರವ್ಯದಲ್ಲಿ ಸಿರಿವಂತರು, ಮನಸ್ಸಿನಲ್ಲಿ ಉನ್ನತ ಜ್ಞಾನವಂತರು ಆಗೋಣ.

**ಅನ್ವಯ :- ವಿಶ್ವದೇವಾಯ, ವೃಷ್ಣೇ ಪಿತ್ರೇ ಯಜ್ಞೈಃ (ತದುಪಲಕ್ಷಿತಕ್ರಿಯಾಭಿಃ) ಹವಿರ್ಭಿಃ (ತದುಪಲಕ್ಷಿತದ್ರವ್ಯೈಃ) ನಮಸಾ (ತದುಪಲಕ್ಷಿತಮನೋವೃತ್ತಿಭಿಃ) ವಿಧೇಮ ಏವ. ಹೇ ಬೃಹಸ್ಪತೇ! ವಯಂ (ಕ್ರಿಯಾಸು) ವೀರವಂತಃ (ವೀರ್ಯವಂತಃ) (ದ್ರವ್ಯೇಷು) ರಯೀಣಾಂ ಪತಯಃ, (ಮನಸಿ) ಸುಪ್ರಜಾಃ ಸ್ಯಾಮ.**

**ವಿಶ್ವದೇವಾಯ** ಜಗದೊಡೆಯ **ವೃಷ್ಣೇ** ಕಾಮಿತವನ್ನು ಕರುಣಿಸುವ **ಪಿತ್ರೇ** ತಂದೆಯಾದ ದೇವರನ್ನು **ಯಜ್ಞೈಃ** ಯಾಗಪೂಜೆಗಳಿಂದ (ಕ್ರಿಯೆಗಳಿಂದ) **ಹವಿರ್ಭಿಃ** ಹವಿಸ್ಸುಗಳಿಂದ (ದ್ರವ್ಯಗಳಿಂದ) **ನಮಸಾ** ನಮಸ್ಕಾರಗಳಿಂದ (ಮನಸ್ಸಿನಿಂದ) **ವಿಧೇಮ** ಸೇವೆ ಮಾಡುವೆವು.

**ಬೃಹಸ್ಪತೇ** ಹಿರಿಯೊಡೆಯ ಸರ್ವೋತ್ತಮ ! **ವಯಂ** ನಾವು **ವೀರವಂತಃ**- (ಕ್ರಿಯೆಯಲ್ಲಿ) ಬಲವಂತರು, **ರಯೀಣಾಂ ಪತಯಃ** (ದ್ರವ್ಯದಲ್ಲಿ) ಸಿರಿವಂತರು **ಸುಪ್ರಜಾಃ** (ಮನಸ್ಸಿನಲ್ಲಿ) ಉನ್ನತ ಜ್ಞಾನವಂತರು **ಸ್ಯಾಮ** ಆಗಬೇಕು.

---

[1] ಬ್ರ.ವ್ಯಾಖ್ಯಾ :- ವೃಷ್ಣೇ ಕಾಮಿತಸ್ಯ ವರ್ಷಯಿತ್ರೇ । ವಿಧೇಮ ವಿದಧಾತಿಃ ಪರಿಚರಣಕರ್ಮಾ । ಬೃಹತಾಂ ಪತೇ ಬೃಹಸ್ಪತೇ । ಪ್ರಕೃಷ್ಟತ್ವೇನ ಜನನಾತ್ ಪ್ರಜಾ ಇತಿ ಜ್ಞಾನಂ ಇತಿ ಐತರೇಯಭಾಷ್ಯೇ । ಪುತ್ರಸಂಯುಕ್ತಂ ವೀರ್ಯವತ್ತಮಮೇವ ವಾ ಇತಿ ಋಗ್ಭಾಷ್ಯಮ್ ।

(ದೇವತೆಗಳು ನಮ್ಮನ್ನು ದೂರಮಾಡಿದರೆ ಇದು ಸಾಧ್ಯವಿಲ್ಲ.)

ದುರ್ಗಂಧಪದಾರ್ಥದಲ್ಲಿ ಇದ್ದರೂ ದೇವರಿಗೆ ಕೆಟ್ಟವಾಸನೆಯಿಂದ ದುಃಖ-ವಿಲ್ಲವೆನ್ನುವದು ನಿಜ. ಹೀಗೆಂದ ಮಾತ್ರಕ್ಕೆ ದುರ್ಗಂಧಗಳ ಮಧ್ಯದಲ್ಲಿ ಇಡುವದು ಕ್ಷಮ್ಯವಲ್ಲ. ಆದ್ದರಿಂದ ಈ ಪ್ರಾರ್ಥನೆ.

ಬಳಿಕ ದೇವರಿಗೂ ನಮಗೂ ಮಧ್ಯದಲ್ಲಿ ಜವನಿಕೆಯನ್ನು (ತೆರೆಯನ್ನು) ಕಲ್ಪಿಸಬೇಕು. ನಂತರ ವೇದಿಕೆಯನ್ನು ಏರಿ ಕೂಡುವದು.

ಮುಂದೆ ಬ್ರಹ್ಮಪಾರಸ್ತವವನ್ನು ಪಠಿಸಬೇಕು. ಕಂಡುಋಷಿಗಳು ಕಂಡ ಸ್ತುತಿ ಅದು. ಅಮೋಘವಾದುದು. ಈ ಸ್ತವನದಿಂದ ಭಗವಂತನಿಗೆ ಅಪಾರ ಮೆಚ್ಚುಗೆಯಂತೆ, ಅಂತೆಯೇ ಇದನ್ನು ಭಕ್ತಿಯಿಂದ ಪಠಿಸಿದ ಮಾತ್ರಕ್ಕೆ ದೇವರು ತುಷ್ಟನಾಗಿ ಬ್ರಹ್ಮಹತ್ಯೆಯಂಥ ಮಹಾಪಾತಕವನ್ನು ಹೊಡೆದೋಡಿಸುವನು.

ಈ ಸ್ತುತಿ ಮನುಷ್ಯನಲ್ಲಿರುವ ರಾಗ, ದ್ವೇಷ, ಅಸೂಯೆ, ಅಹಂಕಾರ, ಮೋಹ, ಮಮತೆ ಮುಂತಾದವನ್ನು ದೂರಮಾಡಲು ಬಲು ಸಮರ್ಥವಾಗಿದೆ.

ಇದು ದೇವರ ಆರಾಧನೆಯ ಮುಖ್ಯಸಾಧನ. ಇದುವೇ ಪರಮಸಿದ್ಧಿಯ ತೀರ ಮುಖ್ಯಕಾರಣ. ಇದನ್ನು ಪಠಿಸದವ ಪೂಜೆಗೆ ಅಧಿಕಾರಿಯಲ್ಲ. ಇದನ್ನು ಜಪಿಸಿ, ದೋಷಮುಕ್ತನಾಗಿ ಪೂಜಿಸಬೇಕು. ಇದರಿಂದ ದೇವರಿಗೆ ಹೆಚ್ಚಿನ ಮೆಚ್ಚುಗೆ.

## ಬ್ರಹ್ಮಪಾರಸ್ತೋತ್ರದ ಅರ್ಥ

**ಪ್ರಚೇತಸಃ ಊಚುಃ-**

ಬ್ರಹ್ಮಪಾರಂ ಮುನೇ ಶ್ರೋತುಂ ಇಚ್ಛಾಮಃ ಪರಮಂ ಸ್ತವಮ್ ।
ಜಪತಾ ಕಂಡುನಾ ದೇವೋ ಯೇನಾಽರಾಧ್ಯತ ಕೇಶವಃ ॥★॥

'ಪ್ರಚೇತಸರು ಎಂದರು - ಬ್ರಹ್ಮರುದ್ರಾದಿಗಳ ಒಡೆಯನಾದ ದೇವ ಕೇಶವನನ್ನು ಮೆಚ್ಚಿಸಿದ ಕಂಡುಋಷಿಗಳು ಜಪಿಸಿದ ಬ್ರಹ್ಮಪಾರವೆಂಬ ಪರಮಸ್ತವವನ್ನು ಶ್ರವಣ ಮಾಡಲು ಇಚ್ಛಿಸುತ್ತೇವೆ.'

**ಸೋಮ ಉವಾಚ-**

ಪಾರಃ ಪರಂ ವಿಷ್ಣುರಪಾರಪಾರಃ ಪರಃ ಪರಾಣಾಮಪಿ ಪಾರಪಾರಃ ।
ಸ ಬ್ರಹ್ಮಪಾರಃ ಪರಪಾರಭೂತಃ ಪರಃ ಪರೇಭ್ಯಃ ಪರಮಾರ್ಥರೂಪೀ ॥★॥

'ಸೋಮನು ಉತ್ತರಿಸಿದನು - ಪರಂ (ತತ್ವಂ) ಪಾರೋ ವಿಷ್ಣುಃ ವಿಶ್ವದ ಪರತತ್ತ್ವವೇ ಪರಿಪೂರ್ಣ ವಿಷ್ಣುವು. ಅಪಾರಪಾರಃ ಇವನ ಪೂರ್ಣತೆಗೆ ಪರಿಮಿತಿಯಿಲ್ಲ. ಪರಾಣಾಮಪಿ ಪರಃ ಪಾರಪಾರಃ ದೇವತೋತ್ತಮರಾದ ಬ್ರಹ್ಮರುದ್ರಾದಿಗಳನ್ನು ಭವದ ಕಡಲಿನ ದಡಕ್ಕೆ ಪಾರುಗಾಣಿಸುವ ದೊರೆ ಈತ.

ಸಃ ಬ್ರಹ್ಮಪಾರಃ ಈ ಗುಣಪೂರ್ಣನೇ ಸಂಸಾರಸಾಗರದ ಆಚೆತೀರ. ಪರ(ತ್ವ)ಪಾರಭೂತಃ ಈತನೇ ಉತ್ತಮತ್ವದ 'ಸಾ ಕಾಷ್ಠಾ ಸಾ ಪರಾ ಗತಿಃ'. ಪರೇಭ್ಯಃ ಪರಃ ಪರಮಾರ್ಥರೂಪೀ ಏಕಾಂತಭಕ್ತರೆನಿಸಿದ ಉತ್ತಮರಿಗೆ ಲೋಕಾತೀತ ಪರಮಪುರುಷಾರ್ಥ. ಇಷ್ಟತಮ ಹೆದ್ದೈವ.'

**ಸ ಕಾರಣಂ ಕಾರಣತಸ್ತತೋಪಿ ತಸ್ಯಾಪಿ ಹೇತುಃ ಪರಹೇತುಹೇತುಃ ।**
**ಕಾರ್ಯೇಷು ಚೈವಂ ಸ ಹಿ ಕರ್ಮಕರ್ತೃರೂಪೈರಶೇಷೈರವತೀಹ ಸರ್ವಂ ॥**

**ಸಃ ಕಾರಣಂ** ಈತ ವಿಶ್ವದ ಕಾರ್ಯಗಳಿಗೆ ಕಾರಣ. **ಕಾರಣತಃ ಅಪಿ ತತಃ** ವಿಶ್ವದ ಕಾರ್ಯಗಳಿಗೆ ಕಾರಣವೆಂದು ಕಂಡವುಗಳಿಗಿಂತಲೂ ವ್ಯಾಪ್ತನಾಗಿರುವ. **ತಸ್ಯಾಪಿ ಹೇತುಃ** ಆ ಕಾರಣಗಳಿಗೂ ಇವನೇ ಕಾರಣ. **ಪರಹೇತುಹೇತುಃ** ಇದೆಲ್ಲದಕ್ಕೂ ಕಾರಣಳಾದ ಸಿರಿಗೂ ಕಾರಣ.

**ಸಃ ಹಿ ಕಾರ್ಯೇಷು (ಕರ್ತವ್ಯೇಷು ಕೃತೇಷು ವಾ ಸತ್ಸು) ಕರ್ಮಕರ್ತೃರೂಪೈಃ ಸರ್ವಂ ಅವತಿ** ಈ ದೇವರು ಕಾರ್ಯವನ್ನು ಹುಟ್ಟಿಸುವದಕ್ಕಿಂತ ಮುಂಚೆ ಹಾಗೂ ಹುಟ್ಟಿಸಿದ ಬಳಿಕ ಎಲ್ಲ ಕರ್ತೃ, ಕರ್ಮ, ಕರಣ, ಉಪಾದಾನ ಮುಂತಾದವುಗಳಲ್ಲಿ ಸ್ವಾಖ್ಯ ಕರ್ತೃಕರ್ಮಾದಿರೂಪಗಳಿಂದ ಪ್ರವೇಶಿಸುತ್ತಾನೆ ಹಾಗೂ ರಕ್ಷಿಸುತ್ತಾನೆ.

**ಬ್ರಹ್ಮಪ್ರಭುರ್ಬ್ರಹ್ಮ ಸ ಸರ್ವಭೂತೋ ಬ್ರಹ್ಮ ಪ್ರಜಾನಾಂ ಪತಿರಚ್ಯುತೋಽಸೌ ।**
**ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣುರಪಕ್ಷಯಾದ್ಯೈರಖಿಲೈರಸಂಗೀ ॥★॥**

**ಸಃ ಬ್ರಹ್ಮ** ದೇವರು ಗುಣಪೂರ್ಣ, **ಬ್ರಹ್ಮಪ್ರಭುಃ** ವಿಧಿಯೊಡೆಯ **ಸರ್ವಭೂತಃ** ಎಲ್ಲಕ್ಕೂ ಆಶ್ರಯ. **ಪ್ರಜಾನಾಂ ಬ್ರಹ್ಮ ಪತಿಃ** ಜೀವರೆಲ್ಲರಿಗೆ ಎಂದೆಂದಿಗೂ ಎಲ್ಲೆಲ್ಲೂ ಇರುವ ಗುಣಪೂರ್ಣನಾದ ಒಡೆಯ. ಅಥವಾ **ಬ್ರಹ್ಮಪ್ರಜಾನಾಂ ಪತಿಃ** ತನ್ನ ಭಕ್ತರ ಪಾಲಕ. **ಅಸೌ ಅಚ್ಯುತಃ** ಸರ್ವೋತ್ತಮಪದದಿಂದ ಚ್ಯುತನಲ್ಲ.

**ಸ ವಿಷ್ಣುಃ ಅವ್ಯಯಂ ಬ್ರಹ್ಮ** ಆ ದೇವರು ಎಂದಿಗೂ ಹ್ರಾಸವಾಗದೇ ಪೂರ್ಣನಾಗಿರುವವ. **ಅಜಂ** ಜನ್ಮವಿಲ್ಲದವ. **ನಿತ್ಯಂ** ನಾಶರಹಿತ. **ಅಪಕ್ಷಯಾದ್ಯೈಃ**

ಅಖಿಲೈಃ ಅಸಂಗೀ ಜೀವರಲ್ಲಿ ಜಗತ್ತಿನಲ್ಲಿ ಸನ್ನಿಹಿತನಾಗಿದ್ದರೂ ಅವರ ನಾಶಕ್ಲೇಶಗಳ ಸೋಂಕಿಲ್ಲದವ.

ಬ್ರಹ್ಮಾಕ್ಷರಮಜಂ ನಿತ್ಯಂ ಯಥಾऽಸೌ ಪುರುಷೋತ್ತಮಃ ।
ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ॥★॥

ಅಸೌ ಪುರುಷೋತ್ತಮಃ ಈ ಪುರುಷೋತ್ತಮನು ಅಕ್ಷರಂ ಅಜಂ ಜನ್ಮ ಕ್ಷಯ ಮರಣಗಳಿಲ್ಲದವ, ಬ್ರಹ್ಮ ಗುಣಪೂರ್ಣ ಎನ್ನುವುದು ಯಥಾ ನಿತ್ಯಂ ಎಷ್ಟು ಸತ್ಯವೋ ತಥಾ ಅಷ್ಟೇ ಸತ್ಯವಾಗಿ ಅಂಥ ಪುರುಷೋತ್ತಮನ ಅನುಗ್ರಹದಿಂದ ಮಮ ನನ್ನ ರಾಗಾದಯಃ ರಾಗದ್ವೇಷಾದಿ ದೋಷಾಃ ದೋಷಗಳೆಲ್ಲವೂ ಪ್ರಶಮಂ ಪ್ರಯಾಂತು ಕಳೆದು ಹೋಗಲಿ.'

ಏವಂ ವೈ ಬ್ರಹ್ಮಪಾರಾಖ್ಯಂ ಸಂಸ್ತವಂ ಪರಮಂ ಜಪನ್ ।
ಅವಾಪ ಪರಮಾಂ ಸಿದ್ಧಿಂ ಸ ಸಮಾರಾಧ್ಯ ಕೇಶವಂ ॥★॥

'ಇನಿತು ಬ್ರಹ್ಮಪಾರವೆಂಬ ಉತ್ತಮ ಸ್ತವವನ್ನು ಜಪಿಸುತ್ತಾ ಕಂಡುಋಷಿಗಳು ಕೇಶವನನ್ನು ಆರಾಧಿಸಿ ಪರಮಸಿದ್ಧಿಯನ್ನು ಪಡೆದರು.'

### ಘಂಟಾವಾದನ

ಘಂಟಾಕಿರೀಟದಂಡೇಷು ಸ್ವರೇ ನಾಲೇ ಕ್ರಮೇಣ ತು ।
ಬ್ರಹ್ಮಾಣಂ ಗರುಡಂ ನಾಗಂ ವಾಗ್ದೇವೀಂ ಚ ಪ್ರಜಾಪತಿಮ್ ॥★॥..

ಘಂಟೆಯಲ್ಲಿ ಬ್ರಹ್ಮದೇವರು, ಮೇಲಿನ ಕಿರೀಟದಲ್ಲಿ ಗರುಡ, ಮಧ್ಯದ ದಂಡದಲ್ಲಿ ನಾಗ, ಸ್ವರದಲ್ಲಿ ವಾಗ್ದೇವೀ, ನಾ(ಲ)ದದಲ್ಲಿ ಪ್ರಜಾಪತಿಗಳನ್ನು ಆವಾಹಿಸಿ ಅವರನ್ನು ವಂದಿಸಬೇಕು. ನಂತರ ಘಂಟೆಯನ್ನು ಬಾರಿಸಬೇಕು.

ಈ ಎಲ್ಲ ದೇವತೆಗಳ ಪ್ರೇರಣೆಯಿಂದ ಹಾಗೂ ಅನುಗ್ರಹದಿಂದ ಘಂಟಾನಾದದ ಫಲದೊರೆಯುವದು.

ಆರಂಭದ ಘಂಟಾನಾದದಿಂದ ದೇವತೆಗಳ ಮತ್ತು ದೈವೀಶಕ್ತಿಯ ಆಗಮನ ಹಾಗೂ ರಾಕ್ಷಸರ ದೂರೀಕರಣ ಆಗುವವು. ಕಂಚಿನ ಗಂಟೆಯನ್ನು ಬಾರಿಸದಿದ್ದರೆ ಸುತ್ತಮುತ್ತ ರಾಕ್ಷಸರು ಉಳಿಯುವರು. ಆದ್ದರಿಂದಲೇ ಕಂಚಿನ ಗಂಟೆಯನ್ನು ಬಾರಿಸುವದು ಅವಶ್ಯ ಎಂದು ಶಾಸ್ತ್ರ.

ನಂತರ ಜವನಿಕೆ(ತೆರೆ)ಯನ್ನು ಸರಿಸಬೇಕು.

## ಮಂಟಪಧ್ಯಾನ

ಉತ್ತಪ್ತೋಜ್ಜ್ವಲಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ
ಶುದ್ಧಸ್ಫಾಟಿಕಭಿತ್ತಿಕಾವಿಲಸಿತೈಃ ಸ್ತಂಭೈಶ್ಚ ಹೈಮೈಃ ಶುಭೈಃ ।
ಮುಕ್ತಾಜಾಲವಿಲಂಬಿಮಂಟಪಯುತಂ ವಜ್ರೈಶ್ಚ ಸೋಪಾನಕೈಃ
ನಾನಾರತ್ನವಿರಾಜಿತೈಶ್ಚ ಕಲಶೈರತ್ಯಂತಶೋಭಾವಹಮ್ ॥★॥

'ಪುಟಕ್ಕಿಟ್ಟು ತೆಗೆದುದರಿಂದ ಉಜ್ವಲವಾಗಿದೆ ಚಿನ್ನ. ಅಂಥ ಚಿನ್ನದಿಂದ ನಿರ್ಮಿತವಾಗಿದೆ ಎತ್ತರದ ಕಟ್ಟೆ. ಸುತ್ತಲೂ ಕೊಳೆ, ಕೊಳೆಚೆಗಳು ಇಲ್ಲದ ಸ್ಫಟಿಕದ ಗೋಡೆಗಳು. ಅವುಗಳಿಂದ ಭಾಸಮಾನವಾಗಿದೆ. ಚಿನ್ನದ ಶುಭಕೆತ್ತನೆಗಳ ಸ್ತಂಭಗಳಿಂದಲೂ ರಾಜಿಸುತ್ತಿದೆ. ತೂಗು ಹಾಕಿದ ಮುತ್ತಿನ ಜಾಲಗಳಿಂದ ಕಂಗೊಳಿಸುತ್ತಿದೆ ಮಂಟಪ. ಆ ಮಂಟಪಕ್ಕೆ ವಜ್ರದ ಸೋಪಾನಗಳು ಬೇರೆ. ವಿಧ ವಿಧ ರತ್ನಗಳಿಂದ ಖಚಿತವಾಗಿವೆ ಕಲಶಗಳು. ಅಂಥ ಕಲಶಗಳಿಂದ ಅತ್ಯಂತ ಶೋಭಿಸುತ್ತಿದೆ ಮಂಟಪ.'

ದ್ವಾರೈಶ್ಚಾಮರರತ್ನಜಾತಖಚಿತೈಃ ಶೋಭಾವಹಂ ಮಂಡಿತಂ
ರತ್ನಾಗ್ರ್ಯೈರಪಿ ಶಂಖಪದ್ಮಧವಲೈಃ ಪ್ರಭ್ರಾಜಿತಂ ಸ್ವಸ್ತಿಕೈಃ ।
ಮಾಣಿಕ್ಯೋಜ್ಜ್ವಲದೀಪದೀಪ್ತಿವಿಲಸಲ್ಲಕ್ಷ್ಮೀವಿಲಾಸಾಸ್ಪದಂ
ಧ್ಯಾಯೇನ್ಮಂಟಪಮರ್ಚನೇಷು ಸಕಲೇಷ್ವೇವಂವಿಧಂ ಸಾಧಕಃ ॥★॥

'ದಿವ್ಯರತ್ನಗಳ ಸಮೂಹಗಳಿಂದ ಖಚಿತವಾದ ಚಾಮರಗಳಿಂದ ಶೋಭಿಸುತ್ತಿವೆ ದ್ವಾರಗಳು. ಶಂಖಪದ್ಮಗಳಂತೆ ಬೆಳ್ಳಗಾದ ಶ್ರೇಷ್ಠ ರತ್ನಗಳಿಂದ ಭ್ರಾಜಿಸುತ್ತಿದೆ ಮಂಟಪ. ತ್ರಿಕೋಣಾಕಾರದಲ್ಲಿ ಕೆತ್ತಿದ ರತ್ನಗಳಿಂದಲೂ ಬೆಳಗುತ್ತಿವೆ. ಮಾಣಿಕ್ಯದ ಉಜ್ವಲದೀವಿಗೆಯ ದ್ಯುತಿಯಿಂದ ಕಂಗೊಳಿಸುತ್ತಿದೆ. ಸಂಪತ್ತಿನ ಒಡತಿಯಾದ ಸಿರಿಯ ಲೀಲಾಮಂದಿರವಾಗಿದೆ. ಹೀಗೆಂದು ಅರ್ಚಕನು ದೇವರ ಎಲ್ಲಾ ಅರ್ಚನೆಗಳಲ್ಲಿ ಮಂಟಪವನ್ನು ಧ್ಯಾನಿಸಬೇಕು.'

ನಂತರ ದೇವರಮಂಟಪವನ್ನು ಧ್ಯಾನಿಸಬೇಕು.

ಭಗವಂತನ ಮನೆಗೆ ಚಿನ್ನದ ಬಾಗಿಲು, ಹೊಳಪಿನ ರತ್ನದ ಕೆತ್ತನೆ, ಹೀರಕದ ಹಾರಗಳು, ಸ್ಫಟಿಕದ ಹೊಸ್ತಿಲು.

ಹೊರಪ್ರಾಕಾರದಲ್ಲಿ ಹಂಸ, ಶುಕ, ಪಿಕ ಮುಂತಾದ ಪಕ್ಷಿಗಳು ಇನಿದನಿ ಮಾಡುತ್ತಿವೆ. ವಿಹರಿಸುತ್ತಿವೆ.

ರಮ್ಯವಾದ ಕೆರೆಗಳಲ್ಲಿ ತಾವರೆ ಅರಳಿನಿಂತಿವೆ. ಸುಗಂಧ ಬೀರುತ್ತಿವೆ. ಎಲ್ಲೆಡೆಯೂ ಅಗರು, ಚಂದನ, ಕುಂಕುಮ, ಕಸ್ತೂರಿ ಮುಂತಾದವುಗಳ ಘಮಘಮ ಪರಿಮಳ ಆ ಪರಿಸರವನ್ನೇ ಸುರಭಿಗೊಳಿಸಿದೆ.

ಸಾಲು ಸಾಲು ರತ್ನದೀವಿಗೆಗಳು ಹೊಂಬೆಳಕಿನ ಹೊನಲು ಹರಿಸಿವೆ. ತಂಪನೆಯ ವಾಯು ಈ ಸುಗಂಧಿಗಳ ಆಮೋದವನ್ನು ಸುತ್ತ ಬಿತ್ತರಿಸಿದೆ.

ಒಳಗೆ ಹೋದಂತೆ ಪುಟಕ್ಕೆ ಹಾಕಿ ತೆಗೆದ ಹೊಳಪಿನ ಹೊನ್ನದ ಎತ್ತರವಾದ ವೇದಿಕೆ, ಸ್ಫಟಿಕದ ಗೋಡೆಗಳು, ಚಿನ್ನದ ಸ್ತಂಭಗಳು, ಮುತ್ತಿನ ಗೊಂಚಲುಗಳು, ವಜ್ರಸ್ಫಟಿಕಗಳ ಸೋಪಾನ, ರತ್ನಮಯ ಪೀಠ. ನವರತ್ನದ ಹಾರಗಳು. ಚಿನ್ನದ ಮಂಟಪ. ಚತುಸ್ತಂಭಗಳ ಮೇಲೆ ಮಂಟಪದ ಕಿರೀಟ, ಸ್ತಂಭಗಳಿಗೆ ಪರಮಧವಲ ಚಾಮರಗಳು ಅದಕ್ಕೆ ಹೂವಿನ ಅಲಂಕಾರ. ಸುತ್ತಲೂ ತೋರಣ.

ಇಂತಹ ಪೀಠದಲಿ ಭಗವಂತನ ಆಸನವು ಸಜ್ಜಾಗಿದೆ. ಸಿರಿಯರಸನ ಮಂಟಪ ಮತ್ತು ಪರಿಸರಗಳ ಶ್ರೀಮಂತಿಕೆಯನ್ನು ಹೀಗೆ ಕೇವಲ ಭಾವಶೀಲಮನಸ್ಸಿನಿಂದ ಭಕ್ತಪೂರ್ಣಹೃದಯದಿಂದ ವಾಸನಾಮಯವಾಗಿ ನಿರ್ಮಿಸಿದರೆ ಸಾಕು, ಶ್ರೀಹರಿ ಆನಂದದಿಂದುಬ್ಬಿನಲಿವ. ಮೆಚ್ಚಿಕುಣಿವ. ಭಾವವಿಲ್ಲದ ಬಂಗಾರ, ಪ್ರೇಮವಿಲ್ಲದ ಶೃಂಗಾರ ಭಗವಂತ ಎಂದೆಂದಿಗೂ ಒಲ್ಲ.

ಓಂ ${}^{\#}$ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।
ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥
(ಋ.೧೦-೭೧-೨)

ಅಭಿಪ್ರಾಯ :- ಜರಡಿಯಿಂದ ಹಿಟ್ಟು ಸ್ವಚ್ಛಮಾಡುವಂತೆ ಮನನ, ಚಿಂತನಗಳಿಂದ ಮಾತನ್ನು ಶೋಧಿಸಿ ಯಾವ ಧೀಮಂತರು ಭಗವಂತನ ಅನಂತ ಉಪಕಾರವನ್ನು ತಿಳಿದು ಉಪದೇಶಿಸುತ್ತಾರೋ, ಇಂಥ ಧೀಮಂತರ ವಾಣಿಯಲ್ಲಿ ಸಿರಿಯು ಭದ್ರವಾಗಿ ಇರುವಳು.

ಅನ್ವಯ :- ತಿತಉನಾ ಸಕ್ತುಮಿವ, ಮನಸಾ ವಾಚಂ ಪುನಂತಃ ಯೇ ಧೀರಾಃ ಯತ್ರ (ವಿಷ್ಣೌ) ಮನಸಾ ವಾಚಂ ಅಕ್ರತ ಅತ್ರ (ವಿಷ್ಣೌ) ಸಖಾಯಃ ಸಖ್ಯಾನಿ ಜಾನತೇ. ಏಷಾಂ ವಾಚಿ ಅಧಿ ಭದ್ರಾ ಲಕ್ಷ್ಮೀಃ ನಿಹಿತಾ.

# ಬ್ರ.ವ್ಯಾಖ್ಯಾ- ಚಾಲನೀ ತಿತಉಃ ಪುಮಾನ್ ಇತ್ಯಮರಃ । ತನೋತೇರ್ಡ ಉಃ ಸನ್ವಚ್ಚ ಇತ್ಯುಣಾದಿಸೂತ್ರಂ । ಭದ್ರಾ ಕಲ್ಯಾಣಕರೀ । ಮುಕ್ತಿದಾ ಇತಿ ಯಾವತ್ ।

'ತಿತಉನಾ ಸಕ್ತುಮಿವ ಜರಡಿ(ಚಾಲನಿ)ಯಿಂದ ಹಿಟ್ಟು ಸ್ವಚ್ಛ ಮಾಡುವಂತೆ ಮನಸಾ ಮನನಶೀಲಬುದ್ಧಿಯಿಂದ ವಾಚಂ ಪುನಂತಃ ಮಾತುಗಳನ್ನು ಶೋಧಿಸಿ ಯೇ ಧೀರಾಃ ಯಾವ ಧೀಮಂತರು ಯತ್ರ ಯಾವ ದೇವರ ಕುರಿತಾಗಿ ಮನಸಾ ತುಂಬು ಮನಸ್ಸಿನಿಂದ ವಾಚಂ (ಮಾತುಗಳನ್ನು ) ಉಪದೇಶಗಳನ್ನು ಅಕ್ರತ ಮಾಡಿದರೋ ಅತ್ರಾ ಆ ಭಗವಂತನ ಬಗೆಗೆ ಸಖಾಯಃ (ಈ ಮೊದಲೇ) ದೇವರಲ್ಲಿ ಸ್ನೇಹ ಉಳ್ಳ ಜನ ಸಖ್ಯಾನಿ ಜಾನತೇ ಭಗವಂತನ ನಾನಾಬಗೆಯ (ಗೆಳೆತನವನ್ನು) ಉಪಕಾರವನ್ನು ತಿಳಿಯುತ್ತಾರೆ.

ಏಷಾಂ ವಾಚಿ ಆ ಧೀಮಂತರ ಮಾತಿನಲ್ಲಿ ಭದ್ರಾ ಲಕ್ಷ್ಮೀಃ ಮುಕ್ತಿಯನ್ನು ದಯಪಾಲಿಸುವ ಸಿರಿಯು ನಿಹಿತಾ ಸನ್ನಿಹಿತಳಾಗಿರುವಳು.'

(ಮನನದಿಂದ ಮಾತಿನ ಕೊಳೆ ಕಳೆದಾಗ ದೇವರ ತಿಳಿವು ಮೂಡುವಂತೆ ದೇವರ ಮೇಲಿನ ಬಟ್ಟೆಯ ತೆರೆ ತೆರೆದಾಗ ದೇವರು ಕಾಣುವನು)

ಈ ಮಂತ್ರವನ್ನು ಅನ್ನುತ್ತ ದೇವರ ಮೇಲಿರುವ ವಸ್ತ್ರವನ್ನು ತೆಗೆಯಬೇಕು.

ಓಂ [೬]ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥★॥

ಅಭಿಪ್ರಾಯ :- ಓ ಸರ್ವಜ್ಞನೇ ! ಚಿನ್ನದಂಥ ಬಣ್ಣದ, ಚಿನ್ನಬೆಳ್ಳಿಗಳಿಂದ ಅಂದವಾದ, ಲೋಕಾತೀತ ಆನಂದಮಯ, ಆಹ್ಲಾದಕ, ನಿನ್ನ ಮೈ ಕಾಂತಿಯನ್ನು (ಅಥವಾ ಲಕ್ಷ್ಮೀದೇವಿಯನ್ನು) ತಂದು ತೋರು.

ಅನ್ವಯ :- ಹೇ ಜಾತವೇದಃ ! ಹಿರಣ್ಯವರ್ಣಾಂ ಸುವರ್ಣರಜತಸ್ರಜಾಂ ಚಂದ್ರಾಂ ಹಿರಣ್ಮಯೀಂ ಹರಿಣೀಂ ಲಕ್ಷ್ಮೀಂ ಮೇ ಆವಹ.

''ಲಕ್ಷ್ಮೀ ಎಂದರೇ ದೇವರ ದೇಹದ ಸ್ವರೂಪಕಾಂತಿಯು ಎಂದರ್ಥ. ಲಕ್ಷ್ಮೀಂ ಕಾಂತಿಯು ಹಿರಣ್ಯವರ್ಣಾಂ ಚಿನ್ನದ ಬಣ್ಣ ಉಳ್ಳದ್ದು. ಸುವರ್ಣ ರಜತಸ್ರಜಾಂ ಚಿನ್ನಬೆಳ್ಳಿಗಳ ಹಾರದಿಂದ ಚೆನ್ನು ಆಗಿರುವದು, ಚಂದ್ರಾಂ

೬ ಬ್ರ.ವ್ಯಾಖ್ಯಾ:- 'ಸಾಕ್ಷಾತ್ ಶ್ರೀಸ್ತು ಹರೇ ರೂಪಂ ಇಂದಿರಾ ತು ತದಾಶ್ರಯಾತ್' ಇತಿ ಭಾಗವತತಾತ್ಪರ್ಯೇ । ಹಿರಣ್ಯವರ್ಣಾಂ ಇತ್ಯನೇನ ಉದ್ಯದ್ಭಾಸ್ವತ್ಸಮಾಭಾಸಃ ಇತ್ಯಾಹ । ಹರಿಣೀ ಹರಿಸಂಬಂಧಿನೀ । 'ಚದಿ ಆಹ್ಲಾದನೇ' ಹಿರಣ್ಮಯೀಂ 'ಹಿರುಕ್ ಸುಖಂ ಹಿರಣ್ಯಂ ಸ್ಯಾತ್' ಇತಿ ಐತರೇಯ ಭಾಷ್ಯೇ । ಹಿರುಕ್ (ಲೋಕ) ವಿಲಕ್ಷಣಂ ಣಂ ಸುಖಮ್ । ಜಾತಂ ಜಾತಂ ವೇತ್ತಿ ಇತಿ ಜಾತವೇದಾಃ ॥

ನೋಡುವರ ಮನ ಆಹ್ಲಾದಿಸಿ ತಣಿಸುವದು, ಹಿರಣ್ಮಯೀಂ ಲೋಕಾತೀತ ಆನಂದಮಯವಾದುದು. ಹರಿಣೀಂ ಹರಿಯ ಸ್ವರೂಪಭೂತವಾದುದು. ಜಾತವೇದಃ ಎಲ್ಲವನ್ನು ತಿಳಿದ ಓ ಭಗವನ್ ಆ ನಿನ್ನ ಕಾಂತಿಯನ್ನು, ಮೇ ಆವಹ ನನ್ನೆದುರಿಗೆ ತಾ. ನನಗೆ ದರ್ಶನ ಮಾಡಿಸು.''

(ಪ್ರತಿಮೆಗಾಗಿ ಪ್ರತಿಮೆಯನ್ನು ನೋಡುತ್ತಿಲ್ಲ. ದೇವರ ದರ್ಶನಕ್ಕಾಗಿ ಪ್ರತಿಮೆಯಲ್ಲಿ ಪ್ರತೀಕ್ಷಿಸುತ್ತಿರುವದು ಅಲ್ಲವೇ? ಕಾರಣ, ದೇವರ ಸ್ವರೂಪ ಕಾಂತಿ ಕಣ್ಣಿಗೆ ಕಾಣುವಂತೆ ಕರುಣೆಯಾಗಲೆಂದು ಕೋರಿಕೆ.)

ಈ ಮಂತ್ರದಿಂದ ಪ್ರತಿಮೆಯನ್ನು ವೀಕ್ಷಿಸಬೇಕು.

**ಕೃಪಯೋತ್ಥೀಯತಾಂ ತಲ್ಪಾತ್ ತವ ಪೂಜಾಕ್ರಿಯಾ ಯತಃ ।**
**ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಾಭ್ಯಾಂ ಕೃಪಾನಿಧೇ ।**
**ಕರುಣಾರಸಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ॥★॥**

'ಓ ಶ್ರೀಹರಿ ! ಸಿರಿಯು ನಿನ್ನ ಪ್ರೇಮದ ಪುತ್ಥಳಿ. ತೋಳುಬಳ್ಳಿಯ ತೆಕ್ಕೆಯಲ್ಲಿ ಆವಳು ನಿನ್ನ ಬಂಧಿಸಿರುವಳು. ಶಯ್ಯೆಯಿಂದ ಎದ್ದೇಳು. ಸಿರಿಯ ತೋಳು ಬಂದಿಯನ್ನು ಬಿಟ್ಟೇಳು (ಮುಂಚ ಬಾಹುಲತಾಪಾಶಮ್).

ನಿನ್ನರ್ಚಿಸುವ ಹಂಬಲ ನನಗೆ. ನಿನ್ನೆಚ್ಚಿಸುವ ಆಸೆ ನನಗೆ. ಈ ಹಂಬಲ ನಿನ್ನ ಪ್ರೇರಣೆಯಿಂದ. ಈ ಆಸೆ ನಿನ್ನ ಪ್ರೀತಿಗಾಗಿ.'

'ಹೇ ಭಗವನ್ ! ದೀರ್ಘವೂ ವಿಶಾಲವೂ ಸೌಮ್ಯವೂ ಆದುದು ನಿನ್ನ ಕಣ್ಣು. ಅಂಥ ಕರುಣಾರಸಪೂರ್ಣವಾದ ಕಣ್ಗಳಿಂದ ನನ್ನನ್ನೋಡು. ಕರುಣೆಯ ಕಿರಣವನ್ನರಿಸು. ಎನ್ನನುದ್ಧರಿಸು'.

ಹೀಗೆಂದು ಕೈಜೋಡಿಸಿ, ಪ್ರಾರ್ಥಿಸಬೇಕು.

**ಓಂ ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।**
**ಉಪಪ್ರಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ ॥★॥**

ಅಭಿಪ್ರಾಯ :- ಸಿರಿಯ, ವೇದಗಳ, ಬ್ರಹ್ಮನ ಒಡೆಯನೇ! ನಮ್ಮ ಕುರಿತಾಗಿ ಬರಲು ಎದ್ದೇಳು. ಸ್ತುತಿಸುವ ನಾವು ನಿನಗೆ ಶರಣಾಗಿದ್ದೇವೆ. ವಿಪುಲಫಲದಾನ ಮಾಡುವ ದೇವತೆಗಳೂ ನಮ್ಮ ಸನಿಹ ಬರಲಿ. ಹೇ ಇಂದ್ರನೇ! ನೀನೂ ಸುಖದಿಂದ ನಮ್ಮ ಹವಿಸ್ಸನ್ನು ಭೋಗಿಸು. (ಋ.೧.೪೦.೧)

ಅನ್ವಯ :- ಹೇ ಬ್ರಹ್ಮಣಸ್ಪತೇ! ಉತ್ತಿಷ್ಠ. ದೇವಯಂತಃ ತ್ವಾ ಈಮಹೇ. ಸುಧಾನವಃ ಮರುತಃ ಉಪಪ್ರಯಂತು. ಹೇ ಇಂದ್ರ! ಸಚಾ ಪ್ರಾಶೂರ್ಭವ.

ಋಗ್ಭಾಷ್ಯ - ದೇವಯಂತಃ ಪೂಜಯಂತಃ ಸ್ತುವಂತೋಽತಿಕೃತಾಶನಃ । ಪ್ರಾಶೂಃ..

ಟೀಕಾ :- ''ಅಷ್ಟರ್ಚಮಿದಂ ಬ್ರಹ್ಮಣಸ್ಪತ್ಯಾದಿದೇವತಾಕಂ ಸೂಕ್ತಮ್ । ಅತ್ರ ದೇವಯಂತಃ ಪ್ರಾಶೂಃ ಇತಿ ಪದದ್ವಯಂ ವ್ಯಾಖ್ಯಾತಿ । ದೇವಯಂತಃ ಇತಿ ॥ ದೀವ್ಯತೇಃ ಘಙ್ । ದೇವಃ ಪೂಜಾ ಸ್ತುತಿರ್ವಾ । ತತಃ ತತ್ಕರೋತಿ ಇತಿ ಣಿಚ್ । ಅತಿಶಯೇನ ಕೃತಂ ಅಶನಂ ಭೋಜನಂ ಅನೇನ ಇತಿ ಅತಿಕೃತಾಶನಃ ಪ್ರಾಶೂಃ ಉಚ್ಯತೇ ಪ್ರಾಶ್ನಾತಿ ಇತಿ । ಹೇ ಬ್ರಹ್ಮಣಸ್ಪತೇ ! ವಿಷ್ಣೋ ವಾಯೋ ವಾ ಅಸ್ಮಾನ್ ಪ್ರತಿ ಆಗಂತುಂ ಉತ್ತಿಷ್ಠ । ಯತೋ ದೇವಯಂತಃ ವಯಂ ತ್ವಾಂ ಈಮಹೇ ಶರಣಂ । ಸುದಾನವಃ ಮರುತಶ್ಚ ಅಸ್ಮಾನ್ ಉಪಪ್ರಯಂತು । ಹೇ ಇಂದ್ರ ! ತ್ವಂ ಚ ಸಚಾ ಸುಖೇನೈವ ಅಸ್ಮದ್ಯಜ್ಞಸ್ಯ ಪ್ರಾಶೂಃ ಭವ ॥''

ಹೇ ಬ್ರಹ್ಮಣಸ್ಪತೇ ಅನಂತಗುಣಗಳುಳ್ಳವಳಾದುದರಿಂದ ಬ್ರಹ್ಮ ಎಂದು ಕರೆಯಲ್ಪಡುವ ರಮಾದೇವಿಯ ಪತಿಯೇ ! ಬ್ರಹ್ಮಣಸ್ಪತೇ ಅನಂತ ವೇದಗಳ ಒಡೆಯನೇ! ಬ್ರಹ್ಮಣಸ್ಪತೇ ಅಪರಿಚ್ಛಿನ್ನ ಪ್ರಕೃತಿಯ ನಿಯಾಮಕನೇ! ಬ್ರಹ್ಮಣಸ್ಪತೇ ಬ್ರಹ್ಮದೇವರ, ಸಕಲಜೀವರ ಸ್ವಾಮಿಯೇ! ನಮ್ಮನ್ನು ಕುರಿತು ಬರಲು ಉತ್ತಿಷ್ಠ-ಎದ್ದೇಳು. ದೇವಯಂತಃ (ದೇವ ಎಂದರೆ ಪೂಜೆ) ನಿನ್ನ ಪೂಜೆಯನ್ನು ಮಾಡುವ ನಾವು ತ್ವಾ ಈಮಹೇ ನಿನಗೆ ಶರಣು ಬರುವೆವು. ಸುದಾನವಃ ಶ್ರೇಷ್ಠವಾದುದನ್ನೆಲ್ಲ ಧಾರಾಳವಾಗಿ ದಯಪಾಲಿಸುವ ಮರುತಃ ಎಲ್ಲ ದೇವತೆಗಳು ಅಥವಾ ಮರುತರು (ಅಸ್ಮಾನ್) ಉಪಪ್ರಯಂತು ನಮ್ಮನ್ನು ಕುರಿತು ಬರಲಿ. ಹೇ ಇಂದ್ರ! (ತ್ವಂ ಚ) ನೀನೂ ಕೂಡ ಸಚಾ ಆನಂದದಿಂದಲೇ ಪ್ರಾಶೂಃ ಭವ ನಮ್ಮ ಯಜ್ಞದಲ್ಲಿಯ ಹವಿಸ್ಸನ್ನು ವಿಪುಲವಾಗಿ ಸ್ವೀಕರಿಸು.

ಭಗವಂತನನ್ನು ಎಬ್ಬಿಸಬೇಕು. ಪ್ರತಿಮೆಯನ್ನು ಎತ್ತಿ ಮಂಟಪದಲ್ಲಿ ಕೂಡಿಸಬೇಕು.

## ನಿರ್ಮಾಲ್ಯವಿಸರ್ಜನ

'ದೇವರ ಎಡಭಾಗದಲ್ಲಿ ರುದ್ರದೇವರಿದ್ದಾರೆ. ಅವರಿಗೆ ದೇವರ ನಿರ್ಮಾಲ್ಯಬೇಕು. ಅಂತೆಯೇ ತಲೆಯ ಮೇಲೆ ಪಾತ್ರೆಯನ್ನು ಧರಿಸಿ ನಿಂತಿರುವರು'. ಹೀಗೆಂದು ಅನುಸಂಧಾನಿಸಿ ಎಡಭಾಗದಲ್ಲಿಟ್ಟ ಪಾತ್ರೆಯಲ್ಲಿ ದೇವರ ನಿರ್ಮಾಲ್ಯವಾದ ಹೂತುಲಸಿಗಳನ್ನು ವಿಸರ್ಜಿಸಬೇಕು.

'ಅಹಂ ರುದ್ರೇಭಿಃ..' ಎಂಬ ಅಂಭೃಣೀಸೂಕ್ತವನ್ನು ನಿರ್ಮಾಲ್ಯವಿಸರ್ಜನ ಕಾಲದಲ್ಲಿ ಪಠಿಸಬೇಕು.

'ಸಹಸ್ರಶೀರ್ಷಾ ಪುರುಷಃ..' ಎಂಬ ಪುರುಷಸೂಕ್ತ ಮತ್ತು 'ಋಷಭಂ ಮಾ ಸಮಾನಾನಾಂ...' ಎಂಬ ಋಷಭಸೂಕ್ತದಿಂದ ನಿರ್ಮಾಲ್ಯಾಭಿಷೇಕವನ್ನು ಮಾಡಬೇಕು.

ಇದೇ ಸಮಯದಲ್ಲಿ ಲಕ್ಷ್ಮೀ ವಾಯು ಶೇಷಗರುಡರ ಪ್ರತಿಮೆಗಳಿಗೂ ನಿರ್ಮಾಲ್ಯವಿಸರ್ಜನ ಹಾಗೂ ಅಭಿಷೇಕಗಳನ್ನು ಮಾಡಬೇಕು.

ಕೆಲವರು ಇದರ ಜೊತೆಯಲ್ಲಿಯೇ ಶಂಖ, ಲಕ್ಷ್ಮೀಪ್ರತಿಮೆ ಮುಂತಾದವುಗಳಿಗೆ ಶ್ರೀಸೂಕ್ತ, ಅಂಭೃಣೀಸೂಕ್ತ ಮುಂತಾದವುಗಳಿಂದ ಹನುಮಂತ, ಮಧ್ವರ ಪ್ರತಿಮೆಗಳಿಗೆ ವಾಯುಸ್ತುತಿ, ಸುಂದರಕಾಂಡ, ಬಳಿತ್ಥಾಸೂಕ್ತ, ಪವಮಾನ, ಮಧ್ವವಿಜಯಗಳಿಂದ ಶುದ್ಧಾಭಿಷೇಕವನ್ನೂ ಮಾಡುತ್ತಾರೆ.

ಆದರೆ ಕೆಲವರು ಈಗ ಕೇವಲ ನಿರ್ಮಾಲ್ಯಾಭಿಷೇಕವನ್ನು ಮಾಡಿ, ಭಗವಂತನ ಪೂಜೆ ಆದ ಬಳಿಕವೇ ಶುದ್ಧಾಭಿಷೇಕವನ್ನು ಮಾಡುವರು. ಎರಡೂ ಸರಿಯೇ.

ಆದರೆ ಶುದ್ಧಾಭಿಷೇಕಕ್ಕಿಂತಲೂ ಮೊದಲು ಲಕ್ಷ್ಮೀ, ವಾಯು, ಶೇಷಾದಿ-ಪ್ರತಿಮೆಗಳಲ್ಲಿ ಆಯಾ ದೇವತೆಗಳನ್ನು ಆವಾಹಿಸುವದು ಅಗತ್ಯ.

ದೇವತೆಗಳನ್ನು ಆವಾಹಿಸುವಾಗ ಪ್ರತಿಮೆಗಳಲ್ಲಿ ತತ್ತ್ವನ್ಯಾಸ, ಮಾತೃಕಾ-ನ್ಯಾಸಗಳನ್ನು ಮಾಡಬೇಕು.

ಇಲ್ಲಿ ಕೆಲವು ತತ್ತ್ವಗಳನ್ನು ತಿಳಿಯುವದು ಅತ್ಯಗತ್ಯ.

ಲಕ್ಷ್ಮೀ, ವಾಯು, ಶೇಷ, ಗರುಡ, ಶಿವ, ದುರ್ಗಾ, ಸ್ಕಂದ, ಸೂರ್ಯ, ಚಂದ್ರ, ಗಣಪತಿ, ಮಂಗಳ, ಶನಿ ಮುಂತಾದ ಯಾವದೇ ದೇವತೆಗಳ ಪ್ರತಿಮೆಗಳನ್ನು ಪೂಜಿಸುವಾಗ ಆ ಪ್ರತಿಮೆಯಲ್ಲಿ ಅತಿಪ್ರಧಾನವಾಗಿ ಭಗವಂತನನ್ನೇ ಆವಾಹಿಸಿ ಪೂಜಿಸಬೇಕು.

ವಿಷ್ಣುವೇ ಸರ್ವೋತ್ತಮ. ಅವನೇ ಸ್ವತಂತ್ರ. ಮುಖ್ಯವಾಗಿ ಅವನೇ ಫಲಪ್ರದ. ಅವನೇ ಸರ್ವಾಂತರ್ಯಾಮೀ. ಅಂದ ಮೇಲೆ ಅವನನ್ನು ಸರ್ವೋತ್ತಮನೆಂದು, ಸ್ವತಂತ್ರನೆಂದು, ಸರ್ವಾಂತರ್ಯಾಮಿಯೆಂದು, ಸರ್ವ-ಸ್ವಾಮಿಯೆಂದು ಪೂಜಿಸದೇ ಈ ದೇವತೆಗಳನ್ನು ಪೂಜಿಸಿದರೆ ಏನು ಫಲ?

ಇದಕ್ಕೆ ವಿಪರೀತವಾಗಿ ದೇವರನ್ನು ಸರ್ವೋತ್ತಮ, ಸರ್ವಸ್ವಾಮಿ, ಸರ್ವಾಂತರ್ಯಾಮಿಯೆಂದು ನೆನೆಯದೆ ಲಕ್ಷ್ಮೀ, ವಾಯು ಮುಂತಾದ ಬೇರೆ ದೇವತೆಗಳನ್ನು ಭಜಿಸುವದು ಮಹಾ ಅನರ್ಥಸಾಧನ.

ಆದ್ದರಿಂದ ಲಕ್ಷ್ಮೀ, ಬ್ರಹ್ಮ, ವಾಯು, ಶೇಷ, ಗರುಡ, ಶಿವ, ದುರ್ಗಾ, ಸ್ಕಂದ, ಸೂರ್ಯ, ಚಂದ್ರ, ಗಣಪತಿ, ಮಂಗಳ, ಶನಿ, ಮುಂತಾದ ಎಲ್ಲ ದೇವತೆಗಳನ್ನೂ ಭಗವಂತನ ಅಧಿಷ್ಠಾನರು, ಭಗವಂತನ ಭಕ್ತರು, ಭಗವಂತನ ಅಧೀನರು, ಭಗವಂತನ ಪರಮಪ್ರಿಯರು ಎಂದೇ ಪೂಜಿಸತಕ್ಕದ್ದು.

ಇದಕ್ಕೆ ಹೊರತಾಗಿ ಅವರೇ ಸ್ವತಂತ್ರರು, ಸರ್ವೋತ್ತಮರು, ಸರ್ವಸ್ವಾಮಿ, ಸರ್ವಾಂತರ್ಯಾಮಿಗಳು ಎಂದಾಗಲಿ, ವಿಷ್ಣುವಿನ ಸಮಾನರು ಎಂದಾಗಲಿ, ವಿಷ್ಣುವಿನಿಂದ ಅಭಿನ್ನರು ಎಂದಾಗಲಿ ತಿಳಿದು ಅವರನ್ನು ಪೂಜಿಸಿದರೆ ಅಂಧಂತಮಸ್ಸು ಕಟ್ಟಿಟ್ಟದ್ದು. ಇದರಲ್ಲಿ ಸಂಶಯವಿಲ್ಲ.

**(ತಂತ್ರಸಾರಸಂಗ್ರಹ - ೩-೧೩೮/೧೪೧)**

**ದುರ್ಗಾಶಿವಸ್ಕಂದಸೂರ್ಯವಿನಾಯಕಮುಖಾನಪಿ ।**
**ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರೈಃ ಸ್ಮರನ್ ಹರಿಂ ॥★॥**

ದುರ್ಗಾ, ಶಿವ, ಸ್ಕಂದ (ಷಣ್ಮುಖ), ಸೂರ್ಯ, ಗಣಪತಿ ಮೊದಲಾದ ದೇವತೆಗಳನ್ನೂ ಅವರವರ ಮಂತ್ರದಿಂದ ಆಯಾ ದೇವತೆಗಳ ಪ್ರತಿಮೆಗಳಲ್ಲಿ ಆವಾಹಿಸಿ ಪ್ರತಿಷ್ಠಾಪಿಸಬೇಕು. ತದಂತಸ್ಥನಾಗಿ ದೇವರನ್ನೂ ಸ್ಮರಿಸಬೇಕು.

**ಗೋಲಕದ್ವಿತಯಂ ವಿಷ್ಣೋಃ ತ್ರಿತಯಂ ವಾಽಪಿ ಕೀರ್ತಿತಮ್ ।**
**ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ ಹರಿಮ್ ॥★॥**

ವಿಷ್ಣು, ರಮಾ, ವಾಯು ಎಂಬ ಈ ಮೂರು ದೇವತೆಗಳ ಪ್ರತಿಮೆಗಳಲ್ಲಿ ವಾಯು, ರಮಾ ಎಂಬ ಎರಡು ಗೋಲಕಗಳಲ್ಲಿ ಅಂತಃಸ್ಥನಾಗಿ ವಿಷ್ಣುವನ್ನು ಸ್ಮರಿಸಬೇಕು. ಸರಸ್ವತೀ, ಭಾರತೀ, ಶೇಷಗರುಡಾದಿ ಇತರ ದೇವತೆಗಳ ಪ್ರತಿಮೆಗಳಲ್ಲಿ ಆಯಾ ದೇವತೆ ಮೊದಲನೆಯ ಗೋಲಕ. ವಾಯು ಎರಡನೆಯ ಗೋಲಕ. ರಮಾ ಮೂರನೆಯ ಗೋಲಕ. ಅವರಲ್ಲಿ ಭಗವಂತ ಎಂದು ಸ್ಮರಿಸಿ, ಪ್ರತಿಷ್ಠಾಪಿಸಿ, ಪೂಜಿಸಬೇಕು.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ತಥಾ ।**

'ಅಹಂ ರುದ್ರೇಭಿಃ..' ಎಂಬ ಅಂಭೃಣೀಸೂಕ್ತವನ್ನು ನಿರ್ಮಾಲ್ಯವಿಸರ್ಜನ ಕಾಲದಲ್ಲಿ ಪಠಿಸಬೇಕು.

'ಸಹಸ್ರಶೀರ್ಷಾ ಪುರುಷಃ..' ಎಂಬ ಪುರುಷಸೂಕ್ತ ಮತ್ತು 'ಋಷಭಂ ಮಾ ಸಮಾನಾನಾಂ...' ಎಂಬ ಋಷಭಸೂಕ್ತದಿಂದ ನಿರ್ಮಾಲ್ಯಾಭಿಷೇಕವನ್ನು ಮಾಡಬೇಕು.

ಇದೇ ಸಮಯದಲ್ಲಿ ಲಕ್ಷ್ಮೀ ವಾಯು ಶೇಷಗರುಡರ ಪ್ರತಿಮೆಗಳಿಗೂ ನಿರ್ಮಾಲ್ಯವಿಸರ್ಜನ ಹಾಗೂ ಅಭಿಷೇಕಗಳನ್ನು ಮಾಡಬೇಕು.

ಕೆಲವರು ಇದರ ಜೊತೆಯಲ್ಲಿಯೇ ಶಂಖ, ಲಕ್ಷ್ಮೀಪ್ರತಿಮೆ ಮುಂತಾದವುಗಳಿಗೆ ಶ್ರೀಸೂಕ್ತ, ಅಂಭೃಣೀಸೂಕ್ತ ಮುಂತಾದವುಗಳಿಂದ ಹನುಮಂತ, ಮಧ್ವರ ಪ್ರತಿಮೆಗಳಿಗೆ ವಾಯುಸ್ತುತಿ, ಸುಂದರಕಾಂಡ, ಬಳಿತ್ಥಾಸೂಕ್ತ, ಪವಮಾನ, ಮಧ್ವವಿಜಯಗಳಿಂದ ಶುದ್ಧಾಭಿಷೇಕವನ್ನೂ ಮಾಡುತ್ತಾರೆ.

ಆದರೆ ಕೆಲವರು ಈಗ ಕೇವಲ ನಿರ್ಮಾಲ್ಯಾಭಿಷೇಕವನ್ನು ಮಾಡಿ, ಭಗವಂತನ ಪೂಜೆ ಆದ ಬಳಿಕವೇ ಶುದ್ಧಾಭಿಷೇಕವನ್ನು ಮಾಡುವರು. ಎರಡೂ ಸರಿಯೇ.

ಆದರೆ ಶುದ್ಧಾಭಿಷೇಕಕ್ಕಿಂತಲೂ ಮೊದಲು ಲಕ್ಷ್ಮೀ, ವಾಯು, ಶೇಷಾದಿ-ಪ್ರತಿಮೆಗಳಲ್ಲಿ ಆಯಾ ದೇವತೆಗಳನ್ನು ಆವಾಹಿಸುವದು ಅಗತ್ಯ.

ದೇವತೆಗಳನ್ನು ಆವಾಹಿಸುವಾಗ ಪ್ರತಿಮೆಗಳಲ್ಲಿ ತತ್ತ್ವನ್ಯಾಸ, ಮಾತೃಕಾ-ನ್ಯಾಸಗಳನ್ನು ಮಾಡಬೇಕು.

ಇಲ್ಲಿ ಕೆಲವು ತತ್ತ್ವಗಳನ್ನು ತಿಳಿಯುವದು ಅತ್ಯಗತ್ಯ.

ಲಕ್ಷ್ಮೀ, ವಾಯು, ಶೇಷ, ಗರುಡ, ಶಿವ, ದುರ್ಗಾ, ಸ್ಕಂದ, ಸೂರ್ಯ, ಚಂದ್ರ, ಗಣಪತಿ, ಮಂಗಳ, ಶನಿ ಮುಂತಾದ ಯಾವದೇ ದೇವತೆಗಳ ಪ್ರತಿಮೆಗಳನ್ನು ಪೂಜಿಸುವಾಗ ಆ ಪ್ರತಿಮೆಯಲ್ಲಿ ಅತಿಪ್ರಧಾನವಾಗಿ ಭಗವಂತನನ್ನೇ ಆವಾಹಿಸಿ ಪೂಜಿಸಬೇಕು.

ವಿಷ್ಣುವೇ ಸರ್ವೋತ್ತಮ. ಅವನೇ ಸ್ವತಂತ್ರ. ಮುಖ್ಯವಾಗಿ ಅವನೇ ಫಲಪ್ರದ. ಅವನೇ ಸರ್ವಾಂತರ್ಯಾಮೀ. ಅಂದ ಮೇಲೆ ಅವನನ್ನು ಸರ್ವೋತ್ತಮನೆಂದು, ಸ್ವತಂತ್ರನೆಂದು, ಸರ್ವಾಂತರ್ಯಾಮಿಯೆಂದು, ಸರ್ವ-ಸ್ವಾಮಿಯೆಂದು ಪೂಜಿಸದೇ ಈ ದೇವತೆಗಳನ್ನು ಪೂಜಿಸಿದರೆ ಏನು ಫಲ?

ಇದಕ್ಕೆ ವಿಪರೀತವಾಗಿ ದೇವರನ್ನು ಸರ್ವೋತ್ತಮ, ಸರ್ವಸ್ವಾಮಿ, ಸರ್ವಾಂತರ್ಯಾಮಿಯೆಂದು ನೆನೆಯದೆ ಲಕ್ಷ್ಮೀ, ವಾಯು ಮುಂತಾದ ಬೇರೆ ದೇವತೆಗಳನ್ನು ಭಜಿಸುವದು ಮಹಾ ಅನರ್ಥಸಾಧನ.

ಆದ್ದರಿಂದ ಲಕ್ಷ್ಮೀ, ಬ್ರಹ್ಮ, ವಾಯು, ಶೇಷ, ಗರುಡ, ಶಿವ, ದುರ್ಗಾ, ಸ್ಕಂದ, ಸೂರ್ಯ, ಚಂದ್ರ, ಗಣಪತಿ, ಮಂಗಳ, ಶನಿ, ಮುಂತಾದ ಎಲ್ಲ ದೇವತೆಗಳನ್ನೂ ಭಗವಂತನ ಅಧಿಷ್ಠಾನರು, ಭಗವಂತನ ಭಕ್ತರು, ಭಗವಂತನ ಅಧೀನರು, ಭಗವಂತನ ಪರಮಪ್ರಿಯರು ಎಂದೇ ಪೂಜಿಸತಕ್ಕದ್ದು.

ಇದಕ್ಕೆ ಹೊರತಾಗಿ ಅವರೇ ಸ್ವತಂತ್ರರು, ಸರ್ವೋತ್ತಮರು, ಸರ್ವಸ್ವಾಮಿ, ಸರ್ವಾಂತರ್ಯಾಮಿಗಳು ಎಂದಾಗಲಿ, ವಿಷ್ಣುವಿನ ಸಮಾನರು ಎಂದಾಗಲಿ, ವಿಷ್ಣುವಿನಿಂದ ಅಭಿನ್ನರು ಎಂದಾಗಲಿ ತಿಳಿದು ಅವರನ್ನು ಪೂಜಿಸಿದರೆ ಅಂಧಂತಮಸ್ಸು ಕಟ್ಟಿಟ್ಟದ್ದು. ಇದರಲ್ಲಿ ಸಂಶಯವಿಲ್ಲ.

**(ತಂತ್ರಸಾರಸಂಗ್ರಹ - ೩-೧೩೮/೧೪೧)**

**ದುರ್ಗಾಶಿವಸ್ಕಂದಸೂರ್ಯವಿನಾಯಕಮುಖಾನಪಿ ।**
**ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರೈಃ ಸ್ಮರನ್ ಹರಿಂ ॥★॥**

ದುರ್ಗಾ, ಶಿವ, ಸ್ಕಂದ (ಷಣ್ಮುಖ), ಸೂರ್ಯ, ಗಣಪತಿ ಮೊದಲಾದ ದೇವತೆಗಳನ್ನೂ ಅವರವರ ಮಂತ್ರದಿಂದ ಆಯಾ ದೇವತೆಗಳ ಪ್ರತಿಮೆಗಳಲ್ಲಿ ಆವಾಹಿಸಿ ಪ್ರತಿಷ್ಠಾಪಿಸಬೇಕು. ತದಂತಸ್ಥನಾಗಿ ದೇವರನ್ನೂ ಸ್ಮರಿಸಬೇಕು.

**ಗೋಲಕದ್ವಿತಯಂ ವಿಷ್ಣೋಃ ತ್ರಿತಯಂ ವಾಽಪಿ ಕೀರ್ತಿತಮ್ ।**
**ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ ಹರಿಮ್ ॥★॥**

ವಿಷ್ಣು, ರಮಾ, ವಾಯು ಎಂಬ ಈ ಮೂರು ದೇವತೆಗಳ ಪ್ರತಿಮೆಗಳಲ್ಲಿ ವಾಯು, ರಮಾ ಎಂಬ ಎರಡು ಗೋಲಕಗಳಲ್ಲಿ ಅಂತಃಸ್ಥನಾಗಿ ವಿಷ್ಣುವನ್ನು ಸ್ಮರಿಸಬೇಕು. ಸರಸ್ವತೀ, ಭಾರತೀ, ಶೇಷಗರುಡಾದಿ ಇತರ ದೇವತೆಗಳ ಪ್ರತಿಮೆಗಳಲ್ಲಿ ಆಯಾ ದೇವತೆ ಮೊದಲನೆಯ ಗೋಲಕ. ವಾಯು ಎರಡನೆಯ ಗೋಲಕ. ರಮಾ ಮೂರನೆಯ ಗೋಲಕ. ಅವರಲ್ಲಿ ಭಗವಂತ ಎಂದು ಸ್ಮರಿಸಿ, ಪ್ರತಿಷ್ಠಾಪಿಸಿ, ಪೂಜಿಸಬೇಕು.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ತಥಾ ।**

ಗೃಹ್ಣಂತಿ ದೇವತಾ ನೈತಾಂ ತತಃ ಸ್ಯಾದ್ದೇಶವಿಪ್ಲವಃ ।
ವ್ಯಾಧಿಚೋರಾದಿಭಿಸ್ತಸ್ಮಾತ್ ಅಂತರ್ಧ್ಯೇಯೋ ಹರಿಃ ಸದಾ ॥★॥

ಈ ರೀತಿ ಎರಡು ಅಥವಾ ಮೂರು ಗೋಲಕಗಳ ಅಂತರ್ಯಾಮಿಯಾಗಿರುವವನು ಎಂದು ಸ್ಮರಿಸಿ ಪ್ರತಿಷ್ಠಾಪಿಸದಿದ್ದರೆ ಅಥವಾ ಪೂಜಿಸದಿದ್ದರೆ ಆಸುರಪೂಜೆ ಎಂದಾಗುತ್ತದೆ. ಈ ಬಗೆಯ ಪೂಜೆಯನ್ನು ಆಯಾ ದೇವತೆಗಳು ಅನುಗ್ರಹಕ್ಕಾಗಿ ಸ್ವೀಕರಿಸುವದಿಲ್ಲ. ಇಷ್ಟು ಮಾತ್ರವಲ್ಲ, ಈ ಕಾರಣದಿಂದಲೇ ದೇಶವಿಪ್ಲವವೂ ಆಗುವದು. ರೋಗಭಯ, ಚೋರಭಯ ಮುಂತಾದ ನಾನಾವಿಧ ಪೀಡೆಗಳು ನಿಶ್ಚಿತ. ಅಂತೆಯೇ ಈ ಎಲ್ಲ ದೇವತೆಗಳ ಅಂತರ್ಯಾಮಿಯಾಗಿ ನಾರಾಯಣನನ್ನು ಸದಾ ಸ್ಮರಿಸಬೇಕು.

ವಿಷ್ಣುಭಕ್ತಿವಿಹೀನಸ್ಯ ಗತಿಃ ಸ್ಯಾನ್ನ ಶುಭಾ ಕ್ವಚಿತ್ ।
ಭಕ್ತಸ್ಯಾಪ್ಯನ್ಯದೇವೇಷು ತಸ್ಮಾತ್ ಧ್ಯೇಯೋ ಹರಿಃ ಸದಾ ॥★॥

ಇತರ ದೇವತೆಗಳಲ್ಲಿ ಭಕ್ತಿಯನ್ನು ಮಾಡಿದರೂ ವಿಷ್ಣುಭಕ್ತಿಯಿಲ್ಲದವನಿಗೆ ಶುಭಗತಿ ಆಗುವದಿಲ್ಲ. ಆದುದರಿಂದ ಎಲ್ಲ ದೇವತೆಗಳ ಅಂತರ್ಯಾಮಿಯಾಗಿ ದೇವರನ್ನು ಧ್ಯಾನಿಸಬೇಕು.

**(ತಂತ್ರಸಾರಸಂಗ್ರಹ - ೧-೭೧/೭೩)**

ಭಕ್ತಿಂ ಕೃತ್ವಾನ್ಯದೇವೇಷು ಬ್ರಹ್ಮರುದ್ರಾದಿಕೇಷ್ವಪಿ ।
ಸರ್ವೋತ್ಕರ್ಷಮವಿಜ್ಞಾಯ ವಿಷ್ಣೋರ್ಯಾತಿ ತಮೋ ಧ್ರುವಮ್ ॥★॥

ಬ್ರಹ್ಮವಾಯುರುದ್ರಾದಿ ಬೇರೆ ದೇವತೆಗಳಲ್ಲಿ (ಅರ್ಥಾತ್ ಯಾವುದೇ ಗುರುಗಳಲ್ಲಿ) ಭಕ್ತಿಯನ್ನು ಮಾಡಿದರೂ ವಿಷ್ಣುವಿನ ಸರ್ವೋತ್ತಮತ್ವಜ್ಞಾನವನ್ನು ಪಡೆಯದೇ ಅವನಲ್ಲಿ ಭಕ್ತಿಯನ್ನು ಮಾಡದೇ ಇದ್ದರೆ ಸದ್ಗತಿ ಆಗುವದು ಸಾಧ್ಯವೇ ಇಲ್ಲ. ಅಷ್ಟೇ ಅಲ್ಲ ಅಂಧಂತಮಸ್ಸೇ ನಿಶ್ಚಿತ.

ನ ಯಜ್ಞಾ ನ ಚ ತೀರ್ಥಾನಿ ನೋಪವಾಸವ್ರತಾನಿ ಚ ।
ದೈವತಾನಿ ಚ ಸರ್ವಾಣಿ ತ್ರಾತುಂ ತಂ ಶಕ್ನುಯುಃ ಕ್ವಚಿತ್ ॥★॥

ಎಷ್ಟೇ ಯಜ್ಞಗಳನ್ನು ಮಾಡಿದರೂ, ತೀರ್ಥಕ್ಷೇತ್ರಗಳನ್ನು ಅಲೆದರೂ, ಉಪವಾಸ ವ್ರತಗಳಿಂದ ಬೆಂಡಾದರೂ, ಮೂಲೆ ಮೂಲೆಯ ದೇವತೆಗಳನ್ನು ಕಂಡು ಹುಡುಕಿ ಪೂಜಿಸಿದರೂ ತಿಲಮಾತ್ರವೂ ಫಲವಿಲ್ಲ. ಈ ಮಾನವನನ್ನು ಯಾರೂ ಕಾಪಾಡಲಾರರು.

ಹರಿರ್ಹಿ ಸರ್ವದೇವಾನಾಂ ಪರಮಃ ಪೂರ್ಣಶಕ್ತಿಮಾನ್ ।
ಸ್ವತಂತ್ರೋऽನ್ಯೇ ತದ್ವಶಾ ಹಿ ಸರ್ವೇऽತಃ ಸ ಜಗದ್ಗುರುಃ ॥★॥

ಶ್ರೀಹರಿಯೇ ಸರ್ವದೇವತೆಗಳಿಗಿಂತ ಉತ್ತಮ. ಅನಂತಶಕ್ತಿಶಾಲಿ. ಅಂತೆಯೇ ಸ್ವತಂತ್ರ. ಅವನೇ ಜಗದ್ಗುರು. ಸಿರಿ ವಿಧಿ ಮುಂತಾದವರೆಲ್ಲ ಅವನಧೀನರು. ದುರ್ಬಲರು. ದಾಸರು.

**(ಗೀತಾಭಾಷ್ಯ ೭-೧೪)**

ಮತ್ಸಂಪತ್ಯಾ ತು ಗುರ್ವಾದೀನ್ ಭಜಂತೇ ಮಧ್ಯಮಾ ನರಾಃ ।
ಮದುಪಾಧಿತಯಾ ತಾಂಶ್ಚ ಸರ್ವಭೂತಾನಿ ಚೋತ್ತಮಾಃ ॥★॥

ಯಾವುದೇ ದೇವತೆಯ ಪೂಜೆಯನ್ನಾಗಲಿ, ಗುರುಗಳ ವಂದನೆಯನ್ನಾಗಲಿ ಆ ದೇವತೆ ಹಾಗೂ ಆ ಗುರುಗಳಲ್ಲಿ ಅಂತರ್ಯಾಮಿಯಾಗಿದ್ದ ಭಗವಂತನಿಗೆ ಮುಖ್ಯವಾಗಿ ಸಲ್ಲಿಸಬೇಕೇ ಹೊರತು ಕೇವಲ ಆ ದೇವತೆ, ಆ ಗುರುಗಳಿಗೆ ಸಲ್ಲಿಸತಕ್ಕದ್ದಲ್ಲ.

**(ಛಾಂದೋಗ್ಯಭಾಷ್ಯ ೧-೧)**

ಉಚ್ಚಕ್ರಮಾಂತಗತ್ವೇನ ಕುರ್ಯುಃ ಪೂಜಾಂ ಹರೇಸ್ಸದಾ ।
ಲಕ್ಷ್ಮ್ಯಾದೇಃ ಕ್ರಮಶಃ ಪೂಜಾಂ ಜ್ಞಾತ್ವಾ ಭಾಗವತಾ ಇತಿ ॥★॥

ಒಬ್ಬರ ಮೇಲೊಬ್ಬರೆಂಬಂತೆ ದೇವತೆಗಳಲ್ಲಿ ತಾರತಮ್ಯವನ್ನು ತಿಳಿದು ಅದರ ಅಂತಿಮಾವಧಿಯಾಗಿ 'ಸಾ ಕಾಷ್ಠಾ' ಎಂಬಂತೆ ಭಗವಂತನನ್ನು ತಿಳಿದು ಭಜಿಸಬೇಕು. ಅರ್ಥಾತ್ ಲಕ್ಷ್ಮೀ, ಬ್ರಹ್ಮ, ವಾಯ್ವಾದಿಗಳೆಲ್ಲರೂ ಶ್ರೀಹರಿಯ ದಾಸಾನುದಾಸರೆಂದು ತಿಳಿದರ್ಚಿಸಬೇಕು.

ಸ್ವತಂತ್ರಪೂಜ್ಯತಾಬುದ್ಧ್ಯಾ ನ ದದ್ಯುಃ ಕಿಂಚ ಕಸ್ಯಚಿತ್ ।
ಯದ್ಭಾಗವತಬುದ್ಧ್ಯೈವ ದತ್ತಂ ಬ್ರಹ್ಮಾದಯಃ ಸುರಾಃ ॥
ವೈದಿಕಾಃ ಪ್ರತಿಗೃಹ್ಣೀಯುಃ ಅಪಭ್ರಷ್ಟಾಸ್ತಥೇತರಾನ್ ॥★॥

ಲಕ್ಷ್ಮೀ, ಬ್ರಹ್ಮಾದಿಗಳು ಭಗವದಧೀನರಲ್ಲ. ಭಗವದ್ಭಕ್ತರಲ್ಲ. ಅವರೆಲ್ಲರೂ ಸ್ವತಂತ್ರವಾಗಿ ಪೂಜ್ಯರು ಎಂದು ತಿಳಿದು ಮಾಡಿದ ಅವರ ಅರ್ಚನೆ, ಯಜ್ಞ ತಪಸ್ಸು ಮುಂತಾದವುಗಳನ್ನು ಅವರು ಎಂದೆಂದಿಗೂ ಸ್ವೀಕರಿಸುವುದಿಲ್ಲ.

ಇಂಥ ಅರ್ಚನೆ, ಯಜ್ಞ, ತಪಸ್ಸುಗಳನ್ನು ಭಗವದ್ಭಕ್ತರಲ್ಲದ, ಬ್ರಹ್ಮ, ರುದ್ರ ಮುಂತಾದ ಹೆಸರುಗಳಿಂದಲೇ ಕರೆಯಲ್ಪಡುವ ಮಹಾದೈತ್ಯರು ಸೆಳೆದೊಯ್ಯುವರು.

ಆದ್ದರಿಂದ ಲಕ್ಷ್ಮೀ, ವಾಯು, ಶೇಷಾದಿ ಸಮಸ್ತದೇವತಾಪ್ರತಿಮೆಗಳಲ್ಲೂ ಶ್ರೀಹರಿಯೇ ಸರ್ವಪ್ರಧಾನವಾಗಿ ಅಧಿಷ್ಠಾತೃವು ಎಂದು ತಿಳಿದು ಅವನನ್ನೇ ಪರಮಮುಖ್ಯವಾಗಿ ಆವಾಹಿಸಿ ಪೂಜಿಸಬೇಕು.

ಭಗವಂತನ ಭಕ್ತರು ಭಗವಂತನ ಅಧಿಷ್ಠಾನರೆಂದಾಗಿ ಲಕ್ಷ್ಮೀ, ವಾಯ್ವಾದಿ ದೇವತೆಗಳನ್ನೂ ಆಯಾ ಪ್ರತಿಮೆಗಳಲ್ಲಿ ಪೂಜಿಸುವದು ಅವಶ್ಯಕ.

### ಗೋಲಕಚಿಂತನ

ಶ್ರೀಹರಿಯ ರಾಮ-ಕೃಷ್ಣಾದಿ ಯಾವುದೇ ಪ್ರತಿಮೆಗಳಲ್ಲಿ ಅಥವಾ ಅಗ್ನಿ ಮುಂತಾದ ಯಾವುದೇ ಅಧಿಷ್ಠಾನಗಳಲ್ಲಿ ಶ್ರೀಹರಿಯನ್ನು ಪೂಜಿಸಬೇಕಾದರೆ ಎರಡು ಅಥವಾ ಮೂರು ಗೋಲಕಗಳನ್ನು (ಎಂದರೆ ಅಧಿಷ್ಠಾನಗಳನ್ನು) ಚಿಂತಿಸಲೇಬೇಕು.

ವಿಷ್ಣು, ಲಕ್ಷ್ಮೀ, ವಾಯು ಈ ಮೂವರ ಪ್ರತಿಮೆಗಳಲ್ಲಿ ಆವಾಹಿಸಲ್ಪಡುವ ಭಗವಂತನಿಗೆ ಎರಡು ಗೋಲಕಗಳು.

ಶೇಷಗರುಡಾದಿ ಪ್ರತಿಮೆಗಳಲ್ಲಿ ನಾವು ಆವಾಹಿಸುವ ದೇವರಿಗೆ ಮೂರು ಗೋಲಕಗಳು.

ವಿಷ್ಣು, ಲಕ್ಷ್ಮೀ, ವಾಯು ಈ ಮೂವರ ಪ್ರತಿಮೆಗಳಲ್ಲಿ ವಾಯುದೇವರು ಮೊದಲನೆಯ ಗೋಲಕ. ಆ ವಾಯುಗೋಲಕದಲ್ಲಿ ಚಿನ್ಮಯ ಲಕ್ಷ್ಮೀದೇವಿಯು ಎರಡನೆಯ ಗೋಲಕವಾಗಿ ಇರುವಳು ಎಂದು ಧ್ಯಾನಿಸಬೇಕು.

ಆ ಚಿನ್ಮಯ ಲಕ್ಷ್ಮೀಗೋಲಕದಲ್ಲಿ ಅನಂತಗುಣಪೂರ್ಣ ಸಚ್ಚಿದಾನಂದಾತ್ಮ (ಬಿಂಬರೂಪೀ) ಭಗವಂತನು ಸನ್ನಿಹಿತನಾಗಿರುವನೆಂದು ಚಿಂತಿಸಬೇಕು.

ಶೇಷಾದಿ ಉಳಿದೆಲ್ಲ ದೇವತೆಗಳ ಪ್ರತಿಮೆಗಳಲ್ಲಿ, ಆಯಾ ದೇವತೆಗಳು ಮೊದಲನೆಯ ಗೋಲಕ, ವಾಯುದೇವರು ಎರಡನೆಯ ಗೋಲಕ, ಲಕ್ಷ್ಮೀದೇವಿಯು ಮೂರನೆಯ ಗೋಲಕ ಎಂದು ಧ್ಯಾನಿಸಬೇಕು.

ವಿನಾ ಪ್ರತೀಕಂ ಪ್ರಾಣಸ್ಯ ಸ್ಮರನ್ ನಿರಯಭಾಗ್ ಭವೇತ್ ।
ವಿನಾ ವಾಯುಂ ನ ಗೃಹ್ಣಾಮಿ ಯತ್ಕಿಂಚಿದ್ವಸ್ತು ಮೇ ಪ್ರಿಯಮ್ ॥★॥

ಲಕ್ಷ್ಮೀವಾಯುಗಳೆಂಬ ಗೋಲಕಗಳನ್ನು ಸ್ಮರಿಸದಿದ್ದರೆ ಭಗವಂತ ಆ ಪ್ರತಿಮೆಯಲ್ಲಿ ಎಂದೆಂದಿಗೂ ಸನ್ನಿಹಿತನಾಗುವದಿಲ್ಲ. ನಾವು ಮಾಡಿದ ಯಾವ

ಪೂಜೆಯನ್ನೂ ಸ್ವೀಕರಿಸುವದಿಲ್ಲ. ಅವನಿಗೆ ಅತ್ಯಂತ ಪ್ರಿಯವಾದ ಯಾವ ವಸ್ತುವನ್ನು ಸಮರ್ಪಿಸಿದರೂ ಅದನ್ನು ಕೈಗೊಳ್ಳುವದಿಲ್ಲ. ವಾಯು, ಲಕ್ಷ್ಮೀ ಅಧಿಷ್ಠಾನವನ್ನು ಬಿಟ್ಟು ಮಾಡುವ ಪೂಜೆಯು ಪರಮಾತ್ಮನಿಗೆ ಅತ್ಯಂತ ಅಪ್ರಿಯವಾದದ್ದು. ಇದರಿಂದಾಗಿ ನರಕಾದಿಗಳಾಗುವದು ನಿಶ್ಚಿತ.

ಆದ್ದರಿಂದ ಪ್ರತಿಯೊಂದು ಪ್ರತಿಮೆಯಲ್ಲಿ ವಾಯುದೇವರನ್ನು ಲಕ್ಷ್ಮೀದೇವಿಯನ್ನು ಧ್ಯಾನಿಸಿ ಅವರಲ್ಲಿ ಭಗವಂತನನ್ನು ಆವಾಹಿಸಬೇಕು.

ಬಳಿಕವೇ ಅಲ್ಲಿ ಭಗವಂತನು ಸನ್ನಿಹಿತನಾಗುವ, ಫಲಪ್ರದನಾಗುವ.

## ಗೋಲಕಚಿಂತನಕ್ರಮ

ಹೀಗಿರುವ ಕಾರಣ ಆಯಾ ಪ್ರತಿಮೆಗಳಲ್ಲಿ ಆವಾಹಿಸುವ ಕ್ರಮವನ್ನು ತಿಳಿಯಬೇಕು. ಮೊದಲು ಲಕ್ಷ್ಮೀಪ್ರತಿಮೆಯಲ್ಲಿ ಮಾಡುವ ಆವಾಹನ ಕ್ರಮ.

ಓಂ ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।
ಧ್ಯಾಯೇದ್ ಗದಾಽಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥★॥

ಎಂದು ವಾಯುದೇವರನ್ನು ಧ್ಯಾನಿಸಿ ಲಕ್ಷ್ಮೀಪ್ರತಿಮೆಯಲ್ಲಿ ಆವಾಹಿಸಬೇಕು.

''ನಾವು ಮುಖ್ಯಪ್ರಾಣದೇವರನ್ನು ಧ್ಯಾನಿಸಬೇಕು. ಅವರು ಇದೀಗ ಉದಿಸುವ ಸಹಸ್ರಾರು ಭಾನುಗಳಂತೆ ಭಾಸಮಾನರಾದವರು. ಶ್ರೀಹರಿಯ ತೊಡೆಯಲ್ಲಿ ವಿರಾಜಮಾನರಾದವರು. ಆ ದೇವರ ನಿತ್ಯಸ್ತುತಿಯಲ್ಲಿ ತೊಡಗಿದವರು.

ಒಂದು ಕೈಯಲ್ಲಿ ಗದೆ; ಇನ್ನೊಂದರಲ್ಲಿ ಅಭಯಮುದ್ರೆ. ಇನ್ನೆರಡು ಕೈಗಳಿಂದ ಬದ್ಧಾಂಜಲಿಯಾಗಿ ಭಗವಂತನನ್ನು ವಂದಿಸುತ್ತಿರುವರು.

ಭಕ್ತಿಯಿಂದ ಭಗವಂತನ್ನು ಭಜಿಸಲೋಸುಗ ಇಷ್ಟವಾದಂತೆ ಅನೇಕ ರೂಪಗಳನ್ನು ತಾಳಿದವರು. ಯಥೇಷ್ಟ ವಿಶಾಲವಾದ ದೇಹವುಳ್ಳವರು. ದೇವರ ಹಾಗೂ ತಮ್ಮಿಚ್ಛೆಯಂತೆ ಅನೇಕಾವತಾರಗಳನ್ನು ತಳೆದವರು. ಅನಂತ ಉನ್ನತ ಕರ್ಮಶಕ್ತಿಯಿರುವವರು. ಬಳಿಕ

ಓಂ ಕೌಶೇಯಪೀತವಸನಾಮರವಿಂದನೇತ್ರಾಂ
ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।
ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ
ಧ್ಯಾಯೇತ್ ವಿಧೀಶನುತಪಾದಯುಗಾಂ ಜನಿತ್ರೀಂ ॥★॥

ಎಂದು ಲಕ್ಷ್ಮೀಯನ್ನು ಧ್ಯಾನಿಸಿ ಆವಾಹಿಸಬೇಕು.

''ದೇವಿ ಮಹಾಲಕ್ಷ್ಮೀಯನ್ನು ನಾವೆಲ್ಲರೂ ಧ್ಯಾನಿಸಬೇಕು. ಆಕೆ ರೇಷ್ಮೆಯ ಪೀತಾಂಬರವನ್ನು ಧರಿಸಿರುವಳು. ತಾವರೆಯಂಥ ಕಣ್ಣು ಆಕೆಗೆ. ಅವಳ ಕೈ ಕಮಲದಂತೆ ಕೋಮಲ.

ಎರಡು ಕೈಗಳಲ್ಲಿ ಪದ್ಮಗಳನ್ನು ಇನ್ನೆರಡು ಕೈಗಳಲ್ಲಿ ಅಭಯ ವರ ಮುದ್ರೆಗಳನ್ನು ಧರಿಸಿರುವಳು. ಉದಿಸುವ ಅನಂತ ರವಿಗಳಂತೆ ತೇಜಃಪುಂಜಳು. ಭಗವಂತನ ತೊಡೆಯಲ್ಲಿ ಕುಳಿತವಳು. ಬ್ರಹ್ಮ ರುದ್ರ ಮುಂತಾದವರು ಇವಳ ಪಾದಗಳಿಗೆ ವಂದಿಸುವರು. ಇವಳೇ ಎಲ್ಲರ ತಾಯಿ.'' ಕೊನೆಯಲ್ಲಿ

ಓಂ ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್ ।
ಶಂಖಚಕ್ರಗದಾಪದ್ಮಧರೋ ಧ್ಯೇಯೋऽಹಮೀಶ್ವರಃ ॥★॥

ಎಂದು ನಾರಾಯಣನನ್ನು ಧ್ಯಾನಿಸಿ ಆವಾಹಿಸಬೇಕು.

ನಾರಾಯಣನ ಪ್ರಭೆ ಇದೀಗ ಉದಯಿಸುತ್ತಿರುವ ಭಾನುವಿನಂತೆ. ಜ್ಞಾನ, ಆನಂದ, ಬಲ, ಔದಾರ್ಯ ಮುಂತಾದ ಸದ್ಗುಣಗಳೇ ಆತನ ಮೂರ್ತಿ.

ಅವನಿಗೆ ನಾಲ್ಕು ಕೈಗಳು. ಅವುಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು (ಬಲದ ಮೇಲುಗೈ, ಎಡದ ಮೇಲುಗೈ, ಎಡದ ಕೆಳಗೈ, ಬಲದ ಕೆಳಗೈಗಳಲ್ಲಿ ಕ್ರಮವಾಗಿ) ಧರಿಸಿರುವನು.

ಹೀಗೆಂದು ಬಿಂಬರೂಪೀ ನಾರಾಯಣನನ್ನು ನೆನೆಯುವದು.

ಆಮೇಲೆ ಪ್ರಾರ್ಥನೆ. ''ಓ ಭಗವನ್ ! ಸಿರಿಯರಸ ! ನನ್ನೆದೆ ತಾವರೆಗದ್ದುಗೆಯ ದೇವ ! ಈ ಪ್ರತಿಮೆಯಲ್ಲಿ ಕಣ ಕಣಗಳಲ್ಲಿಯೂ ವ್ಯಾಪಿಸಿ ಮುಖ್ಯಪ್ರಾಣರಿದ್ದಾರೆ. ಅವರ ಎಲ್ಲ ಪರಮ ದಿವ್ಯ ಅಂಗಾಂಗಗಳಲ್ಲಿಯೂ ಅಂಶಾಂಶಗಳಲ್ಲಿಯೂ ಲಕ್ಷ್ಮೀದೇವಿ ವ್ಯಾಪಿಸಿ ಇದ್ದಾಳೆ.

'ಆ ಶ್ರೀದೇವಿ ನಿನ್ನ ನೆರೆಮೆಚ್ಚುಗೆಯ ಪ್ರತಿಮೆ. ಗುಣಪೂರ್ಣ. ನಿರ್ಮಲ, ಚಿನ್ಮಯೀ. ರಮಾದೇವಿಯೆಂಬ ಪ್ರತಿಮೆಯಲ್ಲಿ ರಮಾಂತರ್ಗತನಾದ ನಿನ್ನನ್ನಾವಾಹಿಸುವೆ.'

'ನೀನು ರಮಾದೇವಿಯ ನಿಯಾಮಕ, ಪಾಲಕ, ಸಾಕ್ಷಾದಾಶ್ರಯ, ಆಧಾರ, ಪ್ರೇರಕ, ಅವಳಿಗೆ ಅಸ್ತಿತ್ವವನ್ನು ದಯಪಾಲಿಸಿದವ, ರಮಾದಿನಾಮಕ, ಅವಳ ಆಕಾರದವ, ರಮೆಯಲ್ಲಿದ್ದರೂ ಅವಳ ಪಾರತಂತ್ರ್ಯ, ಅಪೂರ್ಣತ್ವ ಮುಂತಾದ ದೋಷಗಳಿಲ್ಲದವ, ಅವಳಿಂದ ಅಚಿಂತ್ಯ, ರಮೆಗಿಂತಲೂ ಅನಂತಮಡಿ ಮಿಗಿಲಾದವ, ರಮಾನಾಥ, ರಮೇಶ.'

ಹೀಗೆ ರಮಾದೇವಿಯ ಪ್ರತಿಮೆಯಲ್ಲಿ ವಾಯುವನ್ನು, ಬಳಿಕ ತದಂತರ್ಗತ ರಮಾದೇವಿಯನ್ನು ನಂತರ ತದಂತರ್ಗತ ನಾರಾಯಣನನ್ನು ಆವಾಹಿಸಬೇಕು.

ಇದೇ ತೆರನಾಗಿ ವಾಯುಪ್ರತಿಮೆಯಲ್ಲಿಯೂ ಮೊದಲು ವಾಯು ದೇವರನ್ನು, ನಂತರ ಲಕ್ಷ್ಮೀದೇವಿಯನ್ನು, ಕೊನೆಯಲ್ಲಿ ಭಗವಂತನನ್ನು

'ಓ ಭಗವನ್!.... ನೀನು ವಾಯುದೇವರಿಗೆ ನಿಯಾಮಕ, ಪಾಲಕ... ವಾಯ್ವಂತರ್ಗತನಾದ ನಿನ್ನನ್ನು ಆವಾಹಿಸುವೆ 'ಎಂದು ಅಂದು ಆವಾಹಿಸಬೇಕು.

ಹೀಗೆ ಶೇಷ, ಗರುಡ, ಶಿವ, ದುರ್ಗಾ, ಸ್ಕಂದ, ಇಂದ್ರ, ಸೂರ್ಯ, ಚಂದ್ರ, ಗಣಪತಿ, ಶನಿ ಮುಂತಾದ ದೇವತೆಗಳ ಪ್ರತಿಮೆಗಳಲ್ಲಿಯೂ ಮೊದಲು ಆಯಾ ದೇವತೆಗಳನ್ನು ಧ್ಯಾನಿಸಿ ಆವಾಹಿಸಬೇಕು.

ಆ ದೇವತೆಗಳಲ್ಲಿ ವಾಯುದೇವರನ್ನು, ಮುಂದೆ ಲಕ್ಷ್ಮೀದೇವಿಯನ್ನು ಧ್ಯಾನಿಸಿ ಆವಾಹಿಸಿ, ಅವರಲ್ಲಿ 'ಓ ಭಗವನ್! ಶೇಷದೇವರ ನಿಯಾಮಕನೂ,... ಶೇಷಾಂತರ್ಗತನಾದ ನಿನ್ನನ್ನು ಆವಾಹಿಸವೆ.' ಎಂದು ಅಂದು ಆವಾಹಿಸಬೇಕು.

ಹೀಗೆ ಆವಾಹಿಸಿದ ಬಳಿಕ ಶ್ರೀಸೂಕ್ತ, ಅಂಭೃಣಿಸೂಕ್ತ, ಲಕ್ಷ್ಮೀಹೃದಯ ವಾದಿರಾಜರ ಶ್ರೀ ಶ್ರೀಶಗುಣದರ್ಪಣ, ಯಾದವಾರ್ಯರ ಲಕ್ಷ್ಮೀಅಷ್ಟಕ ಮುಂತಾದ ಮಂತ್ರಗಳನ್ನು ಪಠಿಸಿ, ಲಕ್ಷ್ಮೀದೇವಿಯ ಅಭಿಷೇಕ ಮಾಡಬೇಕು.

ಆಮೇಲೆ ಪವಮಾನ, ಬಳಿತ್ಥಾಸೂಕ್ತ, ಸುಂದರಕಾಂಡ (ತಾತ್ಪರ್ಯ-ನಿರ್ಣಯ), ವಾಯುಸ್ತುತಿ, ಸುಮಧ್ವವಿಜಯ ಮುಂತಾದ ಮಂತ್ರಗಳಿಂದ ವಾಯುದೇವರ ಅಭಿಷೇಕಮಾಡಬೇಕು.

ಓಂ [೭]ಪಕ್ಷಿರಾಜಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।
ತನ್ನೋ ಗರುಡಃ ಪ್ರಚೋದಯಾತ್ ॥★॥

ಅನ್ವಯಃ :- ಪಕ್ಷಿರಾಜಾಯ (ಪಕ್ಷಿರಾಜಂ) ವಿದ್ಮಹೇ । ವಕ್ರತುಂಡಾಯ (ವಕ್ರತುಂಡಂ) ಧೀಮಹಿ । ತತ್ ಗರುಡಃ ನಃ (ಶುಭಂ) ಪ್ರಚೋದಯಾತ್ ।

ಪಕ್ಷಿರಾಜಾಯ (ಪಕ್ಷಿರಾಜಂ) ಪಕ್ಷಿಗಳಲ್ಲಿ ಶ್ರೇಷ್ಠನಾದ ಗರುಡನನ್ನು ವಿದ್ಮಹೇ ಶಾಸ್ತ್ರಗಳಿಂದ ತಿಳಿಯುತ್ತೇವೆ. ವಕ್ರತುಂಡಾಯ (ವಕ್ರತುಂಡಂ) ಧೀಮಹಿ ಬಾಗಿದ ಚುಂಚುವುಳ್ಳ ಗರುಡನನ್ನು ಧ್ಯಾನಿಸುತ್ತೇವೆ. ತತ್ ಆದುದರಿಂದ ಗರುಡಃ ಆ ಗರುಡನು ನಃ ನಮ್ಮನ್ನು ಕುರಿತು (ಶುಭಂ) ಭಕ್ತಿಜ್ಞಾನಾದಿಗಳೆಂಬ ಶುಭವನ್ನು ಪ್ರಚೋದಯಾತ್ ಪ್ರಚೋದಿಸಲಿ.

ಓಂ [೮]ತತ್ಪುರುಷಾಯ ವಿದ್ಮಹೇ ಸುವರ್ಣಪಕ್ಷಾಯ ಧೀಮಹಿ ।
ತನ್ನೋ ಗರುಡಃ ಪ್ರಚೋದಯಾತ್ ॥★॥

ಅನ್ವಯಃ :- ತತ್ಪುರುಷಾಯ (ತತ್ಪುರುಷಂ) ವಿದ್ಮಹೇ. ಸುವರ್ಣಪಕ್ಷಾಯ (ಸುವರ್ಣಪಕ್ಷಂ) ಧೀಮಹಿ ತತ್ ಗರುಡಃ ನಃ (ಶುಭಂ) ಪ್ರಚೋದಯಾತ್.

''ತತ್ಪುರುಷಾಯ (ತತ್ಪುರುಷಂ) ವಿದ್ಮಹೇ ಆ ದೇವರ ಪುರುಷನಾದ ಗರುಡನನ್ನು ಶಾಸ್ತ್ರಗಳಿಂದ ತಿಳಿಯುತ್ತೇವೆ. ಸುವರ್ಣಪಕ್ಷಾಯ ಧೀಮಹಿ ಚಿನ್ನದ ರೆಕ್ಕೆಯ ಗರುಡನನ್ನು ಧ್ಯಾನಿಸುತ್ತೇವೆ. ತತ್ ಆದುದರಿಂದ ಗರುಡಃ- ಆ ಗರುಡದೇವನು ನಃ- ನಮ್ಮನ್ನು ಕುರಿತು (ಶುಭಂ) ಶುಭವನ್ನು ಪ್ರಚೋದಯಾತ್ ಪ್ರೇರಿಸಲಿ.''

ಶೇಷಗರುಡರ ಮಂತ್ರಗಳಿಂದ ಅವರ ಅಭಿಷೇಕಮಾಡಬೇಕು.

---

೭ ಬ್ರ.ವ್ಯಾಖ್ಯಾ :- ರಾಜ್ಞಃ ಸ್ವಾಮಿನಃ ವಿಷ್ಣೋಃ ಪಕ್ಷಃ ಯುದ್ಧೇ ವಾದೇ ವಾ ಅಸ್ಯ ಅಸ್ತೀತಿ ರಾಜಪಕ್ಷೀ ಏವ ಪಕ್ಷಿರಾಜಃ । ಪಕ್ಷಿಣಾಂ ಸಿದ್ಧಾಂತಿನಾಂ ವಿಹಗಾನಾಂ ಚ ರಾಜಾ ಇತಿ ವಾ । ವಕ್ರಂ ತುಂಡಂ ಯಸ್ಯ, ವಕ್ರಾನ್ ಕುಟಿಲಾನ್ ಭುಜಗಾನ್ ವಾ ತುಂಡತೀತಿ ವಾ । ತುಡಿಧಾತೋರೇವ ಕನ್ನಡಃ ತುಂಡುಶಬ್ದಃ ।

೮ 'ಓಂ ತತ್ಸದಿತಿ' ಇತ್ಯುಕ್ತಸ್ಯ ತಸ್ಯ ಪುರುಷಃ । ತತಂ ಊರ್ಧ್ವಾ ಪುರು ಸರತಿ ಉಡ್ಡಯತೇ । ನ ಭೂಮೌ ಸರತಿ । ತೇನ ದೇವೇನೈವ ಉಪೋದ್ಬಲಿತಃ ಪುರು ಸರತಿ । ತಸ್ಯ ಪುರಃ ಸರಣಂ ಉ ಶೀಲಮಸ್ಯ । ಸುವರ್ಣಃ ವೇದಃ । 'ಛಂದೋಮಯೇನ ಗರುಡೇನ' ಇತಿ ಭಾಗವತಮ್ । 'ಗರುಡೋ ದೇವಪುರುಷಃ' ಇತಿ ಐ.ಭಾ.।

ಇಲ್ಲಿ ಇನ್ನೊಂದಂಶ.

ಲಕ್ಷ್ಮೀತೀರ್ಥವನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳುವದು ಶಾಸ್ತ್ರವಿಹಿತವಲ್ಲ.

ಆದುದರಿಂದ ರಮಾದೇವಿಗೆ ಅಭಿಷೇಕಮಾಡಿದ ಜಲವನ್ನು ಪ್ರೋಕ್ಷಣೆ ಮಾಡಿಕೊಂಡು ಬೇರೆ ಪಾತ್ರದಲ್ಲಿ ಹಾಕಬೇಕು.

ಶೇಷಗರುಡಾದಿಗಳ ಅಭಿಷೇಕಜಲವನ್ನೂ ಕೇವಲ ಪ್ರೋಕ್ಷಣೆ ಮಾಡಿ-ಕೊಳ್ಳಬೇಕು. ತೀರ್ಥಪ್ರಾಶನ ಮಾಡಬಾರದು.

ಆದರೆ ಮುಖ್ಯಪ್ರಾಣದೇವರ ತೀರ್ಥವನ್ನು ಮಾತ್ರ ಅವಶ್ಯವಾಗಿ ಸ್ವೀಕಾರ (ಪ್ರಾಶನ) ಮಾಡಬೇಕು.

ಅದಕ್ಕಾಗಿ ವಾಯುದೇವರ ತೀರ್ಥವನ್ನು ಪ್ರತ್ಯೇಕವಾಗಿ ಪಾತ್ರೆಯಲ್ಲಿ ತೆಗೆದಿಡುವದು ಆವಶ್ಯಕ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಮಹತ್ವದ ಸಂಗತಿ.

ಲಕ್ಷ್ಮೀ, ವಾಯು, ಶೇಷ, ಗರುಡ ಈ ದೇವತೆಗಳನ್ನು ಬಿಟ್ಟು ಇನ್ನಾವ ದೇವತೆಗಳನ್ನೂ ದೇವರ (ಪೂಜೆಯನ್ನು ಮಾಡುವಾಗ) ಎದುರಿನಲ್ಲಿ ಪೂಜಿಸ-ತಕ್ಕದ್ದಲ್ಲ.

ಶಿವ, ದುರ್ಗಾ, ನವಗ್ರಹ, ಗಣಪತಿ ಮುಂತಾದ ದೇವತೆಗಳ, ಋಷಿಗಳ ಹಾಗೂ ಪದ್ಮನಾಭತೀರ್ಥ, ಜಯತೀರ್ಥ, ವ್ಯಾಸರಾಜ, ವಾದಿರಾಜ, ರಘೂತ್ತಮ, ರಾಘವೇಂದ್ರ ಮುಂತಾದ ಎಲ್ಲ ಗುರುಗಳ ಪೂಜೆ, ಆರಾಧನೆಗಳನ್ನು ದೇವರ ಪೂಜೆ ಮುಗಿಸಿದ ಬಳಿಕವೇ ಮಾಡಬೇಕು.

ಇದಕ್ಕೆ ಹೊರತಾಗಿ ದೇವರ ಎದುರಿನಲ್ಲಿ ಲಕ್ಷ್ಮೀ, ವಾಯು, ಶೇಷ, ಗರುಡರಂತೆ ಉಳಿದ ದೇವತೆ, ಋಷಿ, ಗುರುಗಳ ಪೂಜೆಮಾಡುವದು ಶಾಸ್ತ್ರವಿರುದ್ಧವಾದದ್ದು.

ಅಂದರೆ ದೇವರ ಪ್ರತಿಮಾ, ಶಾಲಿಗ್ರಾಮಾದಿಗಳನ್ನು ಪೆಟ್ಟಿಗೆಯಲ್ಲಿ ಭುಜಂಗಿಸಿದ ಮೇಲೆಯೇ ಈ ಉಳಿದ ದೇವತೆಗಳ ಪೂಜೆ ಮಾಡಬೇಕು ಎಂದಭಿಪ್ರಾಯ.

ನಂತರ ಕುಳಿತಲ್ಲಿಯೆ 'ಅಪಕ್ರಾಮಂತು..' ಎಂದಂದು ಛೋಟಿಕಾ ಮುದ್ರೆಯಿಂದ (ಬೆರಳ ಚಿಟಕೆ ಬಾರಿಸಿ) ಭೂತೋಚ್ಚಾಟನವನ್ನು ಮಾಡಬೇಕು.

ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ ।
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ।
ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ ॥★॥

''ಓ ದೇವಿ, ನೀನೇ ಎಲ್ಲ ಲೋಕಗಳನ್ನು ಧರಿಸಿರುವಿ. ಓ ದೇವಿ, ನಿನ್ನನ್ನು ವಿಷ್ಣುವು ಧರಿಸಿರುವನು. ಓ ದೇವಿ, ನೀ ನನ್ನನ್ನು ಧರಿಸು, ನನ್ನ ಆಸನವನ್ನು ಪಾವನಗೊಳಿಸು. ಜೊತೆಯಲ್ಲಿ ನನ್ನನ್ನೂ ಪವಿತ್ರಮಾಡು. ನಾನು ನಿನಗೆ ಭಕ್ತಿಯಿಂದ ನಮಿಸುವೆ.'' ಎಂದಾಗಿ ಪೃಥ್ವಿಯನ್ನು ಪ್ರಾರ್ಥಿಸಬೇಕು.

## ಆಸನ ಸಿದ್ಧತೆ

ಕೆಳಗೆ ದರ್ಭೆಯ ಆಸನ, ಮೇಲೆ ಕೃಷ್ಣಾಜಿನ, ಅದರ ಮೇಲೆ ಬಟ್ಟೆ ಹೀಗೆ ಆಸನವನ್ನು ಸಜ್ಜುಗೊಳಿಸಬೇಕು.

ಬಳಿಕ 'ಪರಮಪುರುಷ, ಆಧಾರಶಕ್ತಿ ಮಂಡೂಕ, ಕೂರ್ಮ, ವರಾಹ, ಶೇಷ, ಕಾಲಾಗ್ನಿರುದ್ರ, ವಜ್ರ ಹಾಗೂ ಪೃಥಿವೀ' ಎಂಬ ದೇವತೆಗಳನ್ನು ಸ್ಮರಿಸಿ ವಂದಿಸಬೇಕು.

ಪೂರ್ವಾದಿ ದಿಕ್ಕುಗಳಲ್ಲಿ ಎಲ್ಲೆಲ್ಲೂ ಸುದರ್ಶನಚಕ್ರವು ನಿಂತು ರಕ್ಷಿಸುತ್ತಿದೆಯೆಂದು ಧ್ಯಾನಿಸಬೇಕು.

ನಂತರ ಪ್ರಾಣಾಯಮ ಮಾಡಿ ದೇಶಕಾಲ ಸಂಕೀರ್ತನ ಮಾಡಿ ಸಂಕಲ್ಪ ಮಾಡುವದು.

## ಸಂಕಲ್ಪ

ಅನಂತಕಲ್ಯಾಣಗುಣೈಕಸಿಂಧುಶ್ರೀವಿಷ್ಣುನಾ ಪ್ರೇರಿತಮಾನಸೋಽಹಮ್ ।
ತಸ್ಯೈವ ವೀರ್ಯೇಣ ಬಲೇನ ತೇಜಸಾ ಸಂಜೀವಿತಸ್ವಾಂತವಪುಶ್ಚಿದಿಂದ್ರಿಯಃ ॥

''ದೇವರ ಪ್ರೇರಣೆ ಇಲ್ಲದಿರೆ ಸಿರಿಗೂ, ವಿಧಿಗೂ, ವಾಯುವಿಗೂ ಸ್ಪಂದಿಸಲೂ ಸಾಧ್ಯವಿಲ್ಲ.

ಎಂದಮೇಲೆ ಇಡಿಯ ವಿಶ್ವದಲ್ಲಿ ಪರಮಕ್ಷುದ್ರರೂ, ಅತ್ಯಲ್ಪರೂ ಆದ ನಮ್ಮಂಥ ಜಂತುಗಳಿಗೆ ಎಲ್ಲಿಯ ಸಾಮರ್ಥ್ಯ?

ಆದ್ದರಿಂದ ಭಗವಂತನೇ ತಾನು ಸ್ವತಂತ್ರವಾಗಿ ಪ್ರೇರಿಸಿ, ತನ್ನಧೀನರಾದ, ನಮಗೆ ಒಡೆಯರಾದ ಲಕ್ಷ್ಮೀಬ್ರಹ್ಮಾದಿ ಸಕಲ ದೇವತೆಗಳಿಂದಲೂ ಪ್ರೇರಣೆ

ಮಾಡಿಸಿ ನಾವು ಮಾಡುವ ಎಲ್ಲ ತೆರನಾದ ಕರ್ಮಗಳನ್ನು ನಮ್ಮಿಂದ ಮಾಡಿಸುವನು.

ಪುರುಷೋತ್ತಮನ ಪ್ರೇರಣೆ ಇಲ್ಲವಾದರೆ ಯಾವ ಚೇತನನೂ ಏನೂ ಮಾಡಲು ಆರ.

ದೇವರ ಬಲದಿಂದ ನಮಗೆ ಬಲ.
ದೇವರ ವೀರ್ಯದಿಂದ ನಮ್ಮ ವೀರ್ಯ.
ಆತನ ತೇಜಸ್ಸಿನಿಂದ ನಮ್ಮ ತೇಜಸ್ಸು.
ಅವನು ಕ್ರಿಯೆ ಮಾಡಿದರೆ ನಮಗೆ ಕ್ರಿಯೆ.

ದೇವನ ಆಜ್ಞೆಯಿಂದ ಅವನಿತ್ತ ಬಲವೀರ್ಯಗಳಿಂದ ಅವನ ಪ್ರೀತ್ಯರ್ಥವಾಗಿ ದೇಹೇಂದ್ರಿಯಮನಃಪ್ರೇರಕನಾದ ಅವನು ನಡೆಸಿದಂತೆ ನಡೆದು ಅವನ ಪೂಜೆಯನ್ನು ನನ್ನ ಶಕ್ತ್ಯನುಸಾರವಾಗಿ ದೊರೆತ ಉಪಕರಣಗಳಿಂದ ಶ್ರೀಮದಾನಂದ-ತೀರ್ಥಭಗವತ್ಪಾದಾಚಾರ್ಯರ ತಂತ್ರಸಾರದಲ್ಲಿ ಆದೇಶಿಸಿದಂತೆ ಭಕ್ತಿಯಿಂದ ಪೂಜಿಸುವೆ' ಹೀಗೆ ಸಂಕಲ್ಪವನ್ನು ಮಾಡಬೇಕು.

★★★

## ನಾರಾಯಣಮಂತ್ರಜಪ

ಪೂಜೆ ಮಾಡುವದಕ್ಕೆ ಮೊದಲು ಅಧಿಕಾರಸಿದ್ಧಿಗಾಗಿ ''ನಾರಾಯಣ'' ಮಂತ್ರವನ್ನು ಜಪಿಸಬೇಕು.

ಅನೇಕರು ದೇವರ ಪೂಜೆಯನ್ನೇ ಮಾಡುವದಿಲ್ಲ. ಮಾಡುವವರೂ ಯಾಂತ್ರಿಕವಾಗಿ ಮಾಡಿ ಮುಗಿಸಿಬಿಡುತ್ತಾರೆ. ಕಾಡಾಟವೆಂದು ತಿಳಿಯುತ್ತಾರೆ. ಅವರಿಗೆ ಅದು ಅಪರಿಹಾರ್ಯಪೀಡೆ.

ಇನ್ನು ಕೆಲವರಿಗೆ ಪೂಜೆಯಲ್ಲಿ ಔದಾಸೀನ್ಯ. ಭಕ್ತಿಯಿಂದ ಅನುಸಂಧಾನವಿಟ್ಟು ಮಾಡುವವರು ಬಹಳ ವಿರಳ. ಬೇರೆ ಕಾಲದಲ್ಲಿ ಅಲ್ಪ ಸ್ವಲ್ಪ ವಿಶ್ವಾಸ ಇರುವವರಿಗೂ ಪೂಜೆಯ ಸಮಯದಲ್ಲಿ ತನ್ಮಯತೆ ಇರುವದಿಲ್ಲ.

ಆದರೆ ಭಕ್ತಿಯಿಲ್ಲದ ಬಗೆಯಿಂದ, ಶ್ರದ್ಧೆಯಿಲ್ಲದ ಹೃದಯದಿಂದ, ಏಕಾಗ್ರತೆ ಇಲ್ಲದ ಮನಸ್ಸಿನಿಂದ ಮಾಡಿದ ಪೂಜೆ ನಿಷ್ಫಲ. ತುಸು ಫಲ ದೊರಕಬೇಕಾದರೂ ತುಸುವೇ ಭಕ್ತಿಯು ಇರಲೇಬೇಕು.

ಭಕ್ತಿ ಇಲ್ಲದೆ ಅಶ್ರದ್ಧೆಯಿಂದ ಮಾಡಿದ ಪೂಜೆ ಅಸತ್ಪೂಜೆ; ಅಸತ್ಕರ್ಮ. ಇದು ನಿರರ್ಥಕಮಾತ್ರವಲ್ಲ. ಅನರ್ಥಕಾರಿಯೂ ಹೌದು.

**ಅಶ್ರದ್ಧಯಾ ಹುತಂ ಜಪ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ ಪ್ರೇತ್ಯ ನೋ ಇಹ ॥★॥**

ಅದಕ್ಕೆಂದೇ ನಾರಾಯಣಮಂತ್ರವನ್ನು ಜಪಿಸಲು ಹೇಳಿರುವರು. ಜಪವನ್ನು ಮಾಡುತ್ತಾ ಕ್ಷಣಬಿಡದೆ ಮನದಲ್ಲಿ ನೆನೆಯಬೇಕು.

'ದೇವರು ಸಚ್ಚಿದಾನಂದಾತ್ಮಾ. ಸತ್- ನಿರ್ದೋಷ. ಅಂದರೆ- ಅಸ್ವತಂತ್ರತೆ, ದುಃಖ ಮುಂತಾದ ದೋಷಗಳಿಲ್ಲದವ. (ಚಿತ್) ಅನಂತಜ್ಞಾನಘನ. (ಆನಂದ) ಅಮಿತ ಆನಂದಮಯ. (ಆತ್ಮಾ) ಸರ್ವಸ್ವಾಮಿ. ಮಮಸ್ವಾಮಿ.

'ಅಲ್ಲದೇ ಸಿರಿ ವಿಧಿ ಮುಂತಾದ ಎಲ್ಲರಿಗಿಂತಲೂ ಅನಂತ ಅನಂತ ಮಡಿ ಉತ್ತಮನಾದವ. ಅನಂತ ಗುಣ ರೂಪ ಕ್ರಿಯೆಗಳುಳ್ಳವ.

'ಇಡಿಯ ವಿಶ್ವದ ಹುಟ್ಟು, ಸಾವು, ಇರವು, ನಿಯಮನ, ಜ್ಞಾನ, ಅಜ್ಞಾನ, ಬಂಧನ, ಮೋಚನಗಳನ್ನು ಕೊಡುವ ಮಹಾ ದೊರೆ.

‘ಎಲ್ಲ ಅಚೇತನಗಳಿಗೂ ಮುಕ್ತಾಮುಕ್ತ ಚೇತನರಿಗೂ ಹಿರಿಯೊಡೆಯ. ಸ್ವತಂತ್ರ. ಎಲ್ಲರಿಗೆ ಅಸ್ತಿತ್ವವನ್ನು ಕೊಟ್ಟವ. ಸರ್ವನಿಯಾಮಕ, ಪ್ರೇರಕ, ರಮಾಬ್ರಹ್ಮಾದಿಗಳೆಲ್ಲರಲ್ಲಿದ್ದು ಆಯಾ ಕ್ರಿಯೆಗಳನ್ನು ಮಾಡಿಸುವವ.

‘ಅಣುರೇಣುವನ್ನಾರಂಭಿಸಿ ಇಡಿಯ ಬ್ರಹ್ಮಾಂಡ, ಅದರ ಹೊರ ಆವರಣಗಳನ್ನು, ಸಮಸ್ತ ಅವ್ಯಾಕೃತ ಆಕಾಶವನ್ನು ವ್ಯಾಪಿಸಿದವ.

‘ಅನಾದ್ಯನಂತ ಕಾಲದಲ್ಲಿ ಎಲ್ಲ ಜೀವರಿಗೆ ಅನಿಮಿತ್ತ ಮಹೋಪಕಾರಿ. ಅಂತೆಯೇ ಪರಮಪ್ರೇಷ್ಠ. ಎಲ್ಲ ಕರ್ಮಗಳಿಂದ ಪೂಜನೀಯ. ನಮ್ಮ ಗುರುಗಳಲ್ಲಿ, ಸಮಸ್ತ ಗುರುಗಳಲ್ಲಿ, ದೇವತೆಗಳಲ್ಲಿ ಹಾಗೂ ವಾಯುದೇವರಲ್ಲಿ ಅಂತರ್ಯಾಮಿಯಾಗಿರುವವ.

‘‘ನಮ್ಮಾರ್ತದನಿ ಕೇಳುವವ, ಕೇಳಿ ಕರುಣಿಸುವವ, ಶರಣುಹೊಕ್ಕವರಿಗೆ ಮೊರೆಯಾಗುವವ. ಅವನಿಂದ ನಮಗಾಗುವ ಉಪಕಾರ ಅನಂತ’’

ಹೀಗೆಲ್ಲ ನೆನೆಯುತ್ತಾ ನಮ್ಮ ಮನಸ್ಸಿನಲ್ಲಿ (ಬಿಂಬರೂಪಿಯಾದ) ಭಗವಂತನ ವಾಸನಾಮಯ ರೂಪವನ್ನು ಹಾಗೂ (ಪೀಠ)ಆವರಣದೇವತೆಗಳ ರೂಪಗಳನ್ನೂ ನಿರ್ಮಿಸಬೇಕು.

ಆದರೆ ಆ ರೂಪವೇ ದೇವರೆಂದು ತಿಳಿಯಬಾರದು. ಆ ಮಾನಸ ರೂಪದಲ್ಲಿ ವಾಯು ಲಕ್ಷ್ಮೀದೇವಿಯರನ್ನು (ಗೋಲಕಗಳನ್ನು) ಸ್ಮರಿಸಿ ಆವಾಹಿಸಿ ಅಲ್ಲಿ ಚಿನ್ಮಯ ಭಗವಂತನನ್ನು ಆವಾಹಿಸಿ ಉಪಾಸನೆ ಮಾಡಬೇಕು.

ಅವನ ಸುಂದರತಮ ಲಾವಣ್ಯಮೂರ್ತಿಯನ್ನು ಸ್ಮರಿಸಬೇಕು. ಈ ತೆರನಾದ ನೆನಹು ದೇವರಲ್ಲಿ ಭಕ್ತಿ ನೀಡಿ ನಮ್ಮ ಮನವನ್ನು ಹದಗೊಳಿಸುವದು.

ಬಳಿಕ ಭಾವಪೂರ್ಣ ಮನಸ್ಸಿನಿಂದ ಪೂಜೆ ಸಾಧ್ಯವಾಗುವದು. ಅಂತೆಯೇ ಜಪವು ಆದಿಯಲ್ಲಿ ಅಗತ್ಯ.

**(ನಾರಾಯಣಮಂತ್ರಜಪಕ್ರಮ ಹಾಗೂ ಅದರ ಪೂರ್ವೋತ್ತರಾಂಗಗಳನ್ನು ಈ ಮೊದಲೇ ಪ್ರತ್ಯೇಕವಾಗಿ ಇದೇ ಪುಸ್ತಕದಲ್ಲಿ ಮುದ್ರಿಸಿದ್ದೇವೆ.)**

## ಪ್ರಾರ್ಥನೆ

**[೯]ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ ।**

೯ ಬ್ರ.ವ್ಯಾಖ್ಯಾ:- ಇಂದ್ರಿಯಗಣಪತೇ ಧನವನ್ ಯಶಸ್ವಿನ್ ಮಖಪತೇ ತ್ವಂ

## ನಾರಾಯಣಮಂತ್ರಜಪ

ಪೂಜೆ ಮಾಡುವದಕ್ಕೆ ಮೊದಲು ಅಧಿಕಾರಸಿದ್ಧಿಗಾಗಿ ''ನಾರಾಯಣ'' ಮಂತ್ರವನ್ನು ಜಪಿಸಬೇಕು.

ಅನೇಕರು ದೇವರ ಪೂಜೆಯನ್ನೇ ಮಾಡುವದಿಲ್ಲ. ಮಾಡುವವರೂ ಯಾಂತ್ರಿಕವಾಗಿ ಮಾಡಿ ಮುಗಿಸಿಬಿಡುತ್ತಾರೆ. ಕಾಡಾಟವೆಂದು ತಿಳಿಯುತ್ತಾರೆ. ಅವರಿಗೆ ಅದು ಅಪರಿಹಾರ್ಯಪೀಡೆ.

ಇನ್ನು ಕೆಲವರಿಗೆ ಪೂಜೆಯಲ್ಲಿ ಔದಾಸೀನ್ಯ. ಭಕ್ತಿಯಿಂದ ಅನುಸಂಧಾನವಿಟ್ಟು ಮಾಡುವವರು ಬಹಳ ವಿರಳ. ಬೇರೆ ಕಾಲದಲ್ಲಿ ಅಲ್ಪ ಸ್ವಲ್ಪ ವಿಶ್ವಾಸ ಇರುವವರಿಗೂ ಪೂಜೆಯ ಸಮಯದಲ್ಲಿ ತನ್ಮಯತೆ ಇರುವದಿಲ್ಲ.

ಆದರೆ ಭಕ್ತಿಯಿಲ್ಲದ ಬಗೆಯಿಂದ, ಶ್ರದ್ಧೆಯಿಲ್ಲದ ಹೃದಯದಿಂದ, ಏಕಾಗ್ರತೆ ಇಲ್ಲದ ಮನಸ್ಸಿನಿಂದ ಮಾಡಿದ ಪೂಜೆ ನಿಷ್ಫಲ. ತುಸು ಫಲ ದೊರಕಬೇಕಾದರೂ ತುಸುವೇ ಭಕ್ತಿಯು ಇರಲೇಬೇಕು.

ಭಕ್ತಿ ಇಲ್ಲದೆ ಅಶ್ರದ್ಧೆಯಿಂದ ಮಾಡಿದ ಪೂಜೆ ಅಸತ್ಪೂಜೆ; ಅಸತ್ಕರ್ಮ. ಇದು ನಿರರ್ಥಕಮಾತ್ರವಲ್ಲ. ಅನರ್ಥಕಾರಿಯೂ ಹೌದು.

> ಅಶ್ರದ್ಧಯಾ ಹುತಂ ಜಪ್ತಂ ತಪಸ್ತಪ್ತಂ ಕೃತಂ ಚ ಯತ್ ।
> ಅಸದಿತ್ಯುಚ್ಯತೇ ಪಾರ್ಥ ನ ಚ ತತ್ ಪ್ರೇತ್ಯ ನೋ ಇಹ ॥★॥

ಅದಕ್ಕೆಂದೇ ನಾರಾಯಣಮಂತ್ರವನ್ನು ಜಪಿಸಲು ಹೇಳಿರುವರು. ಜಪವನ್ನು ಮಾಡುತ್ತಾ ಕ್ಷಣಬಿಡದೆ ಮನದಲ್ಲಿ ನೆನೆಯಬೇಕು.

'ದೇವರು ಸಚ್ಚಿದಾನಂದಾತ್ಮಾ. ಸತ್- ನಿರ್ದೋಷ. ಅಂದರೆ- ಅಸ್ವತಂತ್ರತೆ, ದುಃಖ ಮುಂತಾದ ದೋಷಗಳಿಲ್ಲದವ. (ಚಿತ್) ಅನಂತಜ್ಞಾನಘನ. (ಆನಂದ) ಅಮಿತ ಆನಂದಮಯ. (ಆತ್ಮಾ) ಸರ್ವಸ್ವಾಮಿ. ಮಮಸ್ವಾಮಿ.

'ಅಲ್ಲದೇ ಸಿರಿ ವಿಧಿ ಮುಂತಾದ ಎಲ್ಲರಿಗಿಂತಲೂ ಅನಂತ ಅನಂತ ಮಡಿ ಉತ್ತಮನಾದವ. ಅನಂತ ಗುಣ ರೂಪ ಕ್ರಿಯೆಗಳುಳ್ಳವ.

'ಇಡಿಯ ವಿಶ್ವದ ಹುಟ್ಟು, ಸಾವು, ಇರವು, ನಿಯಮನ, ಜ್ಞಾನ, ಅಜ್ಞಾನ, ಬಂಧನ, ಮೋಚನಗಳನ್ನು ಕೊಡುವ ಮಹಾ ದೊರೆ.

'ಎಲ್ಲ ಅಚೇತನಗಳಿಗೂ ಮುಕ್ತಾಮುಕ್ತ ಚೇತನರಿಗೂ ಹಿರಿಯೊಡೆಯ. ಸ್ವತಂತ್ರ. ಎಲ್ಲರಿಗೆ ಅಸ್ತಿತ್ವವನ್ನು ಕೊಟ್ಟವ. ಸರ್ವನಿಯಾಮಕ, ಪ್ರೇರಕ, ರಮಾಬ್ರಹ್ಮಾದಿಗಳೆಲ್ಲರಲ್ಲಿದ್ದು ಆಯಾ ಕ್ರಿಯೆಗಳನ್ನು ಮಾಡಿಸುವವ.

'ಅಣುರೇಣುವನ್ನಾರಂಭಿಸಿ ಇಡಿಯ ಬ್ರಹ್ಮಾಂಡ, ಅದರ ಹೊರ ಆವರಣಗಳನ್ನು, ಸಮಸ್ತ ಅವ್ಯಾಕೃತ ಆಕಾಶವನ್ನು ವ್ಯಾಪಿಸಿದವ.

'ಅನಾದ್ಯನಂತ ಕಾಲದಲ್ಲಿ ಎಲ್ಲ ಜೀವರಿಗೆ ಅನಿಮಿತ್ತ ಮಹೋಪಕಾರಿ. ಅಂತೆಯೇ ಪರಮಪ್ರೇಷ್ಠ. ಎಲ್ಲ ಕರ್ಮಗಳಿಂದ ಪೂಜನೀಯ. ನಮ್ಮ ಗುರುಗಳಲ್ಲಿ, ಸಮಸ್ತ ಗುರುಗಳಲ್ಲಿ, ದೇವತೆಗಳಲ್ಲಿ ಹಾಗೂ ವಾಯುದೇವರಲ್ಲಿ ಅಂತರ್ಯಾಮಿಯಾಗಿರುವವ.

''ನಮ್ಮಾರ್ತದನಿ ಕೇಳುವವ, ಕೇಳಿ ಕರುಣಿಸುವವ, ಶರಣುಹೊಕ್ಕವರಿಗೆ ಮೊರೆಯಾಗುವವ. ಅವನಿಂದ ನಮಗಾಗುವ ಉಪಕಾರ ಅನಂತ''

ಹೀಗೆಲ್ಲ ನೆನೆಯುತ್ತಾ ನಮ್ಮ ಮನಸ್ಸಿನಲ್ಲಿ (ಬಿಂಬರೂಪಿಯಾದ) ಭಗವಂತನ ವಾಸನಾಮಯ ರೂಪವನ್ನು ಹಾಗೂ (ಪೀಠ)ಆವರಣದೇವತೆಗಳ ರೂಪಗಳನ್ನೂ ನಿರ್ಮಿಸಬೇಕು.

ಆದರೆ ಆ ರೂಪವೇ ದೇವರೆಂದು ತಿಳಿಯಬಾರದು. ಆ ಮಾನಸ ರೂಪದಲ್ಲಿ ವಾಯು ಲಕ್ಷ್ಮೀದೇವಿಯರನ್ನು (ಗೋಲಕಗಳನ್ನು) ಸ್ಮರಿಸಿ ಆವಾಹಿಸಿ ಅಲ್ಲಿ ಚಿನ್ಮಯ ಭಗವಂತನನ್ನು ಆವಾಹಿಸಿ ಉಪಾಸನೆ ಮಾಡಬೇಕು.

ಅವನ ಸುಂದರತಮ ಲಾವಣ್ಯಮೂರ್ತಿಯನ್ನು ಸ್ಮರಿಸಬೇಕು. ಈ ತೆರನಾದ ನೆನಹು ದೇವರಲ್ಲಿ ಭಕ್ತಿ ನೀಡಿ ನಮ್ಮ ಮನವನ್ನು ಹದಗೊಳಿಸುವದು.

ಬಳಿಕ ಭಾವಪೂರ್ಣ ಮನಸ್ಸಿನಿಂದ ಪೂಜೆ ಸಾಧ್ಯವಾಗುವದು. ಅಂತೆಯೇ ಜಪವು ಆದಿಯಲ್ಲಿ ಅಗತ್ಯ.

**(ನಾರಾಯಣಮಂತ್ರಜಪಕ್ರಮ ಹಾಗೂ ಅದರ ಪೂರ್ವೋತ್ತರಾಂಗಗಳನ್ನು ಈ ಮೊದಲೇ ಪ್ರತ್ಯೇಕವಾಗಿ ಇದೇ ಪುಸ್ತಕದಲ್ಲಿ ಮುದ್ರಿಸಿದ್ದೇವೆ.)**

## ಪ್ರಾರ್ಥನೆ

**[೯]ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ ।**

೯ ಬ್ರ.ವ್ಯಾಖ್ಯಾ:- ಇಂದ್ರಿಯಗಣಪತೇ ಧನವನ್ ಯಶಸ್ವಿನ್ ಮಖಪತೇ ತ್ವಂ

**ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥**

**ಅಭಿಪ್ರಾಯ ಃ-** ಇಂದ್ರಿಯ ನಿಯಾಮಕ ಭಗವನ್! ಇಂದ್ರಿಯಗಳಲ್ಲಿ ನೆಲೆಗೊಳ್ಳು. ನೀನು ಜ್ಞಾನಿಗಳಲ್ಲಿ ಅತ್ಯುತ್ತಮೋತ್ತಮ. ನೀನಿಲ್ಲದೇ ಯಾವ ಕ್ರಿಯೆ ನಡೆಯುವುದಿಲ್ಲ. ಆಶ್ಚರ್ಯತಮನಾದ ನಿನ್ನನ್ನು ನೀನೇ ಪೂಜಿಸಿಕೋ.

**ಅನ್ವಯ ಃ- ಹೇ ಗಣಪತೇ! ಗಣೇಷು ನಿಷುಸೀದ. ತ್ವಾಂ ಕವೀನಾಂ ವಿಪ್ರತಮಂ ಆಹುಃ. ತ್ವತ್ ಋತೇ ಆರೇ ಕಿಂಚನ ನ ಕ್ರಿಯತೇ. ಹೇ ಮಘವನ್! ಮಹಾಂ ಚಿತ್ರಂ ಅರ್ಕಂ (ತ್ವಮೇವ) ಚಿತ್ರಂ ಅರ್ಚ.**

ಇದರ ಅರ್ಥವನ್ನು ಶ್ರೀಜಯತೀರ್ಥರು ತತ್ವಪ್ರಕಾಶಿಕೆಯಲ್ಲಿ ವಿವರಿಸಿದ್ದಾರೆ. (೨-೨-೪)

''ಭಗವನ್, ಸ್ವಾಮಿನ್, ಆರಾಧ್ಯದೇವ, ಎಲ್ಲಕ್ಕೂ ನೀನು ನಿಯಾಮಕ.

ಸಿರಿ, ವಿಧಿ, ವಾಯು ಮುಂತಾದ ಅಮರಗಣದಲ್ಲಿ ನಿಂತು ನೀ ಎನ್ನ ಪ್ರೇರಿಸು.

ಬಂದು ಬಾಂಧವರ ಇಷ್ಟಮಿತ್ರರ ಗಣದಲ್ಲಿ ನಿಂತು ಸಾಧನೆಗೆ ಅನುಕೂಲ ಮಾಡು.

ಮನಸ್ಸಿನ ನಾನಾವೃತ್ತಿಗಳ ಗಣದಲ್ಲಿ ಇದ್ದು ಸತ್ವವೃತ್ತಿಯನ್ನು ಹೆಚ್ಚಿಸು.

ಇಂದ್ರಿಯಗಣಗಳಲ್ಲಿ ಅಧಿಷ್ಠಿತನಾಗಿದ್ದು ಸತ್ಕಾರ್ಯಗಳನ್ನು ಮಾಡಿಸು.

ನಾನುಣ್ಣುವ ಭೋಗ್ಯಪದಾರ್ಥಗಳ ಗಣದಲ್ಲಿದ್ದು ಪವಿತ್ರಗೊಳಿಸು.

---

ಇಂದ್ರಿಯಗಣೇಷು ನಿಷುಸೀದ । ತತ್ರ ಸ್ಥಿತ್ವಾ ಮಹಾಂತಂ ಪರಮಾನಂದಂ ಆಶ್ಚರ್ಯತಮಂ ತ್ವಾಂ ತ್ವಮೇವ ಪೂಜಯ । ಯತಃ ತ್ವಾಮೇವ ವಿಶೇಷೇಣ ಜ್ಞಾನಿನಾಂ ಪ್ರಕೃಷ್ಟತಮಂ ಆಹುಃ । ಅತಃ ತವ ಏವ ಪೂಜ್ಯತ್ವಮ್ । ಯತಶ್ಚ ತ್ವದೃತೇ ದೂರೇ ಸಮೀಪೇ ವಾ ನ ಕೇನಚಿತ್ ಕಿಂಚಿತ್ ಕ್ರಿಯತೇ । ಅತಃ ತ್ವಮೇವ ಪೂಜಕ ಇತ್ಯರ್ಥಃ ।

(ತತ್ವಪ್ರದೀಪ ೨-೨-೪) ನಿಷುಸೀದೇತ್ಯಾದೇರಯಮರ್ಥಃ। ಇಂದ್ರಿಯಗಣೇಷು ತ್ವಂ ಸು ನಿಷೀದ । ಜ್ಞಾನಿನಾಂ ವಿಶೇಷೇಣ ಪ್ರಕೃಷ್ಟತಮಂ ತ್ವಾಮಾಹುಃ । ತ್ವದೃತೇ ಸ್ಪಂದನಮಪಿ ನ ಕ್ರಿಯತೇ । ಆರೇ ದೂರೇ ಚ । ತ್ವನ್ನಿಯತ್ಯೈವ ಸರ್ವಂ ಸರ್ವತ್ರ । ಮಹಾಂತಂ ಅಧಿಕಾನಂದಂ ತ್ವಾಂ ತ್ವಮೇವಾರ್ಚಯ ಮಘವನ್ ಸಾಮರ್ಥ್ಯಯುಕ್ತಾ ಇತಿ । ನ ಚ ಸ್ವಾತಂತ್ರ್ಯೇಣ ಅನ್ಯಸ್ಯ ಅರ್ಚ್ಯತ್ವಂ ಯುಜ್ಯತೇ । ಅಸ್ವಾತಂತ್ರ್ಯೋಕ್ತೇಃ । ಸ್ತೋತ್ರಾ ಸ್ವೇಂದ್ರಿಯೇಷು ಸ್ಥಿತ್ವಾ ಭಗವಂತಂ ಪ್ರತಿ ಸ್ವಾರ್ಚಕತ್ವಂ ಪ್ರಾರ್ಥ್ಯತ ಇತಿ ಯುಕ್ತಮ್ ।

ವೇದಾದಿ ಸಚ್ಛಾಸ್ತ್ರಗಳ ಗಣದಲ್ಲಿ ನೀನಿದ್ದು ತತ್ತ್ವವನ್ನು ತಿಳಿಪಡಿಸು.

ನೀನು ಶ್ರೇಷ್ಠರಿಗಿಂತಲೂ ಶ್ರೇಷ್ಠ, ಪರತರ, ಸರ್ವೋತ್ತಮ ಎಂದು ಕವಿಗಳಿಗೆ ಒಮ್ಮತದಿಂದ ಸಮ್ಮತ.

ನಿನ್ನ ಆಜ್ಞೆ, ಪ್ರೇರಣೆ, ಶಕ್ತಿಪ್ರಚೋದನೆ, ಅನುಗ್ರಹಗಳಿಲ್ಲದಿದ್ದರೆ ಯಾವ ಕಾರ್ಯವೂ ಆಗುವಂತಿಲ್ಲ.

ಅತಿ ಹತ್ತಿರದಲ್ಲಾಗಲಿ, ಬ್ರಹ್ಮಾಂಡದ ಆಚೆ ದೂರದಲ್ಲಾಗಲೀ,

ಇಂದಾಗಲಿ, ಅನಂತಕಾಲದ ಹಿಂದು ಮುಂದಾಗಲೀ,

ಯೋಗ್ಯತೆಯಲ್ಲಿ ಅತಿ ಹತ್ತಿರದವರಾದ ಸಿರಿ, ವಾಯುಗಳಿಂದಾಗಲಿ,

ಯೋಗ್ಯತೆಯ ಗಣನೆಯಲ್ಲಿ ಅತಿ ದೂರರಾದ ಕ್ಷುದ್ರ ಜೀವಿಗಳಿಂದಾಗಲೀ ಯಾವ ಕಾರ್ಯವೂ ಆಗಲು ಸಾಧ್ಯವಿಲ್ಲ.

ನಿನ್ನ ಕೃಪೆಯಿದ್ದರೆ ಶ್ವಪಚನೂ ಬ್ರಹ್ಮನಾಗುವನು. ಇರದಿದ್ದರೆ ಬ್ರಹ್ಮನೂ ಶ್ವಪಚನಾಗುವನು.

ಎಲೆಯ ಅಲುಗಾಟ, ಹುಲ್ಲಿನ ಹಾರಾಟ, ಕಣಗಳ ತೂರಾಟ ಯಾವುದೂ ಸಾಧ್ಯವಿಲ್ಲ.

ಅಂತೆಯೇ ನೀನು ಮಹನೀಯ, ಸರ್ವೋತ್ತಮ. ನಾನು ಅತಿ ಕ್ಷುದ್ರಜಂತು, ದುರ್ಬಲ, ಶಕ್ತಿಹೀನ, ಸ್ವತಃ ಕಿಂಚಿತ್ತಾದರೂ ಸಾಮರ್ಥ್ಯವಿಲ್ಲದವ.

ಹಾಗಾಗಿ ಅಸ್ವತಂತ್ರತಮ. ಏನನ್ನೂ ಮಾಡಲಾರೆ. ಯಜ್ಞ, ದಾನ, ತಪಸ್ಸು, ಪೂಜೆ, ತೀರ್ಥಾಟನ ಮುಂತಾದ ವಿಹಿತಕರ್ಮಗಳಾಗಲಿ, ತಿರುಗುವದು, ಕೊಡುವದು, ಕೊಂಬುವದು, ಬೆಟ್ಟ ಏರುವದು, ಸಮುದ್ರ ಈಜುವದು ಮುಂತಾದ ಕರ್ಮಗಳಾಗಲಿ,

ಕಣ್ಣಳಿಂದ ದರ್ಶನ, ಕಿವಿಗಳಿಂದ ಶ್ರವಣ, ಕೈಗಳಿಂದ ಸ್ಪರ್ಶನ, ಅಥವಾ ರೆಪ್ಪೆಗಳ ಸ್ಪಂದನ, ಶ್ವಸನ ಉಚ್ಛ್ವಸನ ಮುಂತಾದ ಅತಿ ಹಗುರಾದ ಕರ್ಮಗಳೇ ಆಗಲಿ ಕೇವಲ ನನ್ನಿಂದ ಮಾಡಲು ಸಾಧ್ಯವಿಲ್ಲ.

ನಿನ್ನ ಪ್ರೇರಣೆ, ನೀ ಕೊಟ್ಟ ಶಕ್ತಿ, ನೀ ನೀಡಿದ ಪ್ರವೃತ್ತಿ, ನಿನ್ನನುಗ್ರಹ ಇವುಗಳಿಂದಲೇ ಆಗಬೇಕು.

ನೀನು ಸಿರಿ, ವಿಧಿ, ವಾಯುಗಳಿಗೂ ಪ್ರೇರಕ, ಪ್ರವರ್ತಕ, ಅನುಗ್ರಾಹಕ, ಶಕ್ತಿಪ್ರಚೋದಕ.

. ಎಲ್ಲರೂ ನಿನ್ನ ಹಂಗಿನಲ್ಲಿ ಇರುವರು. ನಿನಗೆ ಮಾತ್ರ ಯಾರ ಹಂಗೂ ಇಲ್ಲ. ನೀನೊಬ್ಬನೇ ಸ್ವತಂತ್ರ, ಪರರೆಲ್ಲ ಪರತಂತ್ರರು.

ಓ ಸಿರಿವಂತನೇ ! ಈ ಪರಿಯ ಸೊಬಗಾವ ದೇವರಲೂ ನಾ ಕಾಣೆ. ಅಸ್ವತಂತ್ರನಾದ ನಾನು ನಿನ್ನನ್ನು ಪೂಜಿಸಲಾರೆ. ನೀನೇ ನಿನ್ನನ್ನು-ನನ್ನಧಿಷ್ಠಾನದಲ್ಲಿದ್ದು ಪೂಜಿಸಿಕೊ, ಫಲಮಾತ್ರ ನನಗೆ ನೀಡು, ಮಿಗಿಲಾಗಿ ದಯಮಾಡು.''

ತನ್ನನ್ನು ತಾನು ಪೂಜಿಸಿಕೊಳ್ಳುವದೂ ವಿಚಿತ್ರ. ಒಬ್ಬರು ಪೂಜಿಸಿದಾಗ ಮತ್ತೊಬ್ಬರಿಗೆ ಫಲನೀಡುವದು ಇನ್ನೂ ವಿಚಿತ್ರ ''ಚಿತ್ರಂ ಅರ್ಚ''

**ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ**
**ಪ್ರಾಣಾಧಿನಾಥೇನ ಸಮೀರಣೇನ ।**
**ನಾರಾಯಣ ಜ್ಞಾನಸುಖೈಕಪೂರ್ಣ**
**ಸ್ವಾಮಿನ್ ಮಯಿ ಶ್ರೀರಮಣ ಪ್ರಸೀದ ॥★॥**

'ಓ ನಾರಾಯಣ ! ದೋಷದೂರ ! ಜ್ಞಾನಪೂರ್ಣ ! ಸುಖಪೂರ್ಣ ! ಓ ಎನ್ನೊಡೆಯ ! ಹೇ ಸರ್ವರೊಡೆಯ ! ನಿನ್ನನ್ನು ಮುಖ್ಯಪ್ರಾಣ ಆರಾಧಿಸುವನು.

ನಿನ್ನನ್ನು ಪೂಜಿಸುವ ಸಾಮರ್ಥ್ಯ ನನಗೆಲ್ಲಿ? ಆ ಮುಖ್ಯಪ್ರಾಣ ಸರ್ವರಿಗೂ ಪ್ರೇರಕ. ಎಲ್ಲ ಪ್ರಾಣಿಗಳ ಪ್ರಣಾಯಕ. ಪ್ರಾಣಾದಿಗಳಿಗೆ ಹಿರಿಯ ಒಡೆಯ.

ಅಂಥ ವಾಯುದೇವರಿಂದ ಪೂಜಿಸಲ್ಪಡುವ ಸರ್ವಸ್ವಾಮಿಯೇ !

ಓ ಸಿರಿಯೊಡೆಯ ! ನನ್ನಲ್ಲಿ ಪ್ರಸನ್ನನಾಗು.'

**ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಮ್ ।**
**ಸ್ವಾಮಿನ್ ನಿರ್ದೋಷ ಮದ್ದೋಷಾನ್ ವಿರೇಚಯ ನಮೋಽಸ್ತು ತೇ ॥★॥**

(ದೇವರು ಬಿಂಬ, ನಾವವನ ಪ್ರತಿಬಿಂಬರು. ಪ್ರತಿಬಿಂಬ ಎನ್ನುವದಕ್ಕೆ ಇಷ್ಟು ಅರ್ಥ. ಕನ್ನಡಿಯಲ್ಲಿ ನಮ್ಮ ಪ್ರತಿಬಿಂಬವು ತೋರುವುದು.

ಬಿಂಬರಾದ ನಾವು ಚಲಿಸಿದಂತೆ ಆ ಪ್ರತಿಬಿಂಬವು ಚಲಿಸುವದು. ಬಿಂಬ ಚಲಿಸದಿರೆ ಪ್ರತಿಬಿಂಬವೂ ಚಲಿಸುವದಿಲ್ಲ.

ಬಿಂಬದಲ್ಲಿರುವ ಗುಣಧರ್ಮಗಳು ಪ್ರತಿಬಿಂಬದಲ್ಲಿ ಕಾಣಿಸುವವು. ಬಿಂಬದಲ್ಲಿ ಇಲ್ಲದ ಗುಣ ಪ್ರತಿಬಿಂಬದಲ್ಲಿ ಕಾಣಲು ಸಾಧ್ಯವಿಲ್ಲ.

ಶಾಸ್ತ್ರಗಳು ಈ ನಿಟ್ಟಿನಲ್ಲಿ ಚೇತನರನ್ನು ಚೇತನೋತ್ತಮನ ಪ್ರತಿಬಿಂಬರೂಪರೆಂದು ಬಣ್ಣಿಸುತ್ತವೆ.

ಜೀವ ದೇವರಂತೆ ಇರುವ. ದೇವರಧೀನನಾಗಿರುವ. ಅಂತೆಯೇ ದೇವರ ಪ್ರತಿಬಿಂಬ)

'ಓ ದೇವ ! ನೀನು ಬಿಂಬ, ನಾನು ಪ್ರತಿಬಿಂಬ.

ಆದರೆ, ನೀನು ನಿರ್ದೋಷ, ನಾನು ಸದೋಷ.

ನೀನು ಅನಂತ, ನಾನು ಸಾಂತ.

ನೀನು ಆನಂದಪೂರ್ಣ, ನಾನು ದುಃಖಭರಿತ.

ನೀನು ಜ್ಞಾನಮಯ, ನಾನು ಅಜ್ಞಾನಘನ.

ನಾನು ಎಣಿಕೆ ಇಲ್ಲದ ದೋಷಗಳ ಗಣಿ. ಅಜ್ಞಾನ, ಮಿಥ್ಯಾಜ್ಞಾನ, ಸಂಶಯ, ಕಾಮ, ಕ್ರೋಧ, ಮದ, ಮಾತ್ಸರ್ಯ, ಮೋಹ, ಮಮಕಾರ, ಕಪಟ, ಕ್ರೌರ್ಯ, ದೌರ್ಜನ್ಯ, ಕೌಟಿಲ್ಯ, ಕೃತಘ್ನತೆ, ಪಾರುಷ್ಯ, ನೃಶಂಸತ್ವಮುಂತಾದ ದೋಷಗಳಿಗೆ ತವರು ನಾನು.

ಓ ಸ್ವಾಮಿನ್, ನಿರ್ದೋಷನೆ ! ಈ ಎಲ್ಲ ದೋಷಗಳು ನನ್ನನ್ನು ಅನಾದಿಯಿಂದ ಮೆತ್ತಿಕೊಂಡಿವೆ, ಸುತ್ತಗಟ್ಟಿ ಮುತ್ತಿಹಾಕಿವೆ.

ನಾನು ಪರಮದುರ್ಬಲನಾದುದರಿಂದ ಏನೂ ಮಾಡುವಂತಿಲ್ಲ.

ನೀನಾದರೂ ಪ್ರಬಲತಮ. ನಿನ್ನದು ಅನಂತ ಶಕ್ತಿ, ಅಚಿಂತ್ಯ ಸಾಮರ್ಥ್ಯ. ಅನಾದಿ ನಿಬಿಡ ಅವಿದ್ಯಾಂಧಕಾರವನ್ನೇ ನಿನ್ನ ಪಾದದರ್ಶನ ನೀಡಿ ಸಿಡಿಲಿನಂದದಿ ಸೀಳಿಹಾಕುವ ಓ ಅನಂತಶಕ್ತೇ ! ಓವೋ ಮಾಯಪತೇ ! ನಿನಗೆ ಈ ದೋಷಗಳು ಕ್ಷುದ್ರವೇ ಸರಿ.

ದಯಾಘನ ! ನನ್ನೀ ದೋಷಗಳನ್ನು ಮರಳಿಬಾರದಂತೆ ತೊಲಗಿಸು.

ಆ ಉಪಕಾರಕ್ಕೆ ಪ್ರತಿಯಾಗಿ

'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ'

''ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ'.

**ಭಗವನ್ ಯನ್ಮಯಾ ಕರ್ಮ ಶುಭಂ ಕಾರಯಸಿ ಪ್ರಭೋ ।**
**ತತ್ಸರ್ವಂ ವಿಷ್ಣುಪೂಜಾಸ್ತು ತವ ದೇವ ಪ್ರಸಾದತಃ ॥★॥**

'ಭಗವನ್ ! ನೀನು ನನ್ನಿಂದ ಮಾಡಿಸುವ ಶುಭಕರ್ಮಗಳೆಲ್ಲವೂ ನಿನ್ನ ಪೂಜೆಯಾಗಲಿ,'

**ಅನಂಶಸ್ಯಾಪಿ ಜೀವಸ್ಯ ಕಿಂಚಿತ್ ಸಾಮರ್ಥ್ಯಯೋಜನಾಮ್ ।**
**ಕಾರ್ಯೇಷು ಯಃ ಕರೋತ್ಯದ್ಧಾ ನಮಸ್ತಸ್ಮೈ ಸ್ವಯಂಭುವೇ ॥★॥**

(ವಿವರಣೆ :- ನಾವು ಭಾರವಾದ ಬಂಡೆಯನ್ನು ಎತ್ತುವಾಗ ಬಳಿಸುವ ಶಕ್ತಿಯನ್ನು ಹುಲ್ಲು ಎತ್ತುವಾಗ ಬಳಸುವದಿಲ್ಲ.

ಅಂದಮೇಲೆ ಹೆಚ್ಚು ಶಕ್ತಿಯನ್ನು ಒಮ್ಮೆ, ಕಡಿಮೆ ಶಕ್ತಿಯನ್ನು ಒಮ್ಮೆ ಬಳಸುವದು ನಮಗೆ ಅನುಭವಸಿದ್ಧ.

ಆದರೆ ತಾತ್ವಿಕವಾಗಿ ಇದು ಸಾಧ್ಯವಿಲ್ಲ. ಜೀವನಿಗೆ ಒಂದೇ ಶಕ್ತಿ. ಹೆಚ್ಚು ಶಕ್ತಿ ಒಂದು, ಕಡಿಮೆ ಶಕ್ತಿ ಒಂದು ಎಂದು ವಿಭಾಗವಿಲ್ಲ.

ಶಕ್ತಿಯೇ ಜೀವ. ಜೀವವೇ ಶಕ್ತಿ. ಜೀವ ಶಕ್ತಿಗಳಿಗೆ ಅಭೇದ. ಒಂದೇ ಜೀವದಲ್ಲಿ ಸ್ವಲ್ಪ ಜೀವ, ಹೆಚ್ಚು ಜೀವ ಎಂಬ ವಿಭಾಗ ಸಲ್ಲದು.

ಅಂದ ಮೇಲೆ ಜೀವನಿಂದ ಅಭಿನ್ನವಾದ ಒಂದು ಶಕ್ತಿಯಲ್ಲಿಯೂ ಹೆಚ್ಚು ಕಡಿಮೆ ಎಂಬ ವಿಭಾಗ ಸಲ್ಲದು. ಹಾಗಾಗಿ ಹೆಚ್ಚು ಶಕ್ತಿಯನ್ನು ಬಳಸಿ ಬಂಡೆಯನ್ನು, ಕಡಿಮೆ ಶಕ್ತಿಯನ್ನು ಬಳಸಿ ಹುಲ್ಲನ್ನು ಎತ್ತುವದು ಸಾಧ್ಯವಿಲ್ಲವೆಂದಾಯಿತು.

ಇದು ಸಾಧ್ಯವಾಗಬೇಕಾಗಿದ್ದರೆ ಜೀವನಲ್ಲಿ ತುಂಡುಗಳು ಇವೆ ಎಂದು ಒಪ್ಪಬೇಕಾದೀತು. ಈ ತೆರನಾದ ವಾಸ್ತವಿಕ ಬಿಕ್ಕಟ್ಟಿನಲ್ಲಿ)

ದೇವರು ಜೀವರ ಅಂಶಗಳಲ್ಲಿ ಭೇದಗೊಳಿಸುವದಿಲ್ಲ. ಅತ್ಯಂತ ಅಭೇದವನ್ನೇ ಉಳಿಸುವನು.

ಆದರೂ ಅಚ್ಛೇದ್ಯರೂ ಅವಿಭಾಜ್ಯರೂ ಆದ ಜೀವರ ಶಕ್ತಿಯಲ್ಲಿ ಅಭಿನ್ನವಾದ ಅಂಶಗಳನ್ನು, ತುಂಡು ತುಣುಕುಗಳನ್ನು ಮಾಡುವನು. ಇದು ಕೇವಲ ದೇವರ ಅಚಿಂತ್ಯವಾದ ಶಕ್ತಿಗೆ ಮಾತ್ರ ನೀಗುವದು.

ಹೀಗೆ 'ಅವಿಭಾಜ್ಯರಾದ ಜೀವರ ಶಕ್ತಿಯಲ್ಲಿ (ಹೆಚ್ಚು ಕಡಿಮೆ ಎಂಬುದಾಗಿ) ಭಾಗಗಳನ್ನು ಮಾಡಿ ಆ ಆ ಕಾರ್ಯಕ್ಕೆ ಬೇಕಾಗುವ ತಕ್ಕ ಶಕ್ತಿಯನ್ನು ಜೀವನಿಗೆ ಒದಗಿಸಿ ಕಾರ್ಯವನ್ನು ಮಾಡಿಸುವ ಓ ಸ್ವತಂತ್ರ ಪ್ರಭುವೇ ! ನಿನಗೆ ನನ್ನ ಕೋಟಿ ಕೋಟಿ ಪ್ರಣಾಮ. ಅನಂತ ನಮನ.'

**ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಮ್ ।**
**ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ ॥★॥**

''ತಂದೆ ತನ್ನ ಮಗುವಿನ ಕತ್ತುಬಾಗಿಸಿ ಅವನಿಂದ ತನಗೆ ವಂದನೆ ಮಾಡಿಸಿಕೊಂಡು ತಾನೇ ಹರಸಿ ಆಶೀರ್ವದಿಸುವನು.

ಅಂತೆಯೇ ಭಗವಂತ ನಮ್ಮ ದೇಹ, ಇಂದ್ರಿಯ, ಮನಸ್ಸುಗಳನ್ನು ಮತ್ತು ಆತ್ಮನನ್ನು ಹಾಗೂ ಇವೆಲ್ಲದರ ಅಭಿಮಾನಿ ದೇವತೆಗಳನ್ನು ತಾನೇ ಪ್ರೇರಿಸಿ ನಮ್ಮಿಂದ ಪೂಜೆ ಮಾಡಿಸಿಕೊಂಡು ನಮ್ಮನ್ನು ಅನುಗ್ರಹಿಸುತ್ತಾನೆ.''

ಇಲ್ಲಿ ನಿಜವಾಗಿ ದೇವರೇ ಮಾಡಿದರೂ (ಪರಾಧೀನರಾಗಿ) ನಾವು ಮಾಡಿದೆವು ಎಂಬ ಮಾತು ತಪ್ಪಲ್ಲ.'

**ಜಯಾಚ್ಯುತ ಜಯಾನಂತ ಜಯ ಕೃಷ್ಣ ಹರೇ ಪ್ರಭೋ ।**
**ಜಯ ಕೇಶವ ಲಕ್ಷ್ಮೀಶೇತ್ಯುಕ್ತ್ವಾ ಕೃಷ್ಣಂ ಪ್ರಪೂಜಯೇತ್ ॥★॥**

'ಅಚ್ಯುತನಿಗೆ ಜಯವಾಗಲಿ ! ಅನಂತನಿಗೆ ಜಯವಾಗಲಿ ! ಓ ಪ್ರಭುವೇ! ಓ ಹರಿಯೇ, ಓ ಕೃಷ್ಣನೇ ನೀನು ಜಯಶೀಲನಾಗು. ಸಿರಿಯೊಡೆಯ, ಕೇಶವ ನೀನು ಜಯಶೀಲನಾಗು.'

**ಮಯಿ ಸ್ಥಿತೋ ಮದಂಗೇಷು ಸ್ವತಂತ್ರೋ ವ್ಯಾಪ್ತವಾನ್ ಹರಿಃ ।**
**ಸ ವಿಷ್ಣುಶ್ಚಾಸ್ವತಂತ್ರಂ ಮಾಂ ಸ್ವೇಚ್ಛಯಾ ವರ್ತಯತ್ಯಜಃ ॥★॥**

''ನನ್ನಲ್ಲಿಯೂ ನನ್ನ ಅಂಗಗಳಲ್ಲಿಯೂ ನಿಂತಿರುವ, ಎಲ್ಲವನ್ನೂ ತುಂಬಿರುವ ಶ್ರೀಹರಿಯು ಸ್ವತಂತ್ರನು. ಜನ್ಮ-ಮೃತಿ ಮೊದಲಾದ ದೋಷವಿಲ್ಲದ ಭಗವಂತ ಅಸ್ವತಂತ್ರನಾದ ನನ್ನನ್ನು ತನ್ನ ಮನಬಂದಂತೆ (ನನ್ನ ಕರ್ಮಾನುಸಾರ) ಪ್ರೇರಿಸುವನು.''

**ಸ್ವಾತ್ಮನಸ್ತಸ್ಯ ಪೂಜಾಃ ಸ್ಯುಃ ಮನೋವಾಕ್ಕಾಯವೃತ್ತಯಃ ।**
**ಮಮೈತಾಃ ಇತಿ ಕರ್ತಾರಂ ಉದ್ದೇಶ್ಯಂ ಚ ಹರಿಂ ಸ್ಮರೇತ್ ॥★॥**

''ನನ್ನ ಮನ ಮೈ ಮಾತುಗಳ ಕ್ರಿಯೆಗಳನ್ನೆಲ್ಲ ದೇವರು ತನ್ನ ಪೂಜೆಗಾಗಿ ಮಾಡಿಸುವನು. ಅಂತೆಯೇ ವಿಶ್ವದಲ್ಲಿ ನಡೆಯುವ ಎಲ್ಲ ಕ್ರಿಯೆಗಳಿಗೆ ದೇವರೇ ಕರ್ತೃ, ದೇವರೇ ಉದ್ದೇಶ್ಯ.''

ದೇವರಾಳುವ ಈ ವಿಶ್ವದಲ್ಲಿ ದೇವರ ಮನಸ್ಸಿಗೆ ಒಪ್ಪಿಗೆಯಾಗದಿದ್ದದ್ದು ಒಂದೂ ನಡೆಯುವಂತಿಲ್ಲ.

ಹಾಗೇನಾದರೂ ದೇವರ ಮನ್ನಸ್ಸಿಗೆ ಒಪ್ಪಿಗೆಯಾಗದಿದ್ದದ್ದು ನಡೆದರೆ ದೇವರು ಸ್ವತಂತ್ರ ಎಂದು ಆಗಲಾರ. ದೇವರು ಸ್ವತಂತ್ರನೇ. ಆದುದರಿಂದ ಎಲ್ಲ ಕರ್ಮಗಳನ್ನೂ ತನ್ನಿಚ್ಛೆಯಂತೆಯೇ ಮಾಡಿಸುವ.

ಇಡಿಯ ಪ್ರಪಂಚದಲ್ಲಿ ನಡೆಯುವ ಯಾವುದೊಂದು ಕ್ರಿಯೆಯೂ ದೇವರಿಗೆ ಬೇಡವಾದದ್ದಲ್ಲ. ದೇವರಿಗೆ ಬೇಜಾರು ತರಿಸುವದಲ್ಲ.

ಎಲ್ಲ ಕ್ರಿಯೆಯಿಂದಲೂ ದೇವರಿಗೆ ಪ್ರೀತಿ. ಪ್ರೀತಿ ತರಿಸುವ ಕ್ರಿಯೆಯೇ ಪೂಜೆ, ಎಂದ ಮೇಲೆ ಎಲ್ಲ ಕ್ರಿಯೆಯೂ ಪ್ರೀತಿ ತರಿಸುವದು. ಹಾಗಾಗಿ ಎಲ್ಲ ಕ್ರಿಯೆಯೂ ದೇವರ ಪೂಜೆ.

ಆದರೆ ಇದು ದೇವರ ಹಾಗೂ ದೇವತೆಗಳ ದೃಷ್ಟಿಯಲ್ಲಿ ಮಾತ್ರ.

**'ಅಸತಾಮಥಮಾಚಾರಃ ಹರಿದೃಷ್ಟ್ಯಾಽಽತ್ಮಪೂಜನಮ್ ।'**

(ದೇವರಿಂದಲೂ ದೇವತೆಗಳಿಂದಲೂ ಪ್ರೇರಿತನಾಗಿದ್ದರೂ) ನಿಷಿದ್ಧಕರ್ಮಗಳನ್ನು ಮಾಡುವ ವ್ಯಕ್ತಿಯ ದೃಷ್ಟಿಯಿಂದ ಇವು ಸರ್ವಥಾ ದೇವರ ಪೂಜೆ ಅಲ್ಲ.

ಏಕೆಂದರೆ ಈ ಕರ್ಮಗಳೆಲ್ಲವೂ ಅವನಿಗೆ ನಿಷಿದ್ಧವಾದವುಗಳು. ಕರ್ಮಾನುಸಾರವಾಗಿ ಪ್ರೇರಿಸಿ ಅವರವರಿಂದ ನಿಷಿದ್ಧಕರ್ಮಗಳನ್ನು ಮಾಡಿಸುವ ದೇವರ ಹಾಗೂ ದೇವತೆಗಳ ದೃಷ್ಟಿಯಲ್ಲಿ ಮಾತ್ರ ಇವು ಸತ್ಕರ್ಮಗಳೇ.

ಆದ್ದರಿಂದಲೇ ನಿಷಿದ್ಧಕರ್ಮಗಳನ್ನು ಮಾಡುವ ವ್ಯಕ್ತಿಗೆ ಅಧೋಗತಿಯಾಗುವದರಲ್ಲಿ ಸಂದೇಹವಿಲ್ಲ.

**'ತಸ್ಯ ಅಧೋಗಮನಾಯೇತಿ.'**

ನಿಷಿದ್ಧಕರ್ಮಗಳನ್ನು ಪ್ರೇರಿಸಿದರೂ ದೇವತೆಗಳಿಗೆ ಅದರಿಂದ ಪಾಪಲೇಪವಿಲ್ಲ.

**ಜ್ಞಾನಕರ್ಮೇಂದ್ರಿಯಗತೈಃ ಬ್ರಹ್ಮರುದ್ರಪುರಸ್ಸರೈಃ ।**
**ಸನ್ಮಾರ್ಗೇ ಪ್ರೇರಿತೋಽಹಂ ತ್ವಾಂ ಪೂಜಯಾಮ್ಯದ್ಯ ಮಾಧವ ॥★॥**

''ಓ ಸಿರಿಯೊಡೆಯ ! ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ಅಭಿಮಾನಿಗಳಾಗಿ ನಿಯಮಿಸುತ್ತಿರುವ ಬ್ರಹ್ಮ ರುದ್ರಾದಿಗಳಿಂದ ಸನ್ಮಾರ್ಗದಲ್ಲಿ ಪ್ರೇರಿತನಾದ ನಾನು ಇಂದು ನಿನ್ನನ್ನು ಪೂಜಿಸುವೆ.''

## ಕಲಶಪೂಜಾ

ಇದಾದ ಬಳಿಕ ಕಲಶ ಸ್ಥಾಪನೆ.

೧. ಪೂರ್ಣಕುಂಭ, ೨. ಸ್ನಾನಕುಂಭ ೩. ನಿರ್ಮಾಲ್ಯ ಅಭಿಷೇಕಕ್ಕಾಗಿ, ೪. ನೈವೇದ್ಯಪ್ರೋಕ್ಷಣಕ್ಕಾಗಿ, ೫. ಅರ್ಘ್ಯಾದಿ ಪಾತ್ರೆಗಳನ್ನು ತುಂಬುವದಕ್ಕಾಗಿ, ೬. ಪಾನೀಯಕ್ಕಾಗಿ, ೭. ನಮ್ಮ ಕೈ ತೊಳೆಯುವದಕ್ಕಾಗಿ, (೮. ಶಂಖಭ್ರಮಣಕ್ಕಾಗಿ, ೯. ಗಂಧವನ್ನು ತೇಯುವದಕ್ಕಾಗಿ)

ಹೀಗೆ ಅನೇಕ ಬಗೆಯ ಪಾತ್ರೆಗಳಲ್ಲಿ ಜಲಾಶಯದಿಂದ ಪ್ರತ್ಯೇಕವಾಗಿ ನೀರು ತುಂಬಿ ತರುವುದೇ ಮೇಲು.

ಅನಿವಾರ್ಯವಾದರೆ ಒಂದೇ ಪಾತ್ರವನ್ನು ತಂದು ಬೇರೆ ಬೇರೆ ಪಾತ್ರೆಗಳಲ್ಲಿ ವಿಭಾಗಗೈಯಬಹುದು.

ಇವುಗಳಲ್ಲಿಯ ಎರಡು ಕಲಶಗಳನ್ನು ಪೂಜಿಸುವದು. ಒಂದು ಸ್ನಾನೀಯ ಬೃಹತ್‌ಕಲಶ. ಇನ್ನೊಂದು ಅದಕ್ಕೂ ಚಿಕ್ಕದಾದ ಪೂರ್ಣಕಲಶ.

ಮೊದಲನೆಯ ಕಲಶಜಲವನ್ನು ಶಂಖದಿಂದ ಅಭಿಷೇಕ ಮಾಡಬೇಕು. ಎರಡನೆಯದನ್ನು ಕುಂಭವನ್ನೇ ಎತ್ತಿ ಅಭಿಷೇಕ ಮಾಡಬೇಕು.

ಬಳಿಕ ಈ ಎರಡು ಕಲಶಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ಧೇನು, ಗರುಡ, ಚಂದ್ರ, ನಾರಾಚ, ಹಂಸವೆಂಬ ಮುದ್ರೆಗಳನ್ನು ತೋರಿಸಬೇಕು.

ಗರುಡ ಮುದ್ರೆಯಿಂದ ವಿಷನಿವಾರಣೆ.

ಧೇನುಮುದ್ರೆಯಿಂದ ಅಮೃತಪರಿಪೂರಣ.

ಶಂಖಮುದ್ರೆಯಿಂದ ಪವಿತ್ರೀಕರಣ.

ಚಕ್ರಮುದ್ರೆಯಿಂದ ಸಂರಕ್ಷಣ.

ಗದಾ ಮುದ್ರೆಯಿಂದ ದಿಗ್ಬಂಧನ.

ಪದ್ಮ ಮುದ್ರೆಯಿಂದ ಜಲಶೋಧನ.

ಕಲಶದಲ್ಲಿ ತುಂಬಿದ ನೀರಿನ ಮೇಲ್ಭಾಗದಲ್ಲಿ ಆರುದಲದ ತಾವರೆಯನ್ನು ತುಲಸೀದಲದಿಂದ ಚಿತ್ರಿಸಬೇಕು.

ಆ ಕಲಶದಲ್ಲಿ ತುಲಸೀಪುಷ್ಪಗಳನ್ನು ಹಾಕಿ, ಬಲಗೈಯಿಂದ ಕಲಶವನ್ನು ಸ್ಪರ್ಶಿಸುತ್ತ,

''ಕಲಶಸ್ಯ ಮುಖೇ ವಿಷ್ಣುಃ......''

''ಕಲಶದ ಮುಖದಲ್ಲಿ ವಿಷ್ಣು, ಕಂಠದಲ್ಲಿ ರುದ್ರ, ಮೂಲದಲ್ಲಿ ಬ್ರಹ್ಮ. ಮಧ್ಯದಲ್ಲಿ ಮಾತೃಗಣಗಳು, ಕುಕ್ಷಿಯಲ್ಲಿ ಏಳು ಸಾಗರ, ಏಳುದ್ವೀಪ, ಇಡಿಯ ಪೃಥ್ವಿ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ ಎಂಬ ಆರು ವೇದಾಂಗಗಳು ಇದೆಲ್ಲದರ ಅಭಿಮಾನಿದೇವತೆಗಳು ನೆಲೆಸಿರುವರು.

ಇದಲ್ಲದೇ ಗಾಯತ್ರೀ, ಸಾವಿತ್ರೀ, ಪುಷ್ಟಿಕರೀ, ಶಾಂತಿ ಎಂಬ ಎಲ್ಲ ದೇವತೆಗಳು ದೇವರ ಪೂಜೆಗಾಗಿ ನನ್ನ ದುರಿತವನ್ನು ದೂರಮಾಡುವದಕ್ಕಾಗಿ ಕಲಶದಲ್ಲಿ ಬಂದು ನೆಲೆಗೊಳ್ಳಲಿ'' ಎಂದು ಪ್ರಾರ್ಥಿಸಬೇಕು.

**ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ [೧೦]ಸಚತಾ ಪರುಷ್ಣ್ಯಾ। ಅಸಿಕ್ನ್ಯಾಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥ (ಋ.೧೦-೭೫-೫)**

**ಅಭಿಪ್ರಾಯ ಹೇ ಗಂಗಾದಿ ನದೀ ದೇವತೆಗಳೇ ! ನನ್ನ ಸ್ತುತಿಯನ್ನು ಕೇಳಿರಿ.**

**ಅನ್ವಯ ಃ- ಗಂಗೇ, ಯಮುನೇ, ಸರಸ್ವತೀ, ಶುತುದ್ರಿ ಪರುಷ್ಣಿ ಅಸಿಕ್ನ್ಯಾ ಹೇ ಮರುದ್ವೃಧೇ**

''**ಗಂಗೆ, ಯಮುನೆ, ಸರಸ್ವತೀ** ಹೇ ಗಂಗೆ, ಯಮುನೆ, ಸರಸ್ವತಿ, **ಶುತುದ್ರಿ** ಸತ್‌ಲಜ್, **ಪರುಷ್ಣಿ** ರಾವೀ, **ಅಸಿಕ್ನ್ಯಾ** (ಪಂಜಾಬಿನ) ಚಂದ್ರಭಾಗಾ ಎಂಬ ನದೀಯಿಂದ ಸಹಿತವಾದ, ಹೇ **ಮರುದ್ವೃಧೇ** ಪಂಜಾಬಿನ ಮತ್ತೊಂದು ನದಿ, **ವಿತಸ್ತಯಾ** ಝೀಲಂ ನದೀಯಿಂದ ಹಾಗೂ **ಸುಷೋಮಯಾ** ಒಂದು ನದೀಯಿಂದ ಸಹಿತವಾದ, ಹೇ **ಆರ್ಜೀಕೀಯೇ** ಒಂದು ನದಿ, ಈ ಎಲ್ಲ ನದೀದೇವತೆಗಳೇ **ಮೇ ಇಮಂ ಸ್ತೋಮಂ** ನಮ್ಮ ಈ ಸ್ತೋತ್ರವನ್ನು **ಆ ಸಚತ** ಪ್ರೀತಿಯಿಂದ ಸ್ವೀಕರಿಸಿರಿ. **ಆ ಶೃಣುಹಿ** ಪ್ರೀತಿಯಿಂದ ಕೇಳಿರಿ.'' ಕಲಶಜಲದಲ್ಲಿ ಸನ್ನಿಹಿತರಾಗಲಿ ಎಂದು ಪ್ರಾರ್ಥಿಸಬೇಕು.

''ಗಂಗೇ ಚ ಯಮುನೇ ಚೈವ....''

---

**೧೦ ಬ್ರ.ವ್ಯಾಖ್ಯಾ - ಸಚಸ್ವಾ ನಃ ಸ್ವಸ್ತಯೇ ಇತ್ಯತ್ರ ರಕ್ಷ ಸಂತತ ಸೌಖ್ಯಾಯ ಇತಿ ಭಾಷ್ಯಮ್। ಸಚ ಸಮವಾಯೇ।**

''ಹೇ ಗಂಗೇ, ಯಮುನೇ, ಗೋದಾವರೀ, ಸರಸ್ವತೀ, ನರ್ಮದೇ, ಸಿಂಧು, ಕಾವೇರಿ ಈ ಎಲ್ಲ ದೇವತೆಗಳೇ ಈ ಕಲಶದ ಜಲದಲ್ಲಿ ಸನ್ನಿಹಿತರಾಗಿರಿ.''

**''ಸರ್ವೇ ಸಮುದ್ರಾಃ ಸರಿತಃ....''**

''ಎಲ್ಲ ಸಮುದ್ರ, ನದಿ, ನದ, ತೀರ್ಥಗಳ ಅಭಿಮಾನಿ ದೇವತೆಗಳೆಲ್ಲ ದೇವರ ಪೂಜೆಯಲ್ಲಿ ಅಭಿಷೇಕಕ್ಕಾಗಿ ಅತ್ಯಾದರದಿಂದ ಬಂದು ನೆಲೆಗೊಳ್ಳಲಿ'' ಎಂದು ಕೇಳಿಕೊಳ್ಳಬೇಕು.

ಎರಡೂ ಕಲಶಗಳ ಜಲದಲ್ಲಿ ವಿಷನಿವಾರಣೆಗಾಗಿ **''ಪಕ್ಷಿರಾಜಾಯ....'' ''ತತ್ಪುರುಷಾಯ...''** ಎಂಬ ಎರಡು ಮಂತ್ರಗಳಿಂದ ಗರುಡಮುದ್ರೆಯನ್ನು ತೋರಿಸಬೇಕು. ಅಮೃತವಾಗಿ ಮಾಡುವದಕ್ಕಾಗಿ **''ಸರ್ವಕಾಮದುಘೇ...''** ಎಂಬ ಮಂತ್ರದಿಂದ ಧೇನುಮುದ್ರೆಯನ್ನು, ಪವಿತ್ರಗೊಳಿಸುವದಕ್ಕಾಗಿ **''ನಮೋ ಭಗವತೇ...''** ಎಂಬ ಮಂತ್ರದಿಂದ ಶಂಖಮುದ್ರೆಯನ್ನು, ಸಂರಕ್ಷಣಕ್ಕಾಗಿ **''ನಮಃ ಸುದರ್ಶನಾಯ...''** ಎಂಬ ಮಂತ್ರದಿಂದ ಚಕ್ರಮುದ್ರೆಯನ್ನು, ದಿಗ್ಬಂಧನಕ್ಕಾಗಿ **''ನಮೋ ಭಗವತ್ಯೈ ಗದಾಯೈ...''** ಎಂಬ ಮಂತ್ರದಿಂದ ಗದಾಮುದ್ರೆಯನ್ನು, ಜಲಶೋಧನಕ್ಕಾಗಿ ಪದ್ಮಮುದ್ರೆಯನ್ನು, ಚಂದ್ರಮುದ್ರೆ-ಯನ್ನು, ನಾರಾಚಮುದ್ರೆಯನ್ನು ಮತ್ತು ಹಂಸಮುದ್ರೆಯನ್ನು ತೋರಿಸಬೇಕು.

ಆ ಎರಡೂ ಕಲಶಗಳ ಜಲದಲ್ಲಿ ಷಟ್ಕೋಣಪದ್ಮವನ್ನು ತುಲಸಿಯಿಂದ ಬರೆಯಬೇಕು. ಕಲಶದ ಮುಖಗಳ ಮೇಲೆ ಕೈಯನ್ನು ಇಡಬೇಕು.

ನಂತರ ಜಲದೇವತೆಗಳಾದ ಬುಧ ವರುಣರನ್ನು ತದಂತರ್ಗತ ಭಾರತೀರಮಣ ಮುಖ್ಯಪ್ರಾಣದೇವರನ್ನು ತದಂತರ್ಯಾಮಿಯಾದ ಲಕ್ಷ್ಮೀನಾರಾಯಣನನ್ನು ಆವಾಹಿಸಬೇಕು.

ಬಳಿಕ ಸ್ನಾನೀಯ ಬೃಹತ್‌ಕಲಶದ (ನೀರಿನಲ್ಲಿ ಅಲ್ಲ.) ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ನಾರಾಯಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧರನ್ನು ಗಂಧಸಹಿತ ತುಲಸೀದಲದಿಂದ ಪೂಜಿಸಬೇಕು.

ನಂತರ ಎರಡೂ ಕಲಶಗಳ ನೀರಿನಲ್ಲಿ ಮುಂದೆ ನಿರೂಪಿಸುವಂತೆ ಪೀಠಪೂಜೆಯನ್ನು ಮಾಡಬೇಕು.

''ಓ ನಾರಾಯಣ, (ಹಗಲಿನ ಪೂಜೆಗಾಗಿ) ಸೂರ್ಯಾಂತರ್ಗತ (ರಾತ್ರಿ

ಪೂಜೆಗಾಗಿ ಶುಕ್ಲಪಕ್ಷದಲ್ಲಿ ಚಂದ್ರಾಂತರ್ಗತ, ಕೃಷ್ಣಪಕ್ಷದಲ್ಲಿ ಅಗ್ನ್ಯಂತರ್ಗತ) ಅಜಾದಿ ನೂರುದೇವತೆಗಳಿಂದ ಒಡಗೂಡಿ ಸ್ನಾನೀಯ ಬೃಹತ್‌ಕಲಶದಲ್ಲಿ ಸನ್ನಿಹಿತನಾಗು' ಎಂದು ಯಾಚಿಸಬೇಕು.

ಬಳಿಕ ಅಜ, ಆನಂದಾದಿ ರೂಪಗಳನ್ನು ಕಲಶದಲ್ಲಿ ಆವಾಹಿಸಬೇಕು. ಈ ಅಜ ಆನಂದಾದಿರೂಪಗಳೆಲ್ಲವೂ ಸೂರ್ಯನಿಂದ (ಚಂದ್ರನಿಂದ ಅಥವಾ ಅಗ್ನಿಯಿಂದ) ಹೊರಹೊಮ್ಮಿ ಎರಡೂ ಕಲಶಗಳಲ್ಲಿ ಪ್ರವೇಶಿಸುತ್ತವೆ ಎಂದು ಭಾವಿಸಬೇಕು.

ಸ್ನಾನೀಯ ಬೃಹತ್ ಕಲಶದಲ್ಲಿ (ಕ್ರಮವಾಗಿ) ಅಜಾದಿ ಶಿಂಶುಮಾರಾಂತ ದೇವತೆಗಳನ್ನು ಹಾಗೂ ಮೂಲನಾರಾಯಣನನ್ನು

ಹಾಗೂ ಪೂರ್ಣಕುಂಭದಲ್ಲಿ (ವ್ಯುತ್ಕ್ರಮವಾಗಿ) ಶಿಂಶುಮಾರಾದಿ ಅಜಾಂತ ದೇವತೆಗಳನ್ನು ಆವಾಹಿಸಬೇಕು. ಪೂರ್ಣಕುಂಭದಲ್ಲಿ ಮೂಲನಾರಾಯಣನನ್ನು ಆವಾಹಿಸಬಾರದು.

ಆಮೇಲೆ ಮಾತೃಕಾನ್ಯಾಸ, ತತ್ತ್ವನ್ಯಾಸ, ಕ್ರುದ್ಧೋಲ್ಕಾದಿ ಪಂಚಾಂಗನ್ಯಾಸ, ಅಷ್ಟಾಕ್ಷರನ್ಯಾಸಗಳನ್ನು ಮಾಡಬೇಕು.

**ಉದ್ಯದ್ಭಾಸ್ವತ್‌ಸಮಾಭಾಸಃ ಚಿದಾನಂದೈಕದೇಹವಾನ್ ।**
**ಶಂಕಚಕ್ರಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥★॥**

ಎಂಬ ಶ್ಲೋಕಗಳಲ್ಲಿ ಹೇಳಿದಂತೆ ಧ್ಯಾನಿಸಬೇಕು. ಎರಡೂ ಕಲಶಗಳನ್ನು ಮುಟ್ಟಿ ಭಗವಂತನ ವಿಶೇಷ ಸನ್ನಿಧಾನಕ್ಕಾಗಿ ಹನ್ನೆರಡು ಬಾರಿ ಮೂಲ ಮಂತ್ರವನ್ನು ಜಪಿಸಬೇಕು.

''ಓ ದೇವತೆಗಳೇ ! ಪೂಜೆ ಮುಗಿಯುವವರೆಗೆ ಈ ತಾಣದಲ್ಲಿಯೇ ನೆಲೆ ನಿಂತು ಭಕ್ತಿಯಿಂದ ನಾನು ಮಾಡುವ ಪೂಜೆಯನ್ನು ಸ್ವೀಕರಿಸಿ ಕಾಪಾಡಿರಿ'' ಎಂದು ಪ್ರಾರ್ಥಿಸಬೇಕು.

ಬಳಿಕ ಆವಾಹನ, ಸ್ಥಾಪನ, ಸನ್ನಿಧಾನ, ಸಮ್ಮುಖೀಕರಣ, ಸನ್ನಿರೋಧನ, ಅವಗುಂಠನ ಎಂಬ ಆರು ಮುದ್ರೆಗಳನ್ನು ಕಲಶದಲ್ಲಿ ತೋರಿಸಬೇಕು.

ಈ ಎಲ್ಲ ಮುದ್ರೆಗಳನ್ನು ತೋರಿಸುವಾಗ ನಾರಾಯಣ ಮಂತ್ರವನ್ನು ಪಠಿಸಬೇಕು.

ಈ ದೇವತೆಗಳಿಗೆ ಮೂಲ (ನಾರಾಯಣ) ಮಂತ್ರದಿಂದ ೧.ಅರ್ಘ್ಯ, ೨.ಪಾದ್ಯ, ೩.ಆಚಮನ, ೪.ಮಧುಪರ್ಕ, ೫.ಪುನರಾಚಮನ, ೬.ಸ್ನಾನ, ೭. ವಸ್ತ್ರ ೮.ವಿಭೂಷಣ, ೯.ಉಪವೀತ, ೧೦.ಆಸನಗಳೆಂಬ ಹತ್ತು ಉಪಚಾರಗಳನ್ನು ಹೂವಿನಿಂದಾಗಲೀ, ಪ್ರತ್ಯೇಕವಾದ ಪಾತ್ರೆಯಲ್ಲಿಯ ನೀರು ಹಾಕುತ್ತಲಾಗಲೀ ಸಮರ್ಪಿಸಬೇಕು.

ನಂತರ ೧೧.ಗಂಧವನ್ನು, ೧೨.ತುಲಸೀಪುಷ್ಪಗಳನ್ನು ಸಮರ್ಪಿಸಬೇಕು.

ಕಲಶದಲ್ಲಿರುವ ಮೂಲದೇವರ ಆವರಣಪೂಜೆಯನ್ನು[೧೧] ಮಾಡುವದು.

ಈ ಆವರಣ ದೇವತೆಗಳಿಗೆ ಪುನಃ ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ, ಸ್ನಾನ, ವಸ್ತ್ರ ವಿಭೂಷಣ, ಉಪವೀತ, ಆಸನ, ಗಂಧ, ಪುಷ್ಪಗಳೆಂಬ ಹನ್ನೆರಡು ಉಪಚಾರಗಳನ್ನು ಪ್ರತ್ಯೇಕವಾಗಿ ಸಮರ್ಪಿಸುವದು.

ಇಷ್ಟಾದ ಮೇಲೆ ಪೀಠ ದೇವತೆಗಳಿಗೂ ಆವರಣ ದೇವತೆಗಳಿಗೂ ಹಾಗೂ ಮೂಲರೂಪಕ್ಕೂ ಮಿಲಿತವಾಗಿ ೧೩.ಧೂಪ, ೧೪.ದೀಪ, ೧೫.ನೈವೇದ್ಯ, ೧೬.ನಮಸ್ಕಾರಗಳೆಂಬ ನಾಲ್ಕು ಉಪಚಾರಗಳನ್ನು, ಹೀಗೆ ಒಟ್ಟು ಷೋಡಶ (ಹದಿನಾರು) ಉಪಚಾರಗಳನ್ನು ಸಮರ್ಪಿಸಬೇಕು.

**ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಮ್ ।**
**ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥★॥**

''ನಾವು ಪೂಜಿಸಿದ ಕಲಶವು ಅರ್ಥಾತ್ ಈ ಎಲ್ಲ ದೇವತೆಗಳು ಭಕ್ತನಿಗೆ ಧವಲಕೀರ್ತಿ, ದೀರ್ಘ ಆಯುಷ್ಯ, ಶುದ್ಧವಿದ್ಯೆ, ವಿಪುಲ ಮೇಧಾಶಕ್ತಿ, ಸಮೃದ್ಧ ಐಶ್ವರ್ಯ, ಅತುಲ ಬಲ, ಯೋಗ್ಯತೆಯ ಅಭಿವ್ಯಕ್ತಿ, ಪಾಪದ ಹಾನಿ ಹಾಗೂ ಪುಣ್ಯದ ವೃದ್ಧಿಯನ್ನು ದಯಪಾಲಿಸುವರು.''

**ಸರ್ವದೇವಮಯೋ ಯಸ್ಮಾತ್ ಸರ್ವವೇದಮಯೋ ಯತಃ ।**
**ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥★॥**

''ಪೂರ್ಣಕುಂಭದಲ್ಲಿ ಎಲ್ಲ ವೇದಾಭಿಮಾನಿಗಳೂ, ಎಲ್ಲ ದೇವತೆಗಳೂ ಸನ್ನಿಹಿತರಾಗಿರುವರು. ''ಕ್ಷೇತ್ರದೇವತೆಗಳು ಹೇಗೆ ಹರಿಪ್ರಿಯರೋ ಹಾಗೆ ಓ ಪೂರ್ಣಕುಂಭವೇ ! ನೀನೂ ಭಗವಂತನಿಗೆ ಪ್ರಿಯ. ಕಾರಣ ನಾನು ನಿನಗೆ ನಮಿಸುವೆ. ನೀನು ನನ್ನ ಮೇಲೆ ದಯೆ ತೋರು.''

೧೧ ಆವರಣ ಪೂಜೆಯನ್ನು ಮುಂದೆ ವಿವರವಾಗಿ ವರ್ಣಿಸುವೆವು.

# ಶಂಖಪೂಜೆ

ವಿಷ್ಣುವಿನ ಪೂಜೆಯನ್ನು ಶಂಖದಿಂದಲೇ ಮಾಡಬೇಕು. ಶಂಖದಿಂದ ವಿಷ್ಣುವನ್ನು ಮಾತ್ರ ಪೂಜಿಸಬೇಕು. ಈ ಎರಡೂ ನಿಯಮಗಳು ಮಹತ್ವಪೂರ್ಣವಾದದ್ದು.

ಶಂಖವಿಲ್ಲದೇ ದೇವರು ಎಂದೆಂದಿಗೂ ಪೂಜೆಯನ್ನು ಸ್ವೀಕರಿಸುವದಿಲ್ಲ. ಶಂಖದಲ್ಲಿ ಲಕ್ಷ್ಮೀಸನ್ನಿಧಾನ ಶಾಸ್ತ್ರಸಿದ್ಧ. ಲಕ್ಷ್ಮೀಯ ಮುಖಾಂತರವೇ ಭಗವಂತ ಸೇವೆಯನ್ನು ಕೈಕೊಳ್ಳುವ.

ಸಿರಿಯ ದ್ವಾರದಿಂದ ಶ್ರೀಹರಿಗೆ ಸಮರ್ಪಿಸಿದ ಸೇವೆ ಅನಂತ ಪುಣ್ಯಪ್ರದ. ಸಿರಿಯನ್ನು ಬಿಟ್ಟು ನೇರವಾಗಿ ಸಮರ್ಪಿಸಿದ ಸೇವೆ ಅಲ್ಪಫಲ, ಅಫಲ.

ಅಲ್ಲದೇ, ಸಿರಿಯು ಶ್ರೀಹರಿಯನ್ನೇ ಪೂಜಿಸುವಳು. ಪರರನ್ನಲ್ಲ. ಎಂದಮೇಲೆ ಸಿರಿಯ ಪ್ರತೀಕವಾದ ಶಂಖದಿಂದ ಬೇರಾವ ದೇವತೆಗಳನ್ನು ಸರ್ವಥಾ ಪೂಜಿಸಬಾರದು.

ಶಂಖದಿಂದ ಬೇರೆಯವರನ್ನು ಪೂಜಿಸಿದರೆ ಸಿರಿಯಿಂದ ಬೇರೆಯವರನ್ನು ಪೂಜೆಮಾಡಿಸಿದಂತೆ. ಇದು ಮಹಾ ಅನರ್ಥಸಾಧನ. ಆದ್ದರಿಂದ ಎಂದಿಗೂ ಮಾಡತಕ್ಕದ್ದಲ್ಲ.

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಮಿತಸ್ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥★॥

'ಓ ಶಂಖವೇ ! ಸಾಗರದಿಂದ ಹುಟ್ಟಿದ ನಿನ್ನನ್ನು ವಿಷ್ಣುವು ಕೈಯಲ್ಲಿ ಧರಿಸಿರುವ. ಎಲ್ಲ ದೇವತೆಗಳು ನಿನ್ನನ್ನು ನಮಿಸುವರು. ಪಾಂಚಜನ್ಯ ! ನಿನಗೆ ಎನ್ನ ನಮನ.

ಗರ್ಭಾ ದೇವಾರಿನಾರೀಣಾಂ ವಿಶೀರ್ಯಂತೇ ಸಹಸ್ರಶಃ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ॥★॥

'ಪಾತಾಲದಲ್ಲಿರುವ ಸಾವಿರ ಸಾವಿರ ದೈತ್ಯರ ಮಡದಿಯರ ಗರ್ಭಗಳು ನಿನ್ನ ನಾದ ಕೇಳಿ ವಿಶೀರ್ಣವಾಗುತ್ತವೆ.

ತವ ನಾದೇನ ಜೀಮೂತಾ ವಿದ್ರುವಂತಿ ಸುರಾಸುರಾಃ ।
ಶಶಾಂಕಾಯುತದೀಪ್ತಾಭ ಪಾಂಚಜನ್ಯ ನಮೋಽಸ್ತು ತೇ ॥★॥

'ನಿನ್ನ ನಾದ ಕೇಳಿ ಎಲ್ಲ ಮಲ್ಲರು, ಅಷ್ಟೇ ಅಲ್ಲ ಸುರಾಸುರರೂ ಪಲಾಯನ ಮಾಡುವರು. ಹತ್ತಾರು ಸಾವಿರ ಚಂದ್ರಮರ ಬೆಳಕಿನಂತೆ ಕಾಂತಿಯುಳ್ಳ ಪಾಂಚಜನ್ಯವೇ ! ನಿನಗೆ ನನ್ನ ನಮನ.'

ದರ್ಶನೇನ ಹಿ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ ।
ವಿಲಯಂ ಯಾಂತಿ ಪಾಪಾನಿ ಹಿಮವದ್ಭಾಸ್ಕರೋದಯೇ ॥★॥

'ಸೂರ್ಯ ಉದಿಸಿದಾಗ ಮಂಜು ಕರಗುವಂತೆ ಶಂಖದ ದರ್ಶನದಿಂದಲೇ ಪಾಪಗಳೆಲ್ಲವೂ ಕರಗುವವು; ಸ್ಪರ್ಶದಿಂದ ಇನ್ನೇನು.?

ನತ್ವಾ ಶಂಖಂ ಕರೇ ಧೃತ್ವಾ ಮಂತ್ರೇಣಾನೇನ ವೈಷ್ಣವಃ ।
ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯಮನಂತಕಮ್ ॥★॥

'ಈ ಮಂತ್ರಗಳಿಂದ ಶಂಖವನ್ನು ನಮಿಸಿ, ಕೈಯಲ್ಲಿ ಧರಿಸಿ, ದೇವರ ಅಭಿಷೇಕಮಾಡುವ ವಿಷ್ಣುಭಕ್ತನ ಪುಣ್ಯಕ್ಕೆ ಎಣೆಯಿಲ್ಲ.'

ತ್ರಿಲೋಕ್ಯಾಂ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥★॥

'ಮೂರ್ಲೋಕಗಳಲ್ಲಿರುವ ತೀರ್ಥದೇವತೆಗಳೆಲ್ಲ ದೇವರ ಆಜ್ಞೆಯಿಂದ ಶಂಖದಲ್ಲಿ ಸನ್ನಿಹಿತರಾಗಿರುವರು. ಕಾರಣ ಶಂಖವನ್ನು ಪೂಜಿಸಬೇಕು.'

ಶಂಖಂ ಚಂದ್ರಾರ್ಕದೇವತ್ಯಂ ಮಧ್ಯೇ ವರುಣದೇವತಮ್ ।
ಪೃಷ್ಠೇ ಪ್ರಜಾಪತಿಂ ವಿದ್ಯಾತ್ ಅಗ್ರೇ ಗಂಗಾ ಸರಸ್ವತೀ ॥★॥

'ಶಂಖಕ್ಕೆ ಚಂದ್ರ ಮತ್ತು ಸೂರ್ಯರು ದೇವತೆಗಳು. ಶಂಖದ ಮಧ್ಯಕ್ಕೆ ವರುಣ. ಬೆನ್ನಿನಲ್ಲಿ ಪ್ರಜಾಪತಿ. ತುದಿಯಲ್ಲಿ ಗಂಗಾ ಸರಸ್ವತಿಯರು ಇರುವರು.'

ಹೀಗೆ ಶಂಖವನ್ನು ಸ್ತುತಿಸಿ ಪ್ರಾರ್ಥಿಸಬೇಕು.

ಸ್ನಾನೀಯ ಜಲವನ್ನು ಉದ್ಧರಣೆಯಿಂದ ಶಂಖದಲ್ಲಿ ತುಂಬಿ, ತುಲಸಿ ಪುಷ್ಪಗಳನ್ನು ಹಾಕಿ,

ಓಂ [೧೨]ನಮೋ ಭಗವತೇ ಪಾಂಚಜನ್ಯಾಯ ಮಹಾಶಂಖಾಯ

---

೧೨ ಬ್ರ.ವ್ಯಾಖ್ಯಾ:- ಪಾಪತಲಮೇವ ಪಾತಲಮ್. ತದೇವ ಪಾತಾಲಮ್ । ದೇವರ್ಷಿಪಿತೃಪನರಾಃ ಇತಿ ಮುಕ್ತಾಸ್ತು ಪಂಚಧಾ ಇತಿ ತತ್ವಸಂಖ್ಯಾನಮ್ ।

ಸರ್ವಪಾತಾಲವಾಸಿನಾಂ ವಿಕ್ಷೋಭಕಾಯ ಹುಂ ಫಟ್ ಸ್ವಾಹಾ ||★||

ಅನ್ವಯ :- ಸರ್ವಪಾತಾಲವಾಸಿನಾಂ ವಿಕ್ಷೋಭಕಾಯ ಭಗವತೇ ಪಾಂಚಜನ್ಯಾಯ ಮಹಾಶಂಖಾಯ ನಮಃ. ಹುಂ ಫಟ್.

ಸರ್ವಪಾತಾಲವಾಸಿನಾಂ ಪಾತಾಲವಾಸಿಗಳಾದ ಅಥವಾ ಪಾಪತಲದಲ್ಲಿ ನೆಲೆಸುವ ಎಲ್ಲ ಪಾಪಿಗಳಿಗೆ ವಿಕ್ಷೋಭಕಾಯ ವಿಕ್ಷೋಭಗೊಳಿಸುವ ಭಗವತೇ-ಪೂಜ್ಯವಾದ, ಷಡ್ಗುಣಗಳುಳ್ಳ ಪಾಂಚಜನ್ಯಾಯ ದೇವ, ಋಷಿ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂಬ ಐದು ಜನರಿಗೆ

ಅಥವಾ ಪ್ರಾಣ ಚಕ್ಷು ಶ್ರೋತ್ರ ಅನ್ನ ಮನೋ ದೇವತೆಗಳೆಂಬ ಐದು ಜನರಿಗೆ,

ಪ್ರಾಣಾಪಾನವ್ಯಾನೋದಾನಸಮಾನರೆಂದು ಐದಾಗಿ ಅವತರಿಸಿದ ವಾಯುದೇವರಿಗೆ

ಭಾರತೀ, ವಾಣೀ, ವಾಯು, ಬ್ರಹ್ಮ, ರಮೆಯರೆಂಬ ಐದು ಜನರಿಗೆ

ಮುಕ್ತಿಗಾಗಿ, ನಿತ್ಯಾನಂದಕ್ಕಾಗಿ, ಜ್ಞಾನನೀಡಿ ಹಿತಮಾಡುವ, ಮಹಾಶಂಖಾಯ ಶಂಖೋತ್ತಮಕ್ಕೆ ನಮಃ ನಮನಗಳು. ಇದರಿಂದ ಹುಂ ಫಟ್ ಶತ್ರುಗಳ ನಿವಾರಣೆಯಾಗಲಿ.

ಪಾಂಚಜನ್ಯಾಯ ವಿದ್ಮಹೇ ಪಾವಮಾನಾಯ ಧೀಮಹಿ ।
ತನ್ನಃ ಶಂಖಃ ಪ್ರಚೋದಯಾತ್ ||★||

---

ಯಸ್ಮಿನ್ ಪಂಚ ಪಂಚ ಜನಾಃ ಇತಿ ಹಿ ಶ್ರುತಿಃ । ಸಹಮಾನಾನಾಮಾ ಶಂಖಃ ವಾಯವೇ ಜ್ಞಾನಂ ಪ್ರಾದಾತ್ ಇತಿ ಛಂದೋಗಾಃ । ಶ್ರಿಯೋಽಪಿ ಚ ಜ್ಞಾನಸ್ಫೂರ್ತಿಃ ಇತಿ ।

ತಸ್ಯ ಹಿತಂ ಪಂಚಜನಾತ್ ಉಪಸಂಖ್ಯಾನಂ ಇತಿ ಖೋ ವಿಹಿತಃ । ತಥಾಪಿ ಛಾಂದಸತ್ವಾತ್ ಸಾಧುಃ । ಯದ್ವಾ ಪಂಚ ಜನ್ಯಾನಿ ಅಸ್ಮಾತ್ ಇತಿ ವಾ, ಪಂಚಃ ಪ್ರಪಂಚಃ ಜನ್ಯಃ ಅಸ್ಮಾತ್ ಇತಿ ವಾ, ಪಂಚಃ ವಾಯೋಃ ಜ್ಞಾನವಿಸ್ತಾರಃ ಜನ್ಯಃ ಅಸ್ಮಾತ್ ಇತಿ ವಾ, ಅತ ಏವ ಪಾವಮಾನಃ ಇತ್ಯಪಿ ವಚನಮ್ ||

ಶಾಮ್ಯತೀತಿ ಶಂಖಃ । ಯೋಗ್ಯತಯಾ ಪಾತಕಮ್ । ಶಮೇಃ ಖಃ ಇತಿ ಉಣಾದೇಃ । ಖೇ ಛಿದ್ರೇ ವಿವರೇ । ಪಾತಾಲೇ ಶಂ ಶಾಂತಿಂ ಖಂ ಶೂನ್ಯಂ ಕರೋತಿ ಇತಿ ಶಂಖಃ ಪಾತಾಲವಾಸಿವಿಕ್ಷೋಭಕಃ । ಶಂ ಸುಖಪ್ರದಂ ಖಂ ಜ್ಞಾನಂ ಯಸ್ಮಾತ್ । ಬಲಜ್ಞಾನಸಮಾಹಾರಃ ಪೂರ್ಣಂ ಖಂ ಇತಿ ಶಬ್ದಿತಮ್ । ಇತಿ ಛಾಂದೋಗ್ಯಭಾಷ್ಯಾತ್ । ಖಂ ಸ್ವಃ ಸಂವಿದಿ ವ್ಯೋಮನೀಂದ್ರಿಯೇ । ಶೂನ್ಯೇ ಬಿಂದೌ ಇತಿ ಹೈಮಃ ||

ಎಂಬ ಮಂತ್ರಗಳಿಂದ ಮೂರು ಬಾರಿ ಅಭಿಮಂತ್ರಿಸಬೇಕು.

ಧ್ಯಾನ, ಆವಾಹನ, ಆಸನ, ಅರ್ಘ್ಯ, ಪಾದ್ಯ ಆಚಮನ, ಮಧುಪರ್ಕ, ಪುನರಾಚಮನ ಎಂಬ ಎಂಟು ಉಪಚಾರಗಳನ್ನು ಸಮರ್ಪಿಸಬೇಕು. ದೇವಪೂಜೆಯನ್ನು ಮಾಡಲು ನೀನು ಅನುಗ್ರಹಿಸು ಎಂದು ಕೇಳಿಕೊಳ್ಳಬೇಕು.

**ಅರ್ಘ್ಯಾದಿಪಾತ್ರಪೂಜೆ**

| | | | |
|---|---|---|---|
| ಅರ್ಘ್ಯ | ವಾಯವ್ಯ | ಶ್ರೀ | ದಾನಮುದ್ರಾ |
| ಪಾದ್ಯ | ನೈರ್ಋತ್ಯ | ಸರಸ್ವತಿ | ಅಂಜಲಿಮುದ್ರಾ |
| ಆಚಮನೀಯ | ಈಶಾನ್ಯ | ರತಿ | ಗೋಕರ್ಣಮುದ್ರಾ |
| ಸ್ನಾನೀಯ | ಆಗ್ನೇಯ | ವರುಣ | ಹಂಸಮುದ್ರಾ |
| ಮಧುಪರ್ಕ | ಮಧ್ಯ | ಬ್ರಹ್ಮ | ಸೂಕರೀಮುದ್ರಾ |
| ಪುನರಾಚಮನ | ಮಧ್ಯ | ಶಾಂತಿ | ಹಂಸಮುದ್ರಾ |

**ಅರ್ಘ್ಯಾದಿಪಾತ್ರಗಳಲ್ಲಿಯ ದೇವತೆಗಳಿಗೆ ಸಮರ್ಪಣೀಯ ದ್ರವ್ಯ.**

| | |
|---|---|
| **ಅರ್ಘ್ಯದಲ್ಲಿ** | ಕುಶಾಗ್ರಭಾಗ, ಸಾಸಿವೆ, ಎಳ್ಳು, ಹಣ್ಣು, ಹೂವು, ಅಕ್ಷತಾ, ಯವ, ಗಂಧ. |
| **ಪಾದ್ಯದಲ್ಲಿ** | ವಿಷ್ಣುಪರ್ಣೀ, ಎಳ್ಳು, ದೂರ್ವಾ, ಶಾಮಾಕ, ಪದ್ಮ, ಅಕ್ಷತಾ. |
| **ಆಚಮನೀಯ** | ಲವಂಗ, ಜಾಜೀಕಾಯಿ, ಕಂಕೋಲ, ಯಾಲಕ್ಕಿ, ಕರ್ಪೂರ, ಚಂದನ. |
| **ಮಧುಪರ್ಕ** | ದಧಿ ಮತ್ತು ಮಧು. |
| **ಸ್ನಾನೀಯ** | ಮಕರಂದ, ದೇವದಾರು, ಪ್ರವಾಳ, ಸುರಚಂದನ, ಧಾತ್ರಿ. |
| **ಪುನರಾಚಮನೀಯ** | ಲವಂಗ, ಜಾತಿ, ಕಂಕೋಲ, ಗಂಧಪುಷ್ಪ. |

ಈ ಪದಾರ್ಥಗಳೆಲ್ಲವೂ ಸಿಗದಿರುವಾಗ ಗಂಧ ತುಲಸೀ ಪುಷ್ಪಗಳನ್ನಷ್ಟೇ ಸಮರ್ಪಿಸಿದರೂ ಸಾಕು.

ಇಷ್ಟಾದ ಬಳಿಕ ಶಂಖಪೂಜೆ ಮಾಡುವಾಗ ಶಂಖದಲ್ಲಿ ಹಾಕಿ ಅಭಿಮಂತ್ರಿಸಿದ ನೀರಿನಿಂದ ಹೂವು ಹಣ್ಣು ಗಂಧ ನೈವೇದ್ಯ ಮುಂತಾದ ಪೂಜಾ ಸಾಧನೆಗಳನ್ನು ಅಲ್ಲದೇ (ತನ್ನನ್ನು) ದೇವರ ಪ್ರತಿಮೆಯನ್ನು ಮೂರು ಸಲ ಪ್ರೋಕ್ಷಿಸಬೇಕು.

## ಪಂಚಾಮೃತ ದ್ರವ್ಯಗಳ ಪೂಜೆ

| | | |
|---|---|---|
| | ಪೂರ್ವ<br>ಮೊಸರು ವಾಮನ | |
| ಉತ್ತರ<br>ಸಕ್ಕರೆ ಅಚ್ಯುತ | ಹಾಲು<br>ಹಾಲು ಗೋವಿಂದ | ದಕ್ಷಿಣ<br>ತುಪ್ಪ ವಿಷ್ಣು |
| | ಪಶ್ಚಿಮ<br>ಜೇನು ಮಧುಸೂದನ | |

ಈ ದೇವತೆಗಳನ್ನು ಪೂಜಿಸಬೇಕು.

ಬಳಿಕ ಗರುಡ, ಧೇನು, ಶಂಖ, ಚಕ್ರ, ಗದಾ ಎಂಬ ಐದು ಮುದ್ರೆಗಳನ್ನು ಆಯಾ ಮಂತ್ರಗಳಿಂದ ತೋರಿಸಬೇಕು.

ತುಲಸೀ ಪುಷಗಳನ್ನು ಹಾಕಬೇಕು. ಮೂಲಮಂತ್ರದಿಂದ ಹಾಗೂ ವಿಷ್ಣುಗಾಯತ್ರಿಯಿಂದ ಅಭಿಮಂತ್ರಿಸಿ ನಮಸ್ಕರಿಸಬೇಕು.

## ಪೂಜೆಯ ಪೂರ್ವಾಂಗ

ಇನ್ನು ಭಗವಂತನ ಪೂಜೆ ಆರಂಭವಾಗುವದು. ಅದಕ್ಕಾಗಿ ಮನಸ್ಸಿನ ಭಾವಿಕ ಸಿದ್ಧತೆ ಬೇಕು.

ಸರ್ವೋತ್ತಮ, ಅನಂತಶಕ್ತಿ, ನಿರವಧಿಕ ಸ್ವಾತಂತ್ರ್ಯ, ಅಸಂಖ್ಯರೂಪ, ಅಗಣಿತ ಅವಯವ, ಅಪರಿಮಿತ ಗುಣ, ಅಪಾರಕ್ರಿಯೆ, ಅಗಾಧವಾದ ಆನಂದ, ಅತುಲಜ್ಞಾನ, ಅದ್ಭುತ ಬಲ, ನಿರರ್ಗಳ ಐಶ್ವರ್ಯ, ನಿಸ್ಸೀಮ ವ್ಯಾಪ್ತಿ, ಅಪ್ರತಿಹತ ಸಂಕಲ್ಪ, ಅಮಿತ ತೇಜಸ್ಸು, ನಿರುಪಮ ಸೌಂದರ್ಯ, ಅನಂತ ಔದಾರ್ಯ, ಅಪಾರ ದಯೆ ಇತ್ಯಾದಿ ಗುಣಗಳುಳ್ಳವನು ಆ ದೇವ.

ಪರಿಮಿತಿ, ಪರಾಧೀನತೆ, ಹುಟ್ಟು, ಸಾವು, ನೋವು, ದುಃಖ, ರೋಗ, ಮುಪ್ಪು, ಚಿಂತೆ, ಸಂತಾಪ, ಅಜ್ಞಾನ, ಅಶಕ್ತಿ, ವೈಷಮ್ಯ, ನೈರ್ಘೃಣ್ಯ, ಪರಾಜಯ, ಮುಂತಾದ ಯಾವ ದೋಷಗಳೂ ಇಲ್ಲದವ ಆತ.

ಸಿರಿ ವಿರಿಂಚ ಹರಾದಿ ಅನಂತಾನಂತ ಜೀವನಿಯಾಮಕನಾದ ಸರ್ವೇಶ, ಸರ್ವಕರ್ತೃ, ಸರ್ವನಿಯಾಮಕ, ಸರ್ವಪ್ರೇರಕನಾಗಿರುವ ಭಗವಂತ.

ಅಂಥ ದೇವರ ಪೂಜೆಯನ್ನು ಮಾಡಲು ಹೊರಟಿದ್ದೇವೆ ಎನ್ನುವುದು ಕ್ಷಣಕ್ಷಣಕ್ಕೂ ಎಚ್ಚರವಿರಬೇಕು.

ಸಾಮಾನ್ಯವ್ಯಕ್ತಿಯ ಪೂಜೆಯಲ್ಲ ಇದು. ಗುರುಹಿರಿಯರ ವಂದನೆಯೂ ಅಲ್ಲ. ನವಗ್ರಹಗಳ ಅಥವಾ ಇಂದ್ರ ಶೇಷಾದಿಗಳ ಪೂಜೆಯೂ ಅಲ್ಲ.

ಲಕ್ಷ್ಮೀಬ್ರಹ್ಮಾದಿಗಳಿಂದ ನಿರಂತರ ಅನಂತವೈಭವಗಳಿಂದ ಪೂಜೆಗೊಳ್ಳುವ, ಇಷ್ಟಿದ್ದರೂ ಆ ಪೂಜೆಯಲ್ಲಿ 'ಅನಾದರಃ' ಆಸಕ್ತಿಮೋಹಗಳಿಲ್ಲದ ಭಗವಂತನನ್ನು ಪೂಜಿಸುತ್ತಿದ್ದೇವೆ.

'ಯಾತರವ ನಾನಯ್ಯ ಇಂದಿರೇಶ '

ಇಡಿಯ ವಿಶ್ವವೇ ಆತನ ಅಧೀನವಾಗಿರುವಾಗ ನನ್ನದೆಲ್ಲಿ ಪೂಜಾಸಾಧನಗಳು? ರಮಾಬ್ರಹ್ಮಾದಿಗಳಿಗೂ ಸ್ವಾತಂತ್ರ್ಯವಿಲ್ಲದಿರುವಾಗ ನನಗೆಲ್ಲಿ ಸ್ವತಂತ್ರಕರ್ತೃತ್ವ? ದೇವರನ್ನು ಪೂಜಿಸಲು, ಭಗವಂತನನ್ನು ಯಜಿಸಲು ಬ್ರಹ್ಮದೇವರಿಗೆ ಸಾಧನಗಳು ದೊರೆಯಲಿಲ್ಲ.

ದೇವರದ್ದಲ್ಲದನ್ನು ಒಂದನ್ನಾದರೂ ದೇವರಿಗೆ ಸಮರ್ಪಿಸೋಣ ಎಂದು ಪ್ರಪಂಚದ ಆಚೆ ಈಚೆ ಪರದಾಡಿ ಹುಡುಕಿದರೂ ಸಿಗಲಿಲ್ಲ. ಪೂಜಾ ಯಜ್ಞಗಳ ಸಾಧನಗಳೆಲ್ಲವೂ ದೇವರಿಂದ ಹುಟ್ಟಿವೆ, ದೇವರನ್ನು ಆಶ್ರಯಿಸಿವೆ. ದೇವರ ಅಧೀನವಾಗಿವೆ.

ಅಶ್ವಮೇಧಾದಿ, ಪ್ರಯಾಜಾದಿ ಯಜ್ಞ,

ಆಡು ಮೇಕೆ ಮುಂತಾದ ಪಶು,

ಅಶ್ವತ್ಥಾದಿ ವನಸ್ಪತಿ, ಬಗೆ ಬಗೆಯ ಕುಶ, ಯಜ್ಞಭೂಮಿ,

ವಸಂತಾದಿ ಕಾಲ, ಯಜ್ಞಕ್ಕೆ ಬೇಕಾದ ಧನ,

ವ್ರೀಹಿ ಮುಂತಾದ ಓಷಧಿ, ಆಜ್ಯ ಮುಂತಾದ ಸ್ನೇಹದ್ರವ್ಯ,

ಮಧುರಾದಿ ಕ್ಷೀರಾದಿ ರಸ, ಕಬ್ಬಿಣ ಮುಂತಾದ ಲೋಹ,

ಇಟ್ಟಿಗೆ ಮೊದಲಾದುದಕ್ಕೆ ಸಾಧನವಾದ ಮೃತ್, ಗಂಗಾದಿ ಜಲ,

ಋಕ್, ಯಜು, ಸಾಮ,

ಹೋತಾ, ಅಧ್ವರ್ಯು, ಉದ್ಗಾತೃ, ಬ್ರಹ್ಮರೆಂಬ ನಾಲ್ವರು ಮಾಡಬೇಕಾದ ಕರ್ಮವೆಂಬ ಚಾತುರ್ಹೋತ್ರ,

ಜ್ಯೋತಿಷ್ಟೋಮಾದಿ ಅಥವಾ ಅಗ್ನಿಇಂದ್ರಾದಿ ನಾಮಧೇಯ,

ಹೋಮಾದಿಗಳಲ್ಲಿ ಬಳಸುವ ಮಂತ್ರ,

ಯಜ್ಞದ ಸಾಂಗತೆಗೆ ಕೊಡಬೇಕಾದ ದಕ್ಷಿಣೆ, ಬ್ರಹ್ಮಚರ್ಯಾದಿ ವ್ರತ,

ಇಂದ್ರಾದಿದೇವತೆಗಳ ತಾರತಮ್ಯ (ಅಥವಾ ಪೂರ್ವೋತ್ತರೀಭಾವ) ಎಂಬ ದೇವತಾನುಕ್ರಮ,

ಯಜ್ಞಪ್ರಯೋಗದ ವಿಧಿಯನ್ನು ತಿಳಿಸುವ ಆಶ್ವಲಾಯನಾದಿ ಶ್ರೌತಸೂತ್ರ-ಗಳೆಂಬ ಕಲ್ಪ,

'ಈ ಯಾಗವನ್ನು ನಾನು ಮಾಡುವೆ' ಎಂಬ ಮಾನಸ ವಾಚಿಕ ಸಂಕಲ್ಪ,

ಕರ್ಮ ದೇವತಾ ಬ್ರಹ್ಮ ಮೀಮಾಂಸೆಗಳ ಸೂತ್ರ,

ಸ್ವರ್ಗಾದಿಫಲಗಳೆಂಬ ಗತಿ, ದೇವತಾ ಧ್ಯಾನಾದಿರೂಪ ಮತಿ,

'ಇಲ್ಲಿ ಹೇಳಿದ್ದು ಸತ್ಯ' 'ಇದರಿಂದ ನನಗೆ ಮಹಾಲಾಭ' ಎಂಬ ಆಸ್ತಿಕ್ಯಬುದ್ಧಿರೂಪವಾದ ಶ್ರದ್ಧೆ.

ಕರ್ಮಗಳಲ್ಲಿ ನಡೆದ ತಪ್ಪುಗಳನ್ನು ನಿವಾರಿಸಲು ಮಾಡುವ ಪ್ರಾಯಶ್ಚಿತ್ತ.

ಹರಿಪ್ರೀತಿ ಪ್ರಾರ್ಥನಾರೂಪವಾದ ಸಮರ್ಪಣೆ

ಮುಂತಾದ ಎಲ್ಲ ಯಜ್ಞ ಪೂಜಾದಿಸಾಧನೆಗಳು ದೇವರಿಂದ ಹುಟ್ಟಿವೆ. ದೇವರಿಗೆ ಅಧೀನವಾಗಿವೆ. ದೇವರನ್ನು ಆಶ್ರಯಿಸಿವೆ. ದೇವರು ಪ್ರೇರಿಸಿದಾಗ ಕಾರ್ಯಕಾರಿ ಆಗುವವು. ದೇವರು ಇಲ್ಲವಾಗಿಸಿದಾಗ ಇಲ್ಲವಾಗುತ್ತವೆ.

ಹೀಗಾಗಿ ದೇವರ ಅಧೀನವಾಗದ, ದೇವರಿಂದ ಹುಟ್ಟದ, ದೇವರ ಪ್ರೇರಣೆಯಿರದಿದ್ದರೂ ಕಾರ್ಯಕಾರಿ ಆಗುವ, ಒಟ್ಟಾರೆ ದೇವರ ಹಂಗಿಲ್ಲದೆ ತಾವೇ ತಾವು ಪಡೆಯಬಹುದಾದ ಹುಲ್ಲು, ಮಣ್ಣು ಮುಂತಾದ ಅತಿ ಕ್ಷುದ್ರ ಪದಾರ್ಥವೂ ಜಗದ್ವಿಧಾತೃವಾದ ಬ್ರಹ್ಮದೇವರಿಗೇ ದೊರೆಯದಿರುವಾಗ ನಮ್ಮದೇನು ಪಾಡು?

ನಾವು ಪೂಜೆಗಾಗಿ ಬಳಸುವ ಯಾವ ಪದಾರ್ಥ ನಮ್ಮದು ?

ಪೂಜಾಸಾಧನಗಳಲ್ಲಿ ಯಾವುದನ್ನು ನಾವೇ ನಾವಾಗಿ ನಿರ್ಮಿಸಿದ್ದೇವೆ ?

ಅಭಿಷೇಚನೆಯ ಜಲ, ಜಲದಲ್ಲಿಯ ರಸ, ಚಂದನದ ಕೊರಡು, ಕೊರಡಿನಿಂದ ಹೊರಡುವ ಗಂಧ, ಗಂಧದ ಪರಿಮಳ, ಅರ್ಚನೆಗೆ ತಂದ ಹೂವು,

ಹೂವಿನ ಕೊಮಲತೆ, ಜೊತೆಗಿರುವ ಸೌರಭ, ಸೌಂದರ್ಯ, ನಿವೇದಿಸುವ ಆಹಾರ, ಅವುಗಳನ್ನು ಸಿದ್ಧಪಡಿಸುವ ಧಾನ್ಯ ಕಾಳುಗಳು, ಹೊತ್ತಿಸಿ ಬೆಳಗುವ ದೀಪ, ಅದಕ್ಕಿರುವ ಪ್ರಕಾಶ ಇತ್ಯಾದಿ ಇತ್ಯಾದಿ ನೂರಾರು ಸಹಸ್ರಾರು ಕರಣ ಉಪಕರಣಗಳಲ್ಲಿ ಯಾವುದನ್ನು ನಾವು 'ನಮ್ಮ ಸ್ವಂತ'ವೆಂದು ಹೇಳಬಹುದು ?

ಇವೆಲ್ಲ ನಮ್ಮದೇ ? ಇವೆಲ್ಲವನ್ನು ನಿರ್ಮಿಸಿದವರು ನಾವೇ ? ಇವುಗಳ ಕ್ರಿಯಾಶೀಲತೆಗೆ ನಾವು ಕಾರಣರೇ ?

ಇದೆಲ್ಲ ವಿಶ್ವ ವಿಶ್ವನಾಥನ ಒಡೆತನಕ್ಕೆ ಸೇರಿದ್ದು. ಅವನ ಆಸ್ತಿ. ಅದನ್ನು ನಾವು ನಮ್ಮ ಆಸ್ತಿಯೆಂದು ಭಾವಿಸಿ, ದೇವರಿಗೆ ಸಮರ್ಪಿಸುತ್ತಿದ್ದೇವೆ ಎಂಬ ಎಚ್ಚರವಿರಬೇಕು.

ಅದಕ್ಕೆಂದೇ 'ಈಶಾವಾಸ್ಯಮಿದಂ ಸರ್ವಮ್' ಎಂದಿತು ಉಪನಿಷತ್ತು.

'ನಿನ್ನಾಧೀನ ಈ ಜಗವೆಲ್ಲ' ಎಂದರು ದಾಸರು.

ಈ ಚಿಂತನ ಮನದ ಆಳದಲ್ಲಿ ಸುಳಿಯುತ್ತಿರುವಾಗಲೇ ದೇವರ ಪೂಜೆ ಸಾಗಬೇಕು.

ಇದು ಮರ್ತ್ಯದೇಹದಲ್ಲೂ ಅಮೃತಾನುಭವ. ಈ ಅನುಭವ ಪರಮರೋಮಾಂಚಕಾರಿ. ಈ ಅನುಸಂಧಾನ ನಮ್ಮನ್ನು ಈ ಲೋಕದಿಂದ ಆಚೆ ಒಯ್ಯುವದು.

## ಪೀಠಪೂಜೆ

ದೇವರು ಸರ್ವೋತ್ತಮ, ಗುಣಪೂರ್ಣ, ವೇದವೇದ್ಯ, ದೇವನಾಥ, ರಮಾವಿರಿಂಚಾದಿಗಳಿಂದ ಅರ್ಚಿತ, ವಿಶ್ವವ್ಯಾಪ್ತ, ಅಸಂಗ.

ಇಂಥ ಭಗವಂತನನ್ನು ಕುಳ್ಳಿರಿಸುವದಕ್ಕೆ ಪೀಠವನ್ನು ಪರಿಕಲ್ಪಿಸಬೇಕು.

ಮನೆಗೆ ಚಿಕ್ಕವರು ಬಂದಾಗ ಚಿಕ್ಕ ಮಣೆಯಿಡುತ್ತೇವೆ. ದೊಡ್ಡವರಿಗೆ ದೊಡ್ಡ ಆಸನ. ಗುರುಗಳಿಗೆ ಗುರುತರ ಪೀಠ, ರಾಜನಿಗೆ ಸಿಂಹಾಸನ. ಹೀಗೆ ಹಿರಿತನ ಒಡೆತನಗಳಿಗೆ ತಕ್ಕಂತೆ ಅವರವರಿಗೆ ಪೀಠ ಎಂಬುದು ಲೋಕ-ಶಾಸ್ತ್ರಸಿದ್ಧ. ಈ ನಿಟ್ಟಿನಲ್ಲಿ ಎಣಿಕೆ ಹಾಕುತ್ತ ಗುಣಿಸುತ್ತ ಹೋದಂತೆ ನಿರವಧಿಕಾನಂತ-ಗುಣಮಯನಾದ ದೇವರಿಗೂ ತಕ್ಕುದಾದ ಪೀಠವನ್ನು ಸಮರ್ಪಿಸಬೇಕಲ್ಲವೇ?

ಅನಂತಕೋಟಿಬ್ರಹ್ಮಾಂಡನಾಯಕ, ದೇವದೇವೋತ್ತಮನಾದ, ಸಿರಿಯರಸ ಭಗವಂತನಿಗೆ ತಕ್ಕುದಾದ ಜಡಪೀಠವು ಇಡಿಯ ವಿಶ್ವದಲ್ಲಿ ಎಲ್ಲಾದರೂ ಸಿಗಲು ಸಾಧ್ಯವೇ ?

ಆದ್ದರಿಂದ ದಿವ್ಯದೇವತಾಮಯವಾಗದ ಕೇವಲ ಜಡಪೀಠವನ್ನು ದೇವರಿಗೆ ಸಮರ್ಪಿಸುವದು ಉಪಚಾರದ ಹೆಸರಿನಲ್ಲಿ ಮಾಡುವ ಮಹಾ ಅಪಚಾರವೇ ಸರಿ.

ಇನ್ನು ದೇವತಾಮಯವಾದ ಪೀಠವೂ ಭಗವಂತನಿಗೆ ತಕ್ಕುದಾದುದಿಲ್ಲ. ಆದರೂ ಅನಿವಾರ್ಯವಾದುದರಿಂದ ಶಾಸಕಾರರು ಮಹಾಮಹಾದೇವತೆಗಳಿಂದ ನಿರ್ಮಿತವಾದ ಭಗವಂತನ ಅದ್ಭುತಪೀಠದ ಪರಿಕಲ್ಪನೆಯನ್ನು ತಿಳಿಸಿರುವರು.

ಅವರು ತಿಳಿಸಿದ ಬಗೆಯನ್ನು ಬಗೆಯಲ್ಲಿ ಸ್ಮರಿಸಿ ನಮಿಸಿ ಕೃತಾರ್ಥರಾಗೋಣ.

ಪೀಠಕ್ಕೆ ನಾಲ್ಕು ಕಾಲುಗಳು. ನಾಲ್ಕು ಪಾದಗಳಲ್ಲಿ ಕೆಳಗಣ ಮತ್ತು ಮೇಲಣ ಎಂಬ ಎರಡು ಭಾಗಗಳು. ಆ ಪಾದಗಳ ಮೇಲೆ ವಿಶಾಲವಾದ ಫಲಕ.

ಪೀಠದ ಮಧ್ಯದಲ್ಲಿ ಪೂಜನೀಯ ಪರಮಾತ್ಮನನ್ನು ಸ್ಥಾಪಿಸಬೇಕು.

ದೇವರ ಸವ್ಯಭಾಗದಲ್ಲಿ ಗುರುಗಳಾದ ವಾಯುದೇವರನ್ನು ನಮಸ್ಕರಿಸಿ ಅನುಜ್ಞೆಯನ್ನು ಪಡೆಯಬೇಕು.

ದೇವರ ದಕ್ಷಿಣದಲ್ಲಿ ಪೀಠದ ಹೊರಗೆ ಸರ್ವದೇವತೆಗಳು (ಬ್ರಹ್ಮ, ವಿಷ್ಣು ಮಹೇಶ್ವರರು).

ಪುನಃ ಪೀಠದ ಹೊರಗೆ ದೇವರ ಎಡದಲ್ಲಿ ಸರ್ವಗುರುಗಳು (ಅಂದರೆ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ).

ಆ ಗುರುಗಳ ಮೈಬಣ್ಣ ಬೆಳ್ಳಗೆ. ಬಟ್ಟೆ ಬೆಳ್ಳಗೆ. ಒಂದು ಕೈಯಲ್ಲಿ ಪುಸ್ತಕ. ಇನ್ನೊಂದು ಕೈಯಲ್ಲಿ ವ್ಯಾಖ್ಯಾನ ಮುದ್ರೆ. 'ತಮ್ಮ ಬಿಂಬರೂಪಿಯಾದ ಪರಮಾತ್ಮನನ್ನು ಧ್ಯಾನಿಸುತ್ತಿರುವರು' ಎಂದು ಇವರನ್ನು ಧ್ಯಾನಿಸಬೇಕು.

ಪೂಜಾ ಕರ್ಮಗಳ ಆರಂಭದಲ್ಲಿ ಗುರುಗಳ ಧ್ಯಾನ ಅಗತ್ಯ. ಹೀಗೆ ಧ್ಯಾನಿಸಲು ಮಾನವ ಜ್ಞಾನವಂತನಾಗುವ.

### ಪೀಠದ ಪಾದದ ಕೆಳದೇವತೆಗಳು

| | | | |
|---|---|---|---|
| ಆಗ್ನೇಯ | ಗರುಡ | ನೈರ್ಋತ್ಯ | ವೇದವ್ಯಾಸ |
| ವಾಯವ್ಯ | ದುರ್ಗಾ | ಈಶಾನ್ಯ | ಸರಸ್ವತಿ |

### ಪೀಠದ ಪಾದದ ಮೇಲು ದೇವತೆಗಳು

| ದಿಕ್ಕು | ಅಭಿಮಾನಿ | ದೇವತೆ | ವೇಷ | ಬಣ್ಣ |
|---|---|---|---|---|
| ಆಗ್ನೇಯ | ಧರ್ಮ | ಯಮ | ಎತ್ತು | ಕೆಂಪು |
| ನೈರ್ಋತ್ಯ | ಜ್ಞಾನ | ವಾಯು | ಸಿಂಹ | ಶ್ಯಾಮ |
| ವಾಯವ್ಯ | ವೈರಾಗ್ಯ | ಶಿವ | ಭೂತ | ಹಳದಿ |
| ಈಶಾನ್ಯ | ಐಶ್ವರ್ಯ | ಇಂದ್ರ | ಗಜ | ಕಪ್ಪು |

### ಪೀಠದ ಫಲಕದೇವತೆಗಳು

| | | |
|---|---|---|
| ಪೂರ್ವ | ಅಧರ್ಮಾಭಿಮಾನಿ | ನಿರ್ಋತಿ |
| ದಕ್ಷಿಣ | ಅವೈರಾಗ್ಯಾಭಿಮಾನಿ | ಕಾಮ |
| ಪಶ್ಚಿಮ | ಅಜ್ಞಾನಾಭಿಮಾನಿ | ದುರ್ಗೆ |
| ಉತ್ತರ | ಅನೈಶ್ವರ್ಯಾಭಿಮಾನಿ | ರುದ್ರ |

ಅನಂತಗುಣಪೂರ್ಣನಾದ ಭಗವಂತನನ್ನು ಮೆಚ್ಚಿಸುವಂತೆ ವಿಧಿವತ್ತಾಗಿ ನಾವು ಪೂಜೆಯನ್ನು ಮಾಡಬೇಕಾಗಿದೆ.

ಭಗವಂತ ಮೆಚ್ಚುವದು ಭಕ್ತಿಗೆ ಹಾಗೂ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಿಗೆ ಮಾತ್ರ.

ಆದ್ದರಿಂದ ಭಕ್ತಿಯನ್ನು ಸಂಪಾದಿಸುವಂತೆ ಧರ್ಮ, ವಿಜ್ಞಾನ, ವೈರಾಗ್ಯ, ಐಶ್ವರ್ಯಗಳನ್ನು ಗಳಿಸುವದು ಅಷ್ಟೇ ಅಗತ್ಯ.

ಜೊತೆಗೆ ಅಧರ್ಮ, ಅಜ್ಞಾನ, ಅವೈರಾಗ್ಯ ಅನೈಶ್ವರ್ಯಗಳನ್ನು ಹೋಗಲಾಡಿಸುವದೂ ಆವಶ್ಯಕ.

ಧರ್ಮಾದಿ ನಾಲ್ಕು ಗುಣಗಳಿದ್ದಲ್ಲಿ ಭಗವಂತನ ಅಧಿಷ್ಠಾನವಿರುವದು ಎನ್ನುವದಕ್ಕೆ ಇದೊಂದು ಸಾಂಕೇತಿಕ ನಿದರ್ಶನ.

**ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ ।**
**ಐಶ್ವರ್ಯಂ ಚೈವ ಧರ್ಮಶ್ಚ ಸಹಸಿದ್ಧಂ ಚತುಷ್ಟಯಮ್ ॥★॥**

ಎಂದು ಹೇಳಿದಂತೆ ಬ್ರಹ್ಮವಾಯುದೇವರಿಗೆ ಸ್ವಾಭಾವಿಕವಾದ ಈ ನಾಲ್ಕು ಗುಣಗಳು ಅತೀ ಹೆಚ್ಚಿನ ಮಟ್ಟದಲ್ಲಿ ಇವೆ.

ಆದುದರಿಂದಲೇ ಅವರು ಭಗವಂತನ ಸರ್ವೋತ್ತಮ ಅಧಿಷ್ಠಾನರು.

ಅವರಲ್ಲಿ ಇರುವಷ್ಟು ದೇವರ ಸನ್ನಿಧಾನ ಇನ್ನಾರಲ್ಲೂ ಇಲ್ಲ.

ಅಂತೆಯೇ 'ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ' ಎಂಬ ವೇದವಾಣಿಯು ಪ್ರವೃತ್ತವಾಗಿದೆ.

ಈ ಕಾರಣದಿಂದಾಗಿ ''ಗುರುಭ್ಯೋ ನಮಃ'' ಎಂಬುದಾಗಿ ಧರ್ಮವಿಜ್ಞಾನ ವೈರಾಗ್ಯಪರಮೈಶ್ವರ್ಯಶಾಲಿ ವಾಯುದೇವರನ್ನು ಮೊದಲು ನಮಿಸಬೇಕು. ಅವರ ಕಾರುಣ್ಯ 'ನಮ್ಮ ಮೇಲೆ ಇರಲಿ' ಎಂದು ಪ್ರಾರ್ಥಿಸಬೇಕು.

ಇದೇ ರೀತಿ ''ಸರ್ವದೇವತಾಭ್ಯೋ ನಮಃ'' ಎಂದು ಬ್ರಹ್ಮ ವಿಷ್ಣು ಮಹೇಶ್ವರರನ್ನು ನಮಿಸಿ, ಪ್ರಾರ್ಥಿಸಬೇಕು.

ಬಳಿಕ, ಧರ್ಮಕ್ಕೆಯಮರಾಜನು ಅಭಿಮಾನಿ. ಅಂತೆಯೇ ಧರ್ಮಾಧರ್ಮಗಳ ಶಾಸನೆಯನ್ನು ಯಮಧರ್ಮನು ಮಾಡುವನೆಂದು ಶಾಸ್ತ್ರಪುರಾಣಗಳಲ್ಲಿ ಕೇಳುತ್ತೇವೆ.

ವಿಜ್ಞಾನಕ್ಕೆ ವಾಯುದೇವರು ಅಭಿಮಾನಿ. ಆದ್ದರಿಂದಲೇ 'ವಾಯು' ಶಬ್ದದಲ್ಲಿಯ 'ವಾ'ಕಾರವೇ ಜ್ಞಾನಗುಣವನ್ನು ಸೂಚಿಸುವದು. ವಾಸ್ತವದಲ್ಲಿ ವಾಯುದೇವರು ಎಲ್ಲ ಗುಣಗಳಿಗೆ ಅಭಿಮಾನಿಗಳು.

ವೈರಾಗ್ಯಕ್ಕೆ ಶಿವನು ಅಭಿಮಾನಿ. ಆದ್ದರಿಂದಲೇ ಭಸ್ಮ ಬಡಿದುಕೊಂಡು ಸ್ಮಶಾನದಲ್ಲಿ ಕಪಾಲಧರಿಸಿ ವಾಸವಾಗಿದ್ದಾನೆ.

ಐಶ್ವರ್ಯಕ್ಕೆ ಇಂದ್ರ ಅಭಿಮಾನಿ. ಸ್ವರ್ಗಲೋಕದ ಅಮರಾವತಿಯಲ್ಲಿ ಅಪಾರ ಐಶ್ವರ್ಯ ಶಾಸ್ತ್ರಸಿದ್ಧ.

ಆದ್ದರಿಂದ ಧರ್ಮಜ್ಞಾನಾದಿಗುಣಗಳ ಲೋಭ ಇದ್ದವರು ಈ ದೇವತೆಗಳನ್ನು ಲೋಪ ಮಾಡದೇ ಭಜಿಸಬೇಕು. ಅವರ ಕೃಪೆಯಿಂದ ಆ ಗುಣಲಾಭವಾಗುವದು ನಿಶ್ಚಿತ.

ಈ ನಾಲ್ಕು ಗುಣಗಳಲ್ಲಿ ಎರಡು ಜೊತೆ ಇದೆ. ಧರ್ಮವಿಜ್ಞಾನಗಳ ಒಂದು ಜೊತೆ. ವೈರಾಗ್ಯಐಶ್ವರ್ಯಗಳ ಇನ್ನೊಂದು ಜೊತೆ. ಇದು ತುಂಬ ಸಾಂಕೇತಿಕ.

ಕೇವಲ ಧರ್ಮ ಅಂಧಶ್ರದ್ಧೆಯಾದರೆ, ಕೇವಲ ಐಶ್ವರ್ಯ ಭೋಗಲೋಲು-ಪತೆಯಾದೀತು.

ಕೇವಲ ಧರ್ಮವಿದ್ದು ಲಾಭವಿಲ್ಲ. ಅದಕ್ಕೆ ಜ್ಞಾನದ ಬೆಂಬಲಬೇಕು.

ಕೇವಲ ಐಶ್ವರ್ಯವಿದ್ದರೆ ಸಾಲದು. ಅದನ್ನು ಅನುಭವಿಸುವಲ್ಲಿ ಅಂಕುಶವಾಗಿ ವೈರಾಗ್ಯವೂ ಬೇಕು.

ಆದ್ದರಿಂದ ಧರ್ಮಕ್ಕೆ ಜ್ಞಾನದ ಬಲ, ಐಶ್ವರ್ಯಕ್ಕೆ ವೈರಾಗ್ಯದ ನಿಯಂತ್ರಣ ಅಗತ್ಯ.

ಹಾಗೆಯೇ, ಕೇವಲ ಜ್ಞಾನ ಬರುಡು ಪಾಂಡಿತ್ಯವಾದರೇ ಕೇವಲ ವೈರಾಗ್ಯ ಅಭಾವವೈರಾಗ್ಯವಾದೀತು.

ಈ ಜ್ಞಾನವೈರಾಗ್ಯಗಳನ್ನು ಸಮಗ್ರಗೊಳಿಸುವದಕ್ಕಾಗಿಯೇ ಧರ್ಮ ಐಶ್ವರ್ಯಗಳೂ ಅನಿವಾರ್ಯವಾಗಿವೆ.

ಇದೇರೀತಿ ಅಧರ್ಮ, ಅವಿಜ್ಞಾನ, ಅವೈರಾಗ್ಯ, ಅನೈಶ್ವರ್ಯಗಳನ್ನು ನೀಗಿಹಾಕುವುದು ತುಂಬ ಅಗತ್ಯ.

ಅಧರ್ಮಕ್ಕೆ ನಿರ್ಋತಿ ಅಭಿಮಾನಿ. ಋತ ಎಂದರೆ ಧರ್ಮ. ನಿರ್ಋತಿ ಎಂದರೆ ಅಧರ್ಮ, ಪಾಪ. ಆ ದೇವತೆಯು ಪಾಪನಲ್ಲ. ಆದರೆ ಅವನು ಪಾಪದ ಅಭಿಮಾನಿ.

ದುರ್ಗೆ ತಮೋಗುಣದ ದೇವತೆ. ಅಜ್ಞಾನದ ತವರು ತಮೋಗುಣ. ಕಾರಣ ದುರ್ಗೆ ಅಜ್ಞಾನದ ದೇವತೆ.

ಕಾಮ ಅವೈರಾಗ್ಯಕ್ಕೆ ಅಭಿಮಾನಿಯೆನ್ನುವದು ಸ್ವತಃಸಿದ್ಧ.

ಅನೈಶ್ವರ್ಯ ಎಂದರೆ ದಾರಿದ್ರ್ಯ. ಅದಕ್ಕೆ ಮೇಲೆ ಹೇಳಿದಂತೆ ಸ್ಮಶಾನವಾಸಿ ಕಪಾಲಧಾರಿ ಬಿಕ್ಷುಕವೃತ್ತಿಯಲ್ಲಿರುವ ಮಹಾದೇವರು ಅಭಿಮಾನಿದೇವತೆ.

ವಾಯುದೇವರ ಬಳಿಕ ಸರ್ವಜೀವರಿಗಿಂತಲೂ ಉತ್ತಮರಾದ ಈ ಮಹಾದೇವರು ದುರ್ದೈವದಿಂದಾಗಿ ಸ್ಮಶಾನದಲ್ಲಿ ದಾರಿದ್ರ್ಯವನ್ನನುಭವಿಸುತ್ತಿಲ್ಲ.

ಆದರೆ ಭಗವಂತನ ಸಂಕಲ್ಪದ ಪ್ರಕಾರ ತಾವೇ ಸ್ವೇಚ್ಛೆಯಿಂದ ಈ ವೃತ್ತಿಯನ್ನು ಅವಲಂಬಿಸಿದ್ದಾರೆ. ಈ ಮಾತನ್ನು ನಿಖರವಾಗಿ ತಿಳಿಯುವದು ಅಗತ್ಯ.

ಅಧರ್ಮಾದಿಗಳಿಗೆ ಅಭಿಮಾನಿಗಳಾದ ನಿರ್ಋತಿ, ದುರ್ಗಾ, ಕಾಮ, ಶಿವ ಎಂಬ ಈ ನಾಲ್ಕು ದೇವತೆಗಳನ್ನು ಪೂಜಿಸಬೇಕು.

ಅವರನ್ನು ಪೂಜಿಸಿದರೆ ಅವರು ನಮ್ಮಲ್ಲಿರುವ ಅಧರ್ಮಾದಿಗಳನ್ನು ಅಟ್ಟಿ ಬೀಸಾಡುವರು. ಪೂಜಿಸದಿದ್ದರೆ ಅಧರ್ಮಾದಿಗಳಿಂದ ಅವರು ನಮ್ಮನ್ನು ಬಳಲಿಸುವರು. ಆದ್ದರಿಂದ ಅವರ ಪೂಜೆ ಅಗತ್ಯ.

ಈ ಎಲ್ಲ ದೇವತೆಗಳನ್ನು ನಾವಿಡುವ ಭಗವಂತನ ಪೀಠದಲ್ಲಿ ಸನ್ನಿಹಿತರಾಗಲು ಪ್ರಾರ್ಥಿಸಬೇಕು.

ಅವರೆಲ್ಲ ಭಗವಂತನ ಸೇವೆಗಾಗಿಯೂ ನಮ್ಮನ್ನು ಅನುಗ್ರಹಿಸು-ವದಕ್ಕಾಗಿಯೂ ಮಾನವಾದಿಗಳಿಗೆ ಅಚಿಂತ್ಯವಾದ ತಮ್ಮ ಶಕ್ತಿಯಿಂದ ಆ ಅಧಿಷ್ಠಾನಗಳಲ್ಲಿ ಒಂದಂಶದಿಂದ ಸನ್ನಿಹಿತರಾಗುವರು.

ಇದಾದ ಬಳಿಕ ಬ್ರಹ್ಮಾಂಡದ ಕೆಳಗಡೆಯಿಂದ ಇತ್ತ ಪೀಠವಿರುವವರೆಗೆ ಒಬ್ಬರ ಮೇಲೊಬ್ಬರಾಗಿ ಇರುವ ದೇವತೆಗಳನ್ನು ಸ್ಮರಿಸಿ ಪೂಜಿಸಬೇಕು.

ಇಲ್ಲಿ ತಿಳಿಯಬೇಕಾದದ್ದಿಷ್ಟು.

ನಾವಿರುವದು ಭೂಲೋಕದಲ್ಲಿ. ಅದಕ್ಕೆ ಕೆಳಗೆ ಏಳು ಲೋಕ. ಅದರ ಬುಡದಲ್ಲಿ ಅಗಾಧ ಜಲ. ಅದನ್ನು ಧರಿಸಿದ್ದು ಬ್ರಹ್ಮಾಂಡದ ಖರ್ಪರ.

ಅದರಾಚೆ ಪೃಥಿವೀ ತತ್ತ್ವದ ಆವರಣ. ಅದರ ಹೊರಗೆ ನೀರು, ಅಗ್ನಿ, ವಾಯು ಆಕಾಶ, ಅಹಂಕಾರ, ಮಹತ್ತತ್ತ್ವ, (ತಮಸ್, ರಜಸ್, ಸತ್ವ)ತ್ರೈಗುಣ್ಯ ಹೀಗೆ ಏಳು ಆವರಣಗಳು.

ಒಂದರ ಹೊರಗೆ ಒಂದು. ಹಿಂದಿನದರ ಹತ್ತು ಪಟ್ಟು ವಿಸ್ತಾರವಾಗಿ ಮುಂದಿನ ಆವರಣಗಳು ಇವೆ.

ಇಡಿಯ ಬ್ರಹ್ಮಾಂಡವನ್ನು ಹಾಗೂ ಅದರ ಹೊರಗಿರುವ ಈ ಏಳು ಆವರಣಗಳನ್ನು ಅಚಿಂತ್ಯ, ಅನಂತ, ಅದ್ಭುತಶಕ್ತಿಯ ಲೇಶಾತಿಲೇಶದಿಂದ ಧರಿಸಿರುವನು ಪರಮಪುರುಷ ನಾರಾಯಣ.

ಆ ನಾರಾಯಣನನ್ನವಲಂಬಿಸಿ ಅವನ ಮೇಲೆ ಆಧಾರಶಕ್ತಿ ನಾಮಕಳಾದ ರಮೆ ಇರುವಳು.

ಅವಳ ಮೇಲೆ ಇಡಿಯ ಬ್ರಹ್ಮಾಂಡವನ್ನು ಹೊತ್ತ ಕೂರ್ಮರೂಪನಾದ ವಿಷ್ಣು. ಅವನ ಬೆನ್ನೇರಿ ನಿಂತಿದೆ ಬ್ರಹ್ಮಾಂಡ ಖರ್ಪರ.

ಅದರೊಳಗೆ ಅಗಾಧ ಜಲ ಉಂಟು. ಅಲ್ಲಿ ಕೂರ್ಮರೂಪನಾದ ವಿಷ್ಣುವು ಇರುವ.

ಅವನ ಬಾಲವನ್ನಾಶ್ರಯಿಸಿ ಕೂರ್ಮರೂಪರಾದ ವಾಯುದೇವರಿರುವರು.

ವಾಯುಕೂರ್ಮನ ಬಾಲವನ್ನವಲಂಬಿಸಿ ಅದ್ಭುತಶಕ್ತಿಯ ಸಾವಿರಹೆಡೆಯ ಶೇಷ ನಿಂತಿರುವ.

ಶೇಷದೇವರಿಗೆ ಸಾವಿರ ಹೆಡೆಗಳು. ಸಾವಿರದಲ್ಲಿಯ ಒಂದು ಹೆಡೆಯ ಮೇಲೆ ಸಾಸಿವೆಯಂತೆ ನಿಂತಿದೆ ಈ ಚತುರ್ದಶಭುವನಾತ್ಮಕ ಪೃಥಿವೀ.

ಅದಕ್ಕೆ ಅಭಿಮಾನಿನೀ ಧರಾದೇವಿ. ಅದಕ್ಕೆ ಮೇಲೆ ಕ್ಷೀರಸಾಗರಾ-ಭಿಮಾನಿಯಾದ ವರುಣ. ಆ ಮೇಲೆ ರಮಾರೂಪವಾದ ಶ್ವೇತದ್ವೀಪ.

ಅಲ್ಲಿ ದಿವ್ಯ ರತ್ನಖಚಿತವಾದ ಹೊನ್ನದ ಮಹಾಮಂಟಪ. ಈ ಮಹಾಮಂಟಪದ ರೂಪವನ್ನು ಧರಿಸಿ ಸಿರಿದೇವಿ ದೇವರನ್ನು ಸೇವಿಸುತ್ತಿರುವಳು.

ಆ ಮಂಟಪದಲ್ಲಿ ಪದ್ಮ. ಅದೂ ರಮಾದೇವಿಯೇ. ಆ ತಾವರೆಗೆ ಆರು ದಲಗಳು. ಮುಂದೆ ಮೂರು. ಹಿಂದೆ ಮೂರು.

ಹಿಂದಿನ ಎಡದಲದಲ್ಲಿ ಸತ್ವಾಭಿಮಾನಿ ಶ್ರೀದೇವಿ. ಮಧ್ಯದಲ್ಲಿ ರಜೋಭಿಮಾನಿ ಭೂದೇವಿ. ಬಲದಲದಲ್ಲಿ ತಮೋಭಿಮಾನಿ ದುರ್ಗಾದೇವಿ.

ಎದುರಿನ ಎಡದಲದಲ್ಲಿ ಸೂರ್ಯ. ಮಧ್ಯದಲದಲ್ಲಿ ಚಂದ್ರ. ಬಲದಲದಲ್ಲಿ ಅಗ್ನಿ.

ಈ ಆರುದಲದ ತಾವರೆಯ ಮಧ್ಯದಲ್ಲಿ ಅಷ್ಟದಲದ ಕಮಲ. ಎತ್ತರವಾದ ಅಷ್ಟದಲದ ಕಮಲವನ್ನು ಏರುವದಕ್ಕೆ ನಾಲ್ಕು ದಿಕ್ಕಿನಲ್ಲಿ ಸೋಪಾನಗಳು.

ಆತ್ಮ ಅಂತರಾತ್ಮ ಪರಮಾತ್ಮ ಜ್ಞಾನಾತ್ಮರೆಂಬುವ ಭಗವಂತನ ನಾಲ್ಕು ರೂಪಗಳು. ಆ ರೂಪಗಳು (ಮೆಟ್ಟಲಿನ) ಸೋಪಾನದ ರೂಪದಲ್ಲಿ ನಿಂತಿವೆ.

ಪೂರ್ವದಲ್ಲಿ ಆತ್ಮ, ದಕ್ಷಿಣದಲ್ಲಿ ಅಂತರಾತ್ಮ, ಪಶ್ಚಿಮದಲ್ಲಿ ಪರಮಾತ್ಮ, ಉತ್ತರದಲ್ಲಿ ಜ್ಞಾನಾತ್ಮ.

ಬಳಿಕ, ಎಂಟು ದಳದ ಕಮಲ. ಆ ದಲಗಳಲ್ಲಿ ಕ್ರಮವಾಗಿ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ ಹಾಗೂ ಕರ್ಣಿಕೆಯಲ್ಲಿ (ಕಮಲದ ಮಧ್ಯಭಾಗದಲ್ಲಿ) ಅನುಗ್ರಹಾ.

ವಿಮಲಾದೇವತೆ ಛತ್ರವನ್ನು ಧರಿಸಿರುವಳು.

ಉತ್ಕರ್ಷಿಣೀ ಚಾಮರವನ್ನು ಹಾಕುವಳು.

ಜ್ಞಾನಾ ವ್ಯಜನ ಬೀಸುವಳು.

ಕ್ರಿಯಾ ದರ್ಪಣ ತೋರಿಸುವಳು.

ಯೋಗಾ ಗಾನ ಮಾಡುವಳು.

ಪ್ರಹ್ವೀ ನೃತ್ಯ ಮಾಡುವಳು.

ಸತ್ಯಾ ವಾದ್ಯಬಾರಿಸುವಳು.

ಈಶಾನಾ ಸ್ತುತಿಸುವಳು.

ಅನುಗ್ರಹಾ ಇವರೆಲ್ಲ ಮಾಡುವ ಸೇವೆಯನ್ನು ಸಮರ್ಪಿಸುವಳು.

ಈ ಒಂಬತ್ತು ರೂಪಗಳಲ್ಲಿ ಇಚ್ಛಾ, ಜ್ಞಾನ, ಕ್ರಿಯಾ ಎಂಬ ಮೂರು ಬಗೆಗಳಿವೆ. ಎಂದರೆ ವಿಮಲಾಜ್ಞಾನಾ, ವಿಮಲಾಕ್ರಿಯಾ, ವಿಮಲೇಚ್ಛಾ ಇತ್ಯಾದಿ. ಅಂದರೆ ಒಟ್ಟಿನಲ್ಲಿ ಇಪ್ಪತ್ತೇಳು ರೂಪಗಳಾದವು.

ಇವೆಲ್ಲ ಸಾಕ್ಷಾತ್ ಭಗವಂತನ ರೂಪಗಳೇ. ಇವುಗಳನ್ನು ಸ್ಮರಿಸುವದು ವಿಶೇಷಫಲ.

ಮುಂದೆ, ಅನುಗ್ರಹಾ ದೇವತೆಯ ಮೇಲೆ ದಿವ್ಯರತ್ನಮಯರಾದ ಯೋಗಪೀಠಸ್ವರೂಪರಾದ ಶೇಷದೇವರನ್ನು ಸ್ಮರಿಸಬೇಕು.

ಆ ಶೇಷದೇವರಲ್ಲಿ ರತ್ನಗಂಬಳಿ, ಮಂಚ, ತಲ್ಪ, ತಲೆಗಿಂಬು ಇವೆಲ್ಲ ರೂಪಗಳಿಂದ ಲಕ್ಷ್ಮೀದೇವಿಯೇ ಇರುವಳು. ಭಗವಂತ ಅಲ್ಲಿ ಕುಳಿತಿರುವ.

ಬ್ರಹ್ಮಾಂಡದ ಹೊರಗಿರುವ ಪರಮಪುರುಷನಿಂದ ಭಗವಂತನ ಪೀಠದವರೆಗಿರುವ ಎಲ್ಲ ದೇವತೆಗಳನ್ನು ಸ್ಮರಿಸಿ ನಮಿಸಿ ಆವಾಹಿಸಬೇಕು.

ಈ ಎಲ್ಲ ಪೀಠದೇವತೆಗಳ ಮಧ್ಯದಲ್ಲಿ ನಮ್ಮ ಅಂತರ್ಯಾಮಿಯಾದ ಬಿಂಬರೂಪೀ ಪರಮಾತ್ಮನನ್ನು ಆವಾಹಿಸಬೇಕು.

## ಅಂತರ್ಯಾಮಿ – ಬಿಂಬರೂಪ

ಸಾಕ್ಷಾತ್ ಭಗವಂತನು ಹಾಗೂ ಶ್ರುತಿಗಳು,

ವಿಶ್ವಗುರುಗಳಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು,

ಗುರುಸಾರ್ವಭೌಮರಾದ ಶ್ರೀಜಯತೀರ್ಥರು,

ಶ್ರೀನಾರಾಯಣಪಂಡಿತಾಚಾರ್ಯರು,

ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಘೂತ್ತಮರು,

ಶ್ರೀರಾಘವೇಂದ್ರರು, ಶ್ರೀಯಾದವಾರ್ಯರು, ಶ್ರೀವ್ಯಾಸತತ್ತ್ವಜ್ಞರು,

ಶ್ರೀವಿಷ್ಣುತೀರ್ಥರು, ಶ್ರೀವಿಜಯದಾಸರು ಮತ್ತು ಶ್ರೀಜಗನ್ನಾಥದಾಸರು ಇವರೆಲ್ಲರನ್ನು,

ವಿಶ್ವವಿಭೂತಿಗಳೆನಿಸಿದ ಅನನ್ಯಸಾಧಾರಣ ಕಾರ್ಯವನ್ನು ಮಾಡಿದ ಈ ಶತಮಾನದಲ್ಲಿ ವೈಷ್ಣವ ಸಿದ್ಧಾಂತವನ್ನು ಜೀವಂತವಾಗಿ ಉಳಿಸಿದ ನನ್ನ ಪರಮಗುರುಗಳಾದ ಶ್ರೀಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರನ್ನು

ತಪೋವಿದ್ಯಾವಿಭೂತಿಗಳಾದ, ಭಕ್ತಕೋಟಿಯನ್ನು ತಮ್ಮ ತಪಃಶಕ್ತಿಯಿಂದ ಅನುಗ್ರಹಿಸಿ ಉದ್ಧಾರ ಮಾಡಿದ, ವಿಶೇಷವಾಗಿ ನನ್ನ ಮೇಲೆ ಪರಮಾನುಗ್ರಹಗೈದ, ನನ್ನ ಮಹಾಗುರುಗಳಾದ ಶ್ರೀಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರನ್ನು,

ಅಪಾರಭಕ್ತಿ, ಅದ್ಭುತ ಜ್ಞಾನ, ಪ್ರಕಾಂಡ ಪ್ರತಿಭೆ, ಪರಮವೈರಾಗ್ಯ, ಸಿದ್ಧಾಂತ ಪ್ರಚಾರದ ಅದಮ್ಯದೀಕ್ಷೆ, ಸಮಾಜದ ಪ್ರಾಮಾಣಿಕ ಉದ್ಧಾರಾಕಾಂಕ್ಷೆ, ಶಾಂತಿ, ಕ್ಷಮಾ, ದಯಾ ಮುಂತಾದ ಗುಣಮಂಡಿತ ಗುರುವರೇಣ್ಯರಾದ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರನ್ನು,

ಮತ್ತು ನನ್ನ ಲಕ್ಷ ಕೋಟಿ ಜನ್ಮಗಳ ಪುಣ್ಯದಿಂದ ದೇವರು ನನಗೆ ಕರುಣಿಸಿದ ನನ್ನ ಸ್ವರೂಪೋದ್ಧಾರಕರೂ, ನನ್ನ ಪ್ರಾಣಸರ್ವಸ್ವರೂ, ಪರಮ ಆರಾಧ್ಯರೂ ಆದ (ನನ್ನ ಪಿತೃಪಾದರು ಶ್ರೀಮಾಹುಲಿ ಗೋಪಾಲಾಚಾರ್ಯರು) ಗುರುಗಳನ್ನು ಭಕ್ತಿಯಿಂದ ನೆನೆ ನೆನೆದು ವಂದಿಸಿ,

ಹಾಗೂ ವಿಷ್ಣುಭಕ್ತರಾದ ಸಕಲ ವಿದ್ವದ್ವರೇಣ್ಯರಿಗೂ ದಾಸಶ್ರೇಷ್ಠರಿಗೂ ನಮಿಸಿ ಬಿಂಬರೂಪ, ಚಿಂತನ ಮತ್ತು ಆವಾಹನಕ್ರಮವನ್ನು ವರ್ಣಿಸುವೆ.

## ಬಿಂಬಾಧೀನತೆ

ನಾವು ನಮ್ಮ ಬಿಂಬರೂಪಗಳ ಕುರಿತಾಗಿ ತಿಳಿಯುವುದು ಅತ್ಯಂತ ಅಗತ್ಯ.

''ನಾನು ಅಸ್ಮಿ'' ಎಂಬ ನುಡಿಗೆ ''ಅವನು ಅಸ್ತಿ'' ಎನ್ನುವದೇ ಆಸ್ತಿತಾರ. ನಮ್ಮ ಅಸ್ತಿತ್ವಕ್ಕೆ ಅವನ ಇಚ್ಛೆಯೇ ಮೂಲ. ನಮ್ಮ ಉಸಿರಾಟಕ್ಕೆ ಅವನೇ ಆಧಾರ.

ನಮ್ಮ ಅರಿವಿಗೆ ಅವನೇ ಆಲಂಬನ. ನಮ್ಮ ಕ್ರಿಯೆಗೆ ಅವನೇ ನಿದಾನ. ನಮ್ಮ ಮನಸ್ಸು ಇಂದ್ರಿಯ ದೇಹಗಳೆಲ್ಲ ಅವನಧೀನ.

ಇದನ್ನು ಸ್ವಲ್ಪ ವಿವರದೊಂದಿಗೆ ತಿಳಿಯೋಣ.

ನಮ್ಮ ಮಸ್ತಿಷ್ಕ (Brain) ಎಂಥ ವಿಚಿತ್ರ ! ಅದನ್ನು ಯಾವ ವಿಜ್ಞಾನಿಯೂ ಪೂರ್ಣಮಟ್ಟದಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ.

ಅದರಲ್ಲಿ ಯಾವುದೇ ಸಣ್ಣಕೊರತೆಯೂ ಬದುಕಿನ ಶಾಪವಾಗಬಹುದು.

ಮೆದುಳಿನಲ್ಲಿ ನಿತ್ಯವೂ ಅಬ್ಜ ಅಬ್ಜ ಸಂಖ್ಯೆಯಲ್ಲಿ ಹುಟ್ಟಿ ಸಾಯುವ, ಸತ್ತು ಹುಟ್ಟುವ ಜೀವಕೋಶಗಳು (Cells) ಅಗಾಧ ಪ್ರಪಂಚವನ್ನೇ ತೆರೆಯುತ್ತವೆ.

ಒಂದೊಂದು (Cell) ಜೀವಕೋಶವೂ ಹೊರಲಾಗದಷ್ಟು ಮಾಹಿತಿಗಳನ್ನು ಒದಗಿಸುವಲ್ಲಿ ಸಹಕಾರಿಯಾಗಿದೆ.

ಹತ್ತು ಇಪ್ಪತ್ತು. ಎಪ್ಪತ್ತು ಎಂಬತ್ತುವರ್ಷಗಳ ಹಿಂದಿನ ಅನುಭವಗಳ ಸಂಸ್ಕಾರಗಳನ್ನು ಶೇಖರಿಸುವಲ್ಲಿ ಉಪಕಾರಕವಾಗಿವೆ.

ಅತಿ ಬೃಹದಾಕಾರದ ಭಾರೀ ಸೌಕರ್ಯಗಳಿರುವ (Computer) ಗಣಕ-ಯಂತ್ರಕ್ಕಿಂತಲೂ ಅತ್ಯದ್ಭುತವಾಗಿದೆ ಮಾನವನ ಮಸ್ತಿಷ್ಕ.

ಇದರ ಒಂದೊಂದವಸ್ಥೆಯೂ ಅಚ್ಚರಿಗೊಳಿಸುವಂಥದು.

ಎಚ್ಚರ (ಜಾಗರ)ಒಂದು ಅವಸ್ಥೆಯಾದರೆ ಸ್ವಪ್ನ ಅದಕ್ಕೆ ತೀರ ಹೊರತಾದ ಅವಸ್ಥೆ.

ಮಾನವ ಎಷ್ಟು ಪ್ರಯತ್ನ ಮಾಡಿದರೂ ಎಚ್ಚರವಿರುವಾಗ ಅರ್ಥಾತ್ ಮಸ್ತಿಷ್ಕ ಪೂರ್ಣ ಕ್ರಿಯಾಶೀಲವಾಗಿರುವಾಗ ಸ್ವಪ್ನವನ್ನು ಕಾಣಲು ಸಾಧ್ಯವಿಲ್ಲ.

ನಿದ್ರೆ (ಸುಷುಪ್ತಿ) ಇದಕ್ಕೂ ಹೊರತಾಗಿರುವ ಅವಸ್ಥೆ. ಮೂರ್ಛೆ ಇದೆಲ್ಲವನ್ನೂ ಮೀರಿದ ಸ್ಥಿತಿ.

ಇದಲ್ಲದಂತೆ

ಸ್ವಾಭಾವಿಕ ಒಲವುಗಳು (Instincts), ಸಂವೇದನೆ (Sensation & Feeling), ಅನುಭವ (Experience,) ವಿವೇಕ Faculty of Discretion,, ಭಾವನೆ (Emotion), ಅವಧಾನ (ಏಕಾಗ್ರತೆ) (Attention), ನೆನಪು (Memory), ಗುರುತು ಹಿಡಿಯುವದು (Recognition), ಸ್ಫುರಣ (Flash), ಅನುಭವಿಸಿದ ಸಂಗತಿಗಳಲ್ಲಿ ವಿಭಜನ (Classification & Analysis), ಸಜಾತೀಯ ಸಂಯೋಜನ (Synthesis), ಭಾವೀಕರಣ (Abstraction), ವಿಮರ್ಶನ (Thinking) ಇತ್ಯಾದಿ ಇತ್ಯಾದಿ ಅಸಂಖ್ಯ ಸಂಮಿಶ್ರ ಸಂಕೀರ್ಣ

ಸಾಮರ್ಥ್ಯಗಳು (Mixture of Faculties & Complex Faculties of mind), ನಮ್ಮ ಮಸ್ತಿಷ್ಕಕ್ಕೆ (ಮನಸ್ಸಿಗೆ) ಇರುವವು.

ಇವುಗಳನ್ನೆಲ್ಲ ಬಳಸುವಾಗ ಆಶ್ಚರ್ಯವೆಂದು ತೋರದಿದ್ದರೂ ಅದರ ಕುರಿತು ಆಳವಾದ ಚಿಂತನ ನಡೆಸಿದಾಗ ಅತ್ಯದ್ಭುತ, ಅತ್ಯಗಾಧ ಎಂದು ತೋರುವಲ್ಲಿ ಸಂದೇಹವಿಲ್ಲ.

ಇಷ್ಟು ಮಾತ್ರವಲ್ಲ. ನಮಗಿರುವ ಪ್ರೇಮ-ದ್ವೇಷ, ವಿವೇಕ, ತಿಳಿವು, ದಯಾ-ಕ್ಷಮಾ, ಸತ್ಯ-ಸುಳ್ಳು, ದಮ, ಶಮ, ಸುಖ-ದುಃಖ, ಇರವು-ಅಳಿವು, ಭಯ-ಅಭಯ, ಸೌಭಾಗ್ಯ-ದೌರ್ಭಾಗ್ಯ, ರೋಗ-ಆರೋಗ್ಯ, ಸಿಟ್ಟು-ಸಹನೆ, ಸೊಕ್ಕು-ವಿನಯ, ಕ್ಷುದ್ರತೆ-ಉದಾರತೆ, ಭೋಗ-ತ್ಯಾಗ, ಹಗೆತನ, ಭಕ್ತಿ, ವೈರಾಗ್ಯ, ಶ್ರದ್ಧೆ, ನಿಷ್ಠೆ, ಚಿಂತನ, ನೆನಪು, ಜಾಗರ, ಸ್ವಪ್ನ, ಸುಷುಪ್ತಿ, ಸಮಾಧಿ, ಮೂರ್ಖೆ, ಆಲಸ್ಯ-ಚಟುವಟಿಕೆ, ಕಠೋರತೆ-ಮಾರ್ದವ, ನಾಚಿಕೆ, ಸ್ಥಿರತೆ-ಚಾಂಚಲ್ಯ, ತೇಜಸ್ಸು, ಧೈರ್ಯ, ದಂಭ, ದರ್ಪ, ಕಾಮ, ಸಂಶಯ, ಭ್ರಾಂತಿ, ಪ್ರತ್ಯಭಿಜ್ಞಾ, ಜಯ-ಪರಾಜಯ, ಲಾಭ-ಹಾನಿ, ತಟಸ್ಥವೃತ್ತಿ, ಬಲ, ದೌರ್ಬಲ್ಯ, ದರ್ಶನ, ಸ್ಪರ್ಶನ, ಭಾಷಣ, ಶ್ರವಣ, ಭೋಜನ, ಗಮನ, ಗ್ರಹಣ, ಉನ್ಮೇಷಣ, ನಿಮೇಷಣ, ಉತ್ಕ್ಷೇಪಣ, ಅಪಕ್ಷೆಪಣ, ಆಕುಂಚನ, ಪ್ರಸರಣ, ವರ್ಧನ, ಶಯನ, ಪೂಜನ, ಭೋಜನ, ಧ್ಯಾನ ಇತ್ಯಾದಿ ಇತ್ಯಾದಿ ಗುಣಕ್ರಿಯೆಗಳೆಲ್ಲವನ್ನು ಆಳವಾಗಿ ಚಿಂತಿಸುವಾಗ ನಮ್ಮ ಮನ ಮಸ್ತಿಷ್ಕಗಳೇ ನಮಗೆ ಊಹಾತೀತ ಅದ್ಭುತವಾಗಿ ತೋರುವದು.

ಇದಲ್ಲದೆ ಹೃದಯ, ಯಕೃತ್, ಕರುಳು, ಹೊಟ್ಟೆ, ಕಣ್ಣು, ಕಿವಿ, ಎಲುಬು, ತೊಗಲು, ನರಗಳು, ನಾಡಿಗಳು ಮುಂತಾದ ಒಂದೊಂದೂ ಊಹೆ ಮೀರಿದ ಅದ್ಭುತ.

ಇದೆಲ್ಲದರ ಒಡೆಯನೆಂದು ಹಮ್ಮಿನಿಂದ ಹೇಳಿಕೊಳ್ಳುವ ಜೀವನಿಗೆ ಗೊತ್ತಿಲ್ಲದಂತೆ ಎಣಿಕೆಯಿಲ್ಲದ ಕ್ರಿಯೆ-ವಿಕ್ರಿಯೆಗಳು ಆಗುತ್ತಲೇ ಇವೆ.

ಅಂದಮೇಲೆ ಎಲ್ಲಿಯ ಒಡೆತನ ಆ ಜೀವನಿಗೆ ?

ಎಲ್ಲಿಯ ಸ್ವತಂತ್ರತೆ ?

ಇದಕ್ಕೆಲ್ಲ ಕರ್ತೃ ಯಾರು ?

ಬಿಂಬರೂಪದೇವರು ರೂಪಾಂತರಗಳಿಂದ ಈ ಅಂಗಗಳಲ್ಲಿ ಹಾಗೂ ಅದರ ಅಣುತರ ಅಂಶಗಳಲ್ಲಿ ಇದ್ದು ಕಾರ್ಯ ನಡೆಸುತ್ತಲಿರುವ.

ಅನಾದಿ ಕಾಲದಿಂದ ಅನಂತಕಾಲದವರೆಗಿರುವ ನಮ್ಮ ಅಸಂಖ್ಯಾತ ತಂದೆ ತಾಯಿ, ಅಕ್ಕ-ತಂಗಿ, ಅಣ್ಣ-ತಮ್ಮ, ಹೆಂಡತಿ-ಮಕ್ಕಳು, ಬಂಧು-ಬಳಗ, ಶತ್ರು-ಮಿತ್ರ, ಉದಾಸೀನ, ಮನೆ-ಮಣ್ಣು, ಹೊಲ-ಹೊನ್ನು, ವ್ಯಾಪಾರ-ಉದ್ಯೋಗ, ಸಿರಿ-ಸಂಪತ್ತು. ರಾಜ್ಯ-ಅಧಿಕಾರ ಇತ್ಯಾದಿಗಳು,

ಹಾಗೂ ಇವುಗಳ ಬಗೆಗಿರುವ ಪ್ರೇಮ ಮೋಹ ಕಾಮ ದ್ವೇಷ ಔದಾಸೀನ್ಯಗಳನ್ನು ಕೊಟ್ಟವನೂ ಆ ಬಿಂಬರೂಪಿಯೇ.

ಅವನೇ ಇದಕ್ಕೆಲ್ಲ ಬುನಾದಿ, ಬೀಜ, ಆಸರೆ, ಆಧಾರ. ಹೀಗೆಂದಮೇಲೆ ನಾವೆಷ್ಟು ಅವನಧೀನರು ! ನಮಗೆಷ್ಟು ಅವನುಪಕಾರ ! ಲೆಕ್ಕ ಹಾಕಬೇಕು.

ಆದರೆ ಇದೆಲ್ಲ ಲೆಕ್ಕ ಮೀರಿದೆ !

ಹೀಗೆ ಮೊದಲಿಲ್ಲದ ಕಾಲದಿಂದ ಕೊನೆಯಿಲ್ಲದ ಕಾಲದವರೆಗೆ ಎಂದೆಂದಿಗೂ ಆ ದೇವನೇ ಒಳಹೊರಗೆ ತುಂಬಿ ನಮ್ಮ ಅಂತರ್ಯಾಮಿಯಾಗಿದ್ದು ನಮ್ಮ ಪ್ರಾರಬ್ಧಕರ್ಮವನ್ನನುಸರಿಸಿ ತನ್ನ ಸ್ವತಂತ್ರ ಸತ್ಯಸಂಕಲ್ಪಾನುಸಾರ ನಾನಾವಿಧ ಪುಣ್ಯಾಪುಣ್ಯಕರ್ಮಗಳನ್ನು ಮಾಡಿ ಮಾಡಿಸುವನು.

ಇದಲ್ಲದೇ ಇನ್ನೂ ಕೆಲವಂಶವನ್ನು ತಿಳಿಯಬೇಕಾದದ್ದುಂಟು.

ಜೀವರು ಬಾಹ್ಯವಾಗಿ ಮಾತ್ರ ದೇವರ ಅಧೀನರಾಗಿರುವದಲ್ಲ. ಆದರೆ ಅತ್ಯಂತ ಆಂತರಿಕವಾಗಿಯೂ ಜೀವರು ಭಗವದಧೀನರು-ಅರ್ಥಾತ್ ಅವರ ಸ್ವರೂಪವೂ ಭಗವದಧೀನ.

ಇದರ ತುಸು ವಿವರವನ್ನು ತಿಳಿಯೋಣ.

ಜೀವರು ಅನಾದಿ ನಿತ್ಯರು. ಅವರ ಈ ಅನಾದಿ ನಿತ್ಯತ್ವವು ಅಕಸ್ಮಾತ್ತಾಗಿ ಬಂದದ್ದಲ್ಲ. ಜೀವರು ತಾವೇ ತಾವಾಗಿ ಪಡೆದುಕೊಂಡದ್ದೂ ಅಲ್ಲ. ತನ್ನಷ್ಟಕ್ಕೆ ತಾನೇ ಇರುವಂಥ ಸ್ವಭಾವವೂ ಅಲ್ಲ.

ಏಕೆಂದರೆ ವಾಸ್ತವಿಕತೆಯಲ್ಲಿ ದೇವರ ಇಚ್ಛೆ ಇಲ್ಲದೆ ಯಾವುದೂ ಯಾರ ಸ್ವಭಾವವೂ ಆಗುವದಿಲ್ಲ.

ಕಾರಣ ಭಗವಂತನ ಇಚ್ಛೆಯಿಂದಲೇ ಜೀವರ ಅನಾದಿನಿತ್ಯತ್ವವು ಇರುವದು. ದೇವರ ಇಚ್ಛೆ ಇಲ್ಲದೇ ರಮಾ ಬ್ರಹ್ಮಾದಿ ಯಾವ ಜೀವರೂ ಅನಾದಿ ನಿತ್ಯರಾಗಿರಲು ಸಾಧ್ಯವಿಲ್ಲ.

ಜೀವರ ಸ್ವರೂಪವು ಧ್ವಂಸವಾಗಬಾರದು, ಅದನ್ನು ಧ್ವಂಸಗೊಳಿಸುವ ಯಾವ ಸಾಧನವೂ ಇರಬಾರದು ಎಂಬ ಭಗವಂತನ ಸತ್ಯಸಂಕಲ್ಪಕ್ಕನುಗುಣವಾಗಿ ಜೀವರು ನಿತ್ಯರಾಗಿರುವರು.

ಆದುದರಿಂದ ಭಗವಂತನ ಅಧೀನರಾಗಿ ಅವನಿಚ್ಛೆಯಿಂದ ಜೀವರು ಅನಾದಿನಿತ್ಯರು.

ಅವರ ಸ್ವರೂಪ ಅಪ್ರಾಕೃತ. ಅದು ಪ್ರಕೃತಿಯಿಂದ, ಸತ್ವರಜಸ್ತಮೋ-ಗುಣಗಳಿಂದ ಹುಟ್ಟಿದುದಲ್ಲ. ಅದು ಅಪ್ರಾಕೃತಚೈತನ್ಯಧಾತುಮಯ.

ಆ ಚೈತನ್ಯಧಾತುವೇ 'ಷೋಡಶೀಕಲಾ', ಹದಿನಾರನೆಯ ಕಲೆ. ಇದು ಮುಖ್ಯಪ್ರಾಣದೇವರಿಂದ ಅಭಿಮನ್ಯಮಾನ. ಇದು ಜೀವನಿಂದ ಅಭಿನ್ನ. ಇದುವೇ ಪ್ರತಿಬಿಂಬನಾದ ಜೀವನ ನಿತ್ಯೋಪಾಧಿ, ಇದಕ್ಕೆ ಬಿಂಬ ಭಗವಂತ.

ಆ ಬಿಂಬದೇವರು ಈ ಜೀವಸ್ವರೂಪದ ಅಂತರ್ಯಾಮಿಯಾಗಿರುವ. ಬಿಂಬನಾದ ಭಗವಂತನು ನಿತ್ಯನಾದುದದರಿಂದ ಪ್ರತಿಬಿಂಬನಾದ ಜೀವನಿಗೆ ನಾಶವಿಲ್ಲ.

ಬಿಂಬನಾದ ಭಗವಂತ ಜೀವರ ಸ್ವರೂಪದೇಹದ ಅಖಿಲ ಅಂಶಗಳಲ್ಲೂ ನಿಶ್ಛಿದ್ರನಾಗಿ ವ್ಯಾಪಿಸಿ ಇರುವ. ಅಂತೆಯೇ ಏಕಾಂಶಕ್ಕೂ ನಾಶವಿಲ್ಲ.

ತನ್ನ ಸನ್ನಿಧಾನದಿಂದ ಅಸ್ತಿತ್ವವನ್ನು ನೀಡಿ ಜೀವರನ್ನು ರಕ್ಷಿಸುವ ಬಿಂಬನ ಈ ವ್ಯಾಪಾರವು ಇಂದು ನಿನ್ನೆ ನಾಳೆ ಮಾತ್ರವಲ್ಲ.

ಉಮೇದು ಉತ್ಸಾಹಗಳು ಉಬ್ಬಿದಾಗ ಜೀವರನ್ನು ರಕ್ಷಿಸಿದ,

ಆಲಸ್ಯ ಗ್ಲಾನಿಗಳು ಬಂದಾಗ ಅವರನ್ನು ಎತ್ತಿ ಬೀಸಿ ಎಸೆದ,

ಸಿಟ್ಟಿನ ಕಾವೇರಿದಾಗ ಬೆಂಕಿಗೆ ನೂಕಿ ಭಸ್ಮ ಮಾಡಿದ ಎಂದಲ್ಲ.

ಅನಾದಿಕಾಲದಿಂದ ಅನಂತಕಾಲದವರೆಗೆ ಈ ಪರಿಯಲ್ಲೇ ಜೀವರ ಸ್ವರೂಪದಲ್ಲಿ ತನ್ನ ಸನ್ನಿಧಾನವಿಟ್ಟು ತನ್ನ ಅಚಿಂತ್ಯ ಅದ್ಭುತ ಅನಂತ ಶಕ್ತಿಯ ಅನಂತಾಂಶಲೇಶದಿಂದ ಅವರನ್ನು ಜತ್ತಾಗಿ ರಕ್ಷಿಸುತ್ತಾ ಇರುವ.

ಅಂತೆಯೇ ಎಲ್ಲ ಜೀವರೂ ಅನಾದಿ, ಅನಾಶಿ, ಅವಿಕಾರಿ, ನಿತ್ಯ, ಅಚ್ಛೇದ್ಯ, ಅಭೇದ್ಯ, ಅದಾಹ್ಯ, ಅಕ್ಲೇದ್ಯ, ಅಶೋಷ್ಯರಾಗಿರುವರು.

## ಬಿಂಬಸಾದೃಶ್ಯ

ಇದರ ಜೊತೆಯಲ್ಲಿ, ಎಲ್ಲ ಜೀವರು ಭಗವಂತನ ಸಾದೃಶ್ಯ ಉಳ್ಳವರು. ಆದ ಕಾರಣವೂ ಎಲ್ಲ ಜೀವರೂ ಪ್ರತಿಬಿಂಬರೆಂದು ಕರೆಯಲ್ಪಡುವರು.

ಸಾದೃಶ್ಯ ನಾನಾ ಬಗೆಯದು. ಆಕಾರ, ಜಾತಿ, ಸ್ತ್ರೀಪುರುಷತ್ವ, ಗುಣ, ಕ್ರಿಯಾ.

ಬಿಂಬರೂಪಿಯ ಆಕಾರದಂತೆ ಜೀವರೆಲ್ಲರ ಆಕಾರ.

ಬಿಂಬರೂಪನ ಜಾತಿಯಂತೆ ಜೀವರ ದೇವಮಾನವಪಶುಪಕ್ಷಿಕ್ರಿಮಿ ಜಾತಿಗಳು.

ಬಿಂಬರೂಪದಂತೆ ಸ್ತ್ರೀರೂಪ, ಬಿಂಬರೂಪದಂತೆ ಪುರುಷರೂಪ.

ಬಿಂಬನಂತೆ ಸತ್ಯ ನಿತ್ಯ ಅಪ್ರಾಕೃತ ಅನಾದಿ ಆಗಿರುವರು ಹಾಗೂ ಜ್ಞಾನಸ್ವರೂಪರೂ, ಇಚ್ಛಾ ಪ್ರಯತ್ನ ಮುಂತಾದ ಗುಣಧರ್ಮಗಳುಳ್ಳವರೂ ಆಗಿರುವರು.

ಬಿಂಬನು ಕುಳಿತಂತೆ ಕುಳಿತು, ನಿಂತಂತೆ ನಿಂತು, ನಡೆದಂತೆ ನಡೆದು, ನುಡಿದಂತೆ ನುಡಿದು, ನೋಡಿದಂತೆ ನೋಡಿ, ಉಂಡಂತೆ ಉಂಡು, ಓಡಾಡಿದಂತೆ ಓಡಾಡುವರು ಜೀವರು.

ಹೀಗೆ ಬಿಂಬ ಕ್ರಿಯೆಗಳಿಗೆ ಸದೃಶವಾದ ಕ್ರಿಯೆಗಳುಳ್ಳವರು.

ಉತ್ತಮ ಜೀವರಂತೂ ಭಗವಂತನಿಗೆ ಸದೃಶವಾಗಿ ಶುಭಗುಣವಂತರೂ ದೋಷರಹಿತರೂ ಆಗಿರುವರು.

ಅಪ್ರಾಕೃತ ಸ್ವರೂಪಾನಂದ, ದೈಹಿಕ ಸುಲಕ್ಷಣಗಳು, ಪ್ರೇಮ, ದಯಾ, ಕ್ಷಮಾ, ಸ್ನೇಹ, ಸೌಂದರ್ಯ, ದೀಪ್ತಿ, ಬಲ, ಓಜಸ್ಸು, ಸಹಸ್ಸು, ವಿವೇಕ, ತಿಳಿವು, ಸತ್ಯ, ದಮ, ಶಮ, ಅಭಯ, ಅಹಿಂಸಾ, ಸಂತೋಷ, ತೃಪ್ತಿ, ತಪಸ್ಸು, ಯಶ, ಸಿರಿ, ಸೌಭಾಗ್ಯ, ವಿನಯ, ಉದಾರತೆ, ಭೋಗ, ತ್ಯಾಗ, ಭಕ್ತಿ, ವೈರಾಗ್ಯ, ಶ್ರದ್ಧೆ, ನಿಷ್ಠೆ, ಮಾರ್ದವ, ಸ್ಥಿರತೆ, ತೇಜಸ್ಸು, ಧೈರ್ಯ, ವೀರ್ಯ, ಪರಾಕ್ರಮ, ಲಾವಣ್ಯ, ಕಾಂತಿ, ಐಶ್ವರ್ಯ, ಸೂಕ್ಷ್ಮತ್ವ, ಸ್ವಾಮಿತ್ವ, ಪ್ರಾಗಲ್ಭ್ಯ, ವ್ಯಾಪ್ತಿ, ಸತ್ಯಸಂಕಲ್ಪತ್ವ, ಸತ್ಯಕಾಮತ್ವ, ಪುಣ್ಯಗಂಧತ್ವ ಮುಂತಾದ ಕಲ್ಯಾಣಗುಣಗಳು;

ಹಾಗೂ ಕ್ಷುಧೆ, ಪಿಪಾಸೆ, ಸಂಗ, ಪಾಪ, ಮುಪ್ಪು, ಶೋಕ, ರೋಗ, ವ್ರಣ, ಕಾಮೋಪದ್ರವ, ಸತ್ತ್ವಾದಿಗುಣಬಂಧ ಮುಂತಾದ ದೋಷಗಳಿಂದ ಸ್ವರೂಪತಃ ನಿರ್ಮುಕ್ತತೆ ಉತ್ತಮಜೀವರಿಗೂ ಸ್ವರೂಪದಲ್ಲಿವೆ.

ಆದುದರಿಂದ ಉತ್ತಮರು ಭಗವಂತನಿಗೆ ಸಮೀಪದ ಪ್ರತಿಬಿಂಬರೆಂದೆನಿಸುವರು.

ಹೀಗೆ ಅನಾದ್ಯನಂತಕಾಲದಲ್ಲಿ ಸಕಲ ಚೇತನರು ಭಗವಂತನಿಗೆ ಅಧೀನರೂ, ಸದೃಶರೂ ಆಗಿರುವರು. ಇದುವೇ ಬಿಂಬಪ್ರತಿಬಿಂಬಭಾವ.

ದೇವರಿಗೂ ನಮಗೂ ಇರುವ ನಾನಾ ಬಗೆಯಾದ ಸಾದೃಶ್ಯವನ್ನು ಹಾಗೂ ವಿಶೇಷವಾಗಿ ಕ್ಷಣ ಕ್ಷಣಕ್ಕೂ ನಮಗಿರುವ ಅನಂತ ಬಗೆಯಾದ ಬಿಂಬಾಧೀನತೆಯನ್ನು ಪ್ರತಿನಿತ್ಯವೂ ಪ್ರತಿಕ್ಷಣವೂ ಸಾಧ್ಯವಿದ್ದಷ್ಟು ಬಿಡಿ ಬಿಡಿಯಾಗಿ ನೆನೆದು ನಮಗೂ ದೇವರಿಗೂ ಇರುವ ಬಿಂಬಪ್ರತಿಬಿಂಬಭಾವದ ಸಂಬಂಧವನ್ನು ಸ್ಮರಿಸಿ ಪೂಜಿಸಬೇಕು.

ಇಂಥ ಬಿಂಬರೂಪ ಭಗವಂತನು

೧) ನಮ್ಮ ಇಡಿಯ ಭೌತಿಕ ದೇಹದಲ್ಲಿ,

೨) ಭೌತಿಕದೇಹದ ಹೃದಯಕಮಲಕರ್ಣಿಕೆಯಲ್ಲಿ,

೩) ಇಡಿಯ ಜೀವಚೈತನ್ಯದಲ್ಲಿ ಹಾಗೂ

೪) ಜೀವಚೈತನ್ಯದ ಹೃದಯದಲ್ಲಿ ಇರುವ.

ಇದಲ್ಲದೇ ಹೃದಯದಲ್ಲಿ ಮೂರು ಮೂರ್ತಿಗಳು.

**೧. ಪ್ರಾದೇಶ, ೨. ಮೂಲೇಶ, ೩. ಅಗ್ರೇಶ.**

೧. ಪ್ರಾದೇಶನಾಮಕನು ಇಡಿಯ ಹೃದಯದಲ್ಲಿ ತುಂಬಿ ಜೀವರಿಗೆ ಆಶ್ರಯದಾತೃವಾಗಿ ಅವರ ನಿವಾಸ ಸ್ಥಾನನಾಗಿರುವನು.

೨. ಮೂಲೇಶನು ಹೃದಯಕಮಲದ ಕರ್ಣಿಕೆಯ ಮೂಲದಲ್ಲಿರುವನು. ಜೀವನನ್ನು ಅತ್ತ ಇತ್ತ ಹೋಗದಂತೆ ಜತ್ತಾಗಿ ಧರಿಸಿರುವ. ಹೆಬ್ಬೆರಳಿನ ಅಗ್ರಭಾಗದಷ್ಟು ಇವನ ಗಾತ್ರ.

೩. ಅಗ್ರೇಶನು ಇಡಿಯ ಅಂಗುಷ್ಠದಷ್ಟು ಪರಿಮಾಣವುಳ್ಳವ. ಹೃದಯಕಮಲ

ಕರ್ಣಿಕೆಯ ಅಗ್ರದಲ್ಲಿರುವನು. ಸುಷುಪ್ತಿ ಕಾಲದಲ್ಲಿ ಜೀವರನ್ನು ಬಳಿ ಸೆಳೆದು ಬಿಗಿದಪ್ಪಿ ಗಾಢವಾಗಿ ನಿದ್ರೆಗೊಳಿಸುವ. ಇವನೇ ಪ್ರಾಜ್ಞನಾಮಕ.

ಈ ಪ್ರಾಜ್ಞನಿಂದ ಹೊರ ಬಂದಾಗಲೇ ಜಾಗರ. ಇದೇ ಅಗ್ರೇಶನಾಮಕ ಪ್ರಾಜ್ಞರೂಪ ಭಗವಂತನನ್ನು ಈಗ ನಾವು ಪ್ರತಿಮೆಯಲ್ಲಿ ಆವಾಹಿಸುತ್ತಿರುವದು.

ಇವನನ್ನು ಧ್ಯಾನಿಸಿ, ಹೃದಯದಲ್ಲೊಮ್ಮೆ ಪೂಜಿಸಿ, ಆವಾಹಿಸಬೇಕು.

## ಹೃದಯಕಮಲವಿಕಾಸ

ಮೊದಲು ತನ್ನ ಬಿಂಬಮೂರ್ತಿಯನ್ನು ಸ್ಮರಿಸುವದು. ಈ ಬಿಂಬಮೂರ್ತಿಯ ಅಧಿಷ್ಠಾನ ಹೃದಯಕಮಲ. ಅದು ಅಧೋಮುಖವಾಗಿದೆ. ಕಮಲದಲಗಳ ತುದಿ ತುಸು ಒಳಗೆ ಮುದುಡಿದೆ ಎಂದರ್ಥ. (ಅಂತಃಕಿಂಚಿತ್ ಕುಂಚಿತಪತ್ರಾಗ್ರಂ).

ಈ ಕಮಲವನ್ನು 'ಯಂ' ಎಂಬ ವಾಯುಬೀಜಾಕ್ಷರವನ್ನುಚ್ಚರಿಸಿ ಸಮ್ಮುಖ ಮಾಡಿಕೊಳ್ಳಬೇಕು.

ಬಳಿಕ ಓಂಕಾರವನ್ನು ಪಠಿಸಿ ಒಳಗೆ ಕುಂಚಿತವಾದ ಕಮಲದಲಗಳ ಅಗ್ರ-ಭಾಗವನ್ನು ಊರ್ಧ್ವಮುಖಗೊಳಿಸಬೇಕು. ನೆಟ್ಟಗೆ ಮಾಡಬೇಕು.

ದೇವರ ಜ್ಞಾನವೆಂಬ ಸೂರ್ಯನಿಂದ ಆ ತಾವರೆಯನ್ನು ಅರಳಿಸಬೇಕು.

ಹಿಂದೆ ಹೇಳಿದ ಎಲ್ಲ ಪೀಠದೇವತೆಗಳನ್ನು ಆ ತಾವರೆಯಲ್ಲಿ ಮತ್ತೊಮ್ಮೆ ನೆನೆದು ಅವರೆಲ್ಲರ ಮೇಲೆ ವಿರಾಜಮಾನನಾದ ಬಿಂಬಮೂರ್ತಿಯನ್ನು ಸ್ಮರಿಸಬೇಕು.

## ಎಂಟುದಳದ ಕಮಲ.

ಅಲ್ಲೊಂದು ಪೀಠ. ಆ ಪೀಠದಲ್ಲಿ ವಿರಾಜಿಸುವ ಬಿಂಬಮೂರ್ತಿಯನ್ನು ಪಾದಪೀಠದಿಂದಾರಂಭಿಸಿ ಮುಡಿಯ ಮುಕುಟದವರೆಗೆ ಧ್ಯಾನಿಸಬೇಕು.

## ಬಿಂಬರೂಪವರ್ಣನ

**ಅಷ್ಟಪತ್ರೇ ತು ಹೃತ್ಪದ್ಮೇ ಮಧ್ಯೇ ಸೂರ್ಯೇಂದುವಹ್ನಿಗಮ್ ।**
**ಪೀಠಂ ತನ್ಮಧ್ಯಪದ್ಮಸ್ಥಂ ನಾರಾಯಣಮನಾಮಯಮ್ ॥★॥**

''ಎಂಟುದಲದ ಹೃದಯಕಮಲದ ಕರ್ಣಿಕೆಯ ಮಧ್ಯದಲ್ಲಿ ಸೂರ್ಯ-ಮಂಡಲ ಅದರಮೇಲೆ ಚಂದ್ರಮಂಡಲ ಅದಕ್ಕೆ ಮೇಲೆ ಅಗ್ನಿಮಂಡಲ.

ಅಲ್ಲೊಂದು ಪೀಠ. ಪೀಠದ ಮೇಲಿರುವ ಪದ್ಮದ ಮಧ್ಯದಲ್ಲಿ ನಾರಾಯಣ ವಿರಾಜಮಾನ.''

ಉದ್ಯದಾದಿತ್ಯಸಂಕಾಶಂ ತೇಜಸಾಽನುಪಮಂ ಸದಾ ।
ಸಹಸ್ರೇಣಾಽಪಿ ಸೂರ್ಯಾಣಾಂ ಸಜ್ಜ್ಞಾನಾನಂದರೂಪಿಣಮ್ ॥★॥

''ಉದಿಸುವ ಸೂರ್ಯನಂತೆ ಕಾಂತಿಯುಳ್ಳವ. ಅನಂತಾನಂತ ಸೂರ್ಯರ ತೇಜಸ್ಸಿಗೆ ಸಮಾನನಾಗದವ. ನಿರ್ದೋಷ ಜ್ಞಾನಾನಂದಮಯದೇಹವುಳ್ಳವ.''

ಅತಿರಿಕ್ತತಲಂ ಭಾಸ್ವನ್ನಖವ್ರಾತವಿಭೂಷಿತಮ್ ।
ವೃತ್ತಜಂಘಂ ವೃತ್ತಜಾನುಂ ಹಸ್ತಿಹಸ್ತೋರುಮೀಶ್ವರಮ್ ॥★॥

''ದೇವರ ಪಾದತಲ ಅತಿಸುಂದರ ಕೆಂಪು. ಹೊಳೆಯುವ ನಖಗಳ ಸಮೂಹದಿಂದ ಭೂಷಿತ. ಅವನ ಜಂಘಾಯುಗಲ ದುಂಡಗಾಗಿದೆ. ಅವನ ಮೊಣಕಾಲು ದುಂಡಾಗಿದೆ. ಅವನ ತೊಡೆ ಆನೆಯ ಸೊಂಡಿಲಿನಂತೆ ಕ್ರಮವಾಗಿ ತೆಳ್ಳಗೆ.''

ಮಹಾಕಟಿತಟಾನದ್ಧಕಾಂಚೀಪೀತಾಂಬರೋಜ್ಜ್ವಲಮ್ ।
ನಿಮ್ನನಾಭಿಂ ಚ ತ್ರಿವಲಿಸಂವೃತೋದರಬಂಧನಮ್ ॥★॥

''ಅದ್ಭುತವಾದ ಕಟಿತಟಾ. ಅಲ್ಲಿ ಹೊಳೆಯುವ ಉಡಿದಾರ. ಭಾಸಮಾನ ಪೀತಾಂಬರ. ಅವನ ನಾಭಿ ತುಂಬ ಆಳ. ಉದರದಲ್ಲಿ ತ್ರಿವಲಿಗಳು ಕಂಗೊಳಿಸುತ್ತಿವೆ.''

ವಿಸ್ತಾರಿವಕ್ಷಸಂ ಭ್ರಾಜತ್ಕೌಸ್ತುಭಾಽಽಮುಕ್ತಕಂಧರಮ್ ।
ವನಮಾಲಾಧರಂ ಹಾರವೈಜಯಂತ್ಯಾದಿಭಿರ್ಯುತಮ್ ॥★॥

''ಅವನ ವಕ್ಷಸ್ಸು ವಿಸ್ತಾರ. ಭಾರಿ ಬೆಳಕಿನ ಕೌಸ್ತುಭ ಅವನ ಕುತ್ತಿಗೆಯಲ್ಲಿ ಶೋಭಿಸುತ್ತಿದೆ. ವನಮಾಲೆಯನ್ನು ಧರಿಸಿದ್ದಾನೆ. ಇನ್ನಿತರ ಹಾರಗಳನ್ನು ಹಾಕಿಕೊಂಡಿದ್ದಾನೆ. ವೈಜಯಂತೀ ಮಾಲೆಯನ್ನೂ ತೊಟ್ಟಿದ್ದಾನೆ.''

ಪೃಥುದೀರ್ಘಚತುರ್ಬಾಹುಂ ಶಂಖಚಕ್ರಗದಾಂಬುಜೈಃ ।
ಯುಕ್ತಮುನ್ನಿದ್ರಪದ್ಮಾಕ್ಷಂ ಸ್ಫುರನ್ಮಕರಕುಂಡಲಮ್ ॥★॥

''ಪೃಥುಲವು ದೀರ್ಘವೂ ಆಗಿವೆ ಅವನ ನಾಲ್ಕು ಬಾಹುಗಳು. ಶಂಖ, ಚಕ್ರ,

ಗದಾ, ಪದ್ಮಗಳನ್ನು ಧರಿಸಿವೆ. ಅರಳಿದ ಕಮಲದಂತೆ ಕಣ್ಣುಗಳುಳ್ಳವ. ಹೊಳೆವ ಮಕರಕುಂಡಲಗಳನ್ನು ಧರಿಸಿದವ.

**ಪೂರ್ಣಚಂದ್ರಾಯುತೋದ್ರಿಕ್ತಕಾಂತಿಸನ್ಮುಖಪಂಕಜಮ್ ।**
**ಸುಭ್ರುವಂ ಸುಲಲಾಟಂ ಚ ಕಬರೀಬದ್ಧಮೂರ್ಧಜಮ್ ॥★॥**

''ಅನಂತಪೂರ್ಣಚಂದ್ರರಿಗಿಂತ ಹೆಚ್ಚಾದ ಸೊಬಗಿನಿಂದ ಶೋಭಿಸುವ ಮುಖಪಂಕಜವುಳ್ಳವ. ಅವನ ಹುಬ್ಬುಗಳು ಮನೋಹರ. ಅವನ ಲಲಾಟ ಕಮನೀಯ. ಚಂದವಾಗಿ ಬದ್ಧವಾಗಿದೆ ಅವನ ಕೇಶಪಾಶ''

**ನಿಃಶೇಷದುಃಖಶಮನಂ ನಿತ್ಯಾನಂದಂ ಶುಚಿಸ್ಮಿತಮ್ ।**
**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಂ ಸ್ವಮೂರ್ತಿಗಣಮಧ್ಯಗಮ್ ॥★॥**

**ಬ್ರಹ್ಮವಾಯುಶಿವಾಹೀಶವಿಪ್ಯೈಃ ಶಕ್ರಾದಿಕೈರಪಿ ।**
**ಸೇವ್ಯಮಾನಂ ಸದಾ ಭಕ್ತ್ಯಾ ಧ್ಯಾಯೇನ್ನಿತ್ಯಂ ಸ್ವಶಕ್ತಿಕಮ್ ॥ ಇತಿ ॥''**

''ಭಕ್ತರ ದುಃಖವನ್ನು ನಿಃಶೇಷವಾಗಿ ನಾಶಗೊಳಿಸುವವ. ಸ್ವಯಂ ನಿತ್ಯಾನಂದ ಪೂರ್ಣ. ನಿತ್ಯಾನಂದವನ್ನು ದಯಪಾಲಿಸುವವ. ಅವನ ಮುಗುಳುನಗೆ ತುಂಬ ಚಂದ. ಶ್ರೀಭೂದೇವಿಯರಿಂದ ಆಲಂಗಿತನಾದವ. ಸ್ವಮೂರ್ತಿಗಳ ಸಮೂಹದ ಮಧ್ಯದಲ್ಲಿ ವಿರಾಜಿಸುವವ. ಬ್ರಹ್ಮ, ವಾಯು, ಶೇಷ, ಶಿವ, ಗರುಡರಿಂದ ಹಾಗೂ ಇಂದ್ರಾದಿಗಳಿಂದಲೂ ಎಲ್ಲ ಕಾಲದಲ್ಲಿ ಭಕ್ತಿಯಿಂದ ಸೇವಿತನಾದವ. ಇಂಥ ಸ್ವತಂತ್ರಶಕ್ತಿಯುಳ್ಳ ನಾರಾಯಣನನ್ನು ಸ್ಮರಿಸಿ ಆವಾಹಿಸಿರಿ.

ಇದೇ ರೀತಿ ಶಾಸ್ತ್ರದ ಬೇರೆಡೆಯಲ್ಲೂ ಭಗವಂತನ ವರ್ಣನೆಗಳು.

ಇಡಿಯ ಜಗದೊಡೆಯರು ಸಿರಿವಿಧಿವಾಯು ಮುಂತಾದ ಅಮರರು. ಅಮರರ ಮಸ್ತಕದಲ್ಲಿ ದಿವ್ಯಕಿರೀಟ. ಕಿರೀಟಗಳಲ್ಲಿ ಝುಗಝುಗಿಸುವ ಮಾಣಿಕ್ಯಗಳು.

ತಮ್ಮೊಡೆಯನ ದರ್ಶನಕ್ಕೆ ಕಾದ ದೇವತೆಗಳು ಲಗುಬಗೆಯಿಂದ ಬರುವರು. ದೇವರ ಪಾದಪೀಠಕ್ಕೆರಗುವರು. ಮಂಡೆಬಾಗಿ ನಮಸ್ಕರಿಸುವರು.

ಕಿರೀಟಮಣಿಗಳ ಘರ್ಷಣೆಯಿಂದ ಫಳಫಳ ಹೊಳೆಯುತ್ತಿದೆ ಪಾದಪೀಠ.

ಆ ಚಿನ್ನದ ಪಾದಪೀಠದಲ್ಲಿ ಕಂಗೊಳಿಸುತ್ತಿವೆ ಅಡಿದಾವರೆಗಳು.

ಅಂಗಾಲುಗಳಲ್ಲಿ ಶಂಖ, ಚಕ್ರ, ಪದ್ಮ, ಗದಾ, ವಜ್ರ, ಅಂಕುಶ, ಧ್ವಜ ಚಿಹ್ನಗಳಿವೆ.

ಅವನಡಿಗಳು ಕಮಲದಂತೆ ಮಿಗಿಲಾಗಿ ಕೆಂಪು. ಮಾವಿನ ಚಿಗುರಿನಂತೆ ಅತಿಯಾಗಿ ಕೋಮಲ. ಎತ್ತರವಾದ ಕಾಲುಗಳು. ತೆಳ್ಳನೆಯ ಬೆರಳುಗಳು. ಎಲ್ಲಾ ಬೆರಳುಗಳಲ್ಲಿ ಉಂಗುರಗಳು.

ಈ ಪಾದವನ್ನೇ ಪೂಜಿಸಿ ವಿಧಿ ಗಂಗೆಯನ್ನು ಹರಿಸಿದ. ಶಿವ ಈ ಪಾದತೀರ್ಥವನ್ನು ಧರಿಸಿ ಶಿವನಾದ.

ಈ ಪಾದಗಳು ಉದಿಸುವ ಭಾನುವಿನಂತೆ ಭಾಸಮಾನ, ಪ್ರಚಂಡ ತೇಜಃಪುಂಜ. ಒಂದೊಂದು ನಖಗಳಲ್ಲೂ ಅನಂತ ಸೂರ್ಯರಿಗಿಂತಲೂ ಮಿಗಿಲಾದ ಪ್ರಖರ ದೀಪ್ತಿ.

ಅಷ್ಟಿದ್ದರೂ ಕೋಟಿ ಕೋಟಿ ಚಂದ್ರಮರನ್ನು ಮೀರಿಸುವ ಶಾಂತಕಾಂತಿ. ಇದರ ನೆನಹು ಬಗೆಯ ಅನಾದಿ-ನಿಬಿಡ-ಅವಿದ್ಯಾಂಧಕಾರಕ್ಕೆ ಪಂಜು. ಪಾಪದ ಬೆಟ್ಟಕ್ಕೆ ಭಾರಿಯಾದ ಸಿಡಿಲು.

ಕಾಲಿನ ಕಿರುಗೆಜ್ಜೆಯ ನಿನಾದ ಅತಿಮಧುರ. ಗೆಜ್ಜೆಯ ಧ್ವನಿಯು ಕೇಳಿದವರ ಕಲೇವರವನ್ನೇ ಕಳೆಯುವದು. ದುಂಡಾಗಿದೆ ಇವನ ಕಾಲಿನ ಮಣಿಗಂಟು. ಮಾಂಸಲ ಅಂಗದಲ್ಲಿ ಅವಿತು ಹೋಗಿದೆ.

ಕ್ರಮವಾಗಿ ತೆಳ್ಳನಾಗುವ ಜಂಘಾಯುಗಲ ಆತನದು. ವಲಯಾಕಾರದ ಮೊಣಕಾಲು. ಆನೆಯ ಸೊಂಡಿಲಿನಂತೆ ಕ್ರಮವಾಗಿ ಸಣ್ಣಕಾಗುವ ತೊಡೆಗಳು.

ಬಾಳೆಯಕಂಬದಂತೆ ಕೋಮಲವೂ ದುಂಡನೆಯದೂ ಹೌದು. ಈ ತೊಡೆಗಳೆರಡನ್ನು ಎಡಬಲ ಧರಿಸಿ ಅಹೋ ಧನ್ಯ ಎಂದುಕೊಳ್ಳುತ್ತಾನೆ ಗರುಡದೇವ.

ಮೇರುಬೆಟ್ಟದಲ್ಲಿ ಮೂಡಿ ಬಂದ ಜಾಂಬೂನದ ಹೊನ್ನದಂತೆ ಹೊಳಪಿನ ಪೀತಾಂಬರ ಉಟ್ಟಿರುವ. ಸಿಂಹದಂತಹ ಕಟಿ ಸಿರಿಯನ್ನೂ ಮೋಹದ ಸೆರೆಯಲ್ಲಿ ಹಿಡಿಯುವುದು.

ಚಿನ್ನದ ಉಡಿದಾರ, ಪೀತಾಂಬರವು ಪುಟಕ್ಕಿಟ್ಟ ಹೊನ್ನದಂತೆಯೋ, ಕಾರ್ಮೋಡಗಳಲ್ಲಿ ಕಂಗೊಳಿಸುವ ಮಿಂಚಿನಂತೆಯೋ ಹೊಳೆಯುತ್ತಿದೆ.

ನಾಭಿಯು ಆಳವಾಗಿದೆ. ತೆಳ್ಳಗಾಗಿದೆ. ಬಲಕ್ಕೆ ಹೊರಳುವ ಅದರ ಸುಳಿ ಕಣ್ಣಿಗೆ ಆನಂದ ನೀಡುವದು.

ವಿಶ್ವವಿಧಾತೃವಾದ ಬ್ರಹ್ಮನನ್ನು ಹೆತ್ತ ತಾವರೆಯ ತವರು. ಹದಿನಾಲ್ಕು ಭುವನಗಳನ್ನು ನಿರ್ಮಿಸಿದ ಕಮಲದ ನೆಲೆ. ಎಲ್ಲೆ ಇಲ್ಲದ ಬ್ರಹ್ಮಾಂಡವನ್ನು ಹೊಟ್ಟೆಯಲ್ಲಿ ಮುಚ್ಚಿಹಾಕಿದರೂ ತೆಳ್ಳಗಿದೆ ಇವನ ಉದರ.

ಜೊತೆಗೆ ತುಂಬಿಕೊಂಡೂ ಇದೆ. ಅಲ್ಲಿ ಮೂರು ತೆಳ್ಳನೆಯ ಗೆರೆಗಳು. ಈ ಸೊಂಟ ಹಾಗೂ ಉದರಗಳ ಲಾವಣ್ಯಕ್ಕೆ ಮಾರು ಹೋಗಿ ಎಡಬಲದ ಮಡದಿಯರು ಶ್ರೀಭೂದೇವಿಯರು ಆನಂದವಾಗಿ ಆಲಿಂಗಿಸಿದ್ದಾರೆ.

ಮೇಲೆ ವಿಶಾಲವಾದ ವಕ್ಷಸ್ಸು, ಇದೇ ಸಿರಿಯ ಸೆರೆ, ಸಿರಿಯ ಆಸರೆ. ಇಲ್ಲಿಯೇ ಶ್ರೀವತ್ಸ ಕಣ್ಮನಗಳಿಗೆ ಸಂತಸ ಸುರಿಯುವದು.

ಸ್ವಯಂ ಅನಂತವಾದರೂ ವಕ್ಷಸ್ಥಲವು ಅಚಿಂತ್ಯಶಕ್ತಿಯಿಂದಾಗಿ ಎರಡು ಬಾಹುಗಳ ಮಧ್ಯದಲ್ಲಿದ್ದಂತೆ ತೋರುವದು.

ಕಂಠದಲ್ಲಿ ಕಣ್ಮಣಿಯಾದ ಕೌಸ್ತುಭ. ಇದಕ್ಕೆ ಬ್ರಹ್ಮನೇ ಅಭಿಮಾನಿ. ಕೋಟಿ ಕೋಟಿ ಭಾಸ್ಕರರ ಕಿರಣಗಳನ್ನು ನುಂಗುವಂಥದು. ಅಂಥ ಕೌಸ್ತುಭಕ್ಕೆ ಬೆಳಕು ಕೊಟ್ಟ ಕಂಠ ಈತನದು.

ಈತನಿಗೆ ನಾಲ್ಕು ಬಾಹುಗಳು. ಬಾಹುಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳು.

ನೂರು ಸುಳಿಯ ಶಂಖ ಲೆಕ್ಕವಿಲ್ಲದ ಚಂದ್ರಮರ ಕಾಂತಿಯನ್ನು ಧಿಕ್ಕರಿಸುವಂಥದು. ವೈಕುಂಠದಲ್ಲಿಯ ಶಂಖದ ಭೀಮಧ್ವನಿ ಪಾತಾಲದಲ್ಲಿಯ ದೈತ್ಯರ ಗರ್ಭಸ್ರಾವಕ್ಕೆ ಕಾರಣ.

ಕ್ರೂರಘೋರದೃಷ್ಟಿಯುಳ್ಳ ಯಾತುಧಾನ, ಪ್ರಮಥ, ಪ್ರೇತ, ಮಾತೃ, ಪಿಶಾಚ ಮೊದಲಾದವರನ್ನು ತನ್ನ ಭಯಾನಕ ಧ್ವನಿಯಿಂದ ದೂರ ಓಡಿಸುತ್ತದೆ. ನೆನೆದವರ ಪಾಪವನ್ನು ಬುಡಮೇಲೆ ಮಾಡುವದು.

ಮೇಲಿನ ಎಡಗೈಯಲ್ಲಿ ಚಕ್ರ. ಚಕ್ರಕ್ಕೆ ಸಾವಿರ ಹಲ್ಲುಗಳು. ಒಂದೊಂದೂ ಹಲ್ಲು ಪ್ರಳಯದ ಕಾಲಾಗ್ನಿಯನ್ನು ಕಾರುತ್ತದೆ. ಅಸುರರ ಕತ್ತನ್ನು ಕತ್ತರಿಸುತ್ತದೆ. ದೈತ್ಯ-ಪಿಶಾಚರಿಗೆ ಅಸಹ್ಯವಾಗುವ ತೇಜಸ್ಸು ಈ ಚಕ್ರಕ್ಕೆ, ಇದು ಮಹಾಪಾತಕನಾಶನ. ದಿವ್ಯಜ್ಞಾನಪ್ರದ.

ಕೆಳಗಿನ ಎಡಗೈಯಲ್ಲಿ ಕೌಮೋದಕೀ ಗದೆ. ಅದಕ್ಕೆ ಅಸ್ರಗಳು ಎಂಟು. ಅದರ ವೇಗ ಸಿಡಿಲಿನಂತೆ. ಅದು ಕೂಷ್ಮಾಂಡ, ವೈನಾಯಕ, ಯಕ್ಷ, ರಾಕ್ಷಸ, ಭೂತ, ಗ್ರಹಗಳನ್ನು ಚೂರ್ಣಗೊಳಿಸುತ್ತದೆ. ಶತ್ರುಗಳ ನೆತ್ತರು ನೆಕ್ಕಿ ಕೆಂಪಾಗಿ ಕಾಣುತ್ತದೆ.

ಬಲದ ಕೆಳಗೈಯಲ್ಲಿ ತಾವರೆ. ಆ ತಾವರೆಗೆ ಸಾವಿರ ದಲಗಳು. ಅದರ ಬಣ್ಣ, ಪರಿಮಳ, ಕಾಂತಿ, ಲಾವಣ್ಯಗಳೆಲ್ಲ ಲೋಕಾತೀತ, ಲೋಕವಿಲಕ್ಷಣ.

ಶಂಖಕ್ಕೆ ಅಭಿಮಾನಿದೇವತೆ ಶ್ರೀದೇವಿ ಹಾಗೂ ಅನಿರುದ್ಧ. ಚಕ್ರಕ್ಕೆ ಅಭಿಮಾನಿದೇವತೆ ದುರ್ಗೆ ಹಾಗೂ ಕಾಮ. ಗದೆಗೆ ವಾಯುದೇವರು ಅಭಿಮಾನಿಗಳು. ಪದ್ಮಕ್ಕೆ ಭೂದೇವಿ.

ಈ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ ನಾಲ್ಕು ಬಾಹುಗಳಿಗೆ ಸಹಮಾನಾ, ಜುಹೂ, ರಾಜ್ಞೀ, ಸುಭೂತಾ, ಎಂಬ ಹೆಸರುಗಳು ಇವೆ.

ದೇವರ ನಾಲ್ಕು ಕೈಗಳಿಂದ ವಾಯುದೇವರು ಜನಿಸಿದರು. ಆ ವಾಯುದೇವರಿಗೆ

ಚಕ್ರವನ್ನು ಧರಿಸಿದ (ಜುಹೂ) ಬಾಹುವು ಧರ್ಮವನ್ನು ದಯಪಾಲಿಸಿದೆ.

ಶಂಖವನ್ನು ಧರಿಸಿದ (ಸಹಮಾನ) ಬಾಹುವು ಜ್ಞಾನವನ್ನು, ಕರುಣಿಸಿದೆ.

ಗದೆಯನ್ನು ಧರಿಸಿದ್ದು (ರಾಜ್ಞೀ) ವೈರಾಗ್ಯವನ್ನು, ನೀಡಿದೆ.

ಪದ್ಮವನ್ನು ಧರಿಸಿದಂಥದ್ದು (ಸುಭೂತಾ) ಐಶ್ವರ್ಯವನ್ನು ದಯಪಾಲಿಸಿವೆ.

ಹೀಗೆ ವಾಯುದೇವರಲ್ಲಿ ಧರ್ಮ, ವಿಜ್ಞಾನ, ವೈರಾಗ್ಯ, ಐಶ್ವರ್ಯಗಳನ್ನು ತುಂಬಿವೆ ಈ ಬಾಹುಗಳು ಎಂದು ಸ್ಮರಿಸಬೇಕು.

ಕ್ರಮವಾಗಿ ತೆಳ್ಳಗಾಗುವ ರಮ್ಯ ಬಾಹುಗಳು. ಮೇಲ್ಭಾಗದಲ್ಲಿ ಅಂಗದ. ಅದರ ಕೆಳಕ್ಕೆ ನಾಗಮುರಿಗೆ. ಕೈಗಳಲ್ಲಿ ಕಂಕಣ. ಬೆರಳುಗಳಲ್ಲಿ ನವರತ್ನದ ಉಂಗುರ. ಉಗುರು ತೇಜೋಮಯ.

ಅಂಗೈ ಮಿಗಿಲಾಗಿ ಕೆಂಪಾಗಿದೆ. ಸಂಸಾರ ಸಾಗರದಲ್ಲಿ ಬಳಲಿ ಬೆಂಡಾಗಿ ಮುಳುಗಿ ಹೋಗುತ್ತಿರುವವರಿಗೆ ತನ್ನಾಸರೆಯನ್ನು ಕೊಟ್ಟು ಮುಕ್ತಿಮಂದಿರಕ್ಕೆ ಎತ್ತಿ ಒಯ್ಯುತ್ತದೆ.

ಅವನ ಕಂಠ ಶಂಖದಂತೆ ಚೆನ್ನು. ಕಂಠ ಸಾಕಷ್ಟು ಹ್ರಸ್ವ, ಅಲ್ಲಿ ಮೂರು ರೇಖೆಗಳು. ಅದು ಅನಂತವೇದಗಳ ಉದ್ಗಮ ಭೂಮಿ.

ಕೊರಳಲ್ಲಿ ವೈಜಯಂತೀ. ಅವನ ಗದ್ದ ಮುದ್ದಾಗಿ ಎದ್ದು ಕಾಣುತ್ತದೆ. ಕೆನ್ನೆ ಹೊಳೆಯುತ್ತದೆ. ಅದರ ರೂಪ ಮೃದುವಾಗಿದೆ. ಕಿವಿಯಲ್ಲಿ ಮಕರಕುಂಡಲ.

ತುಂಟ ತುಟಿ ಅವನದು. ಭಾರೀ ಕೆಂಪು. ವಿಶ್ವಾತೀತ ಚೆಲುವು ಮುಪ್ಪುರಿ-ಗೊಂಡಿದೆ.

ದಾಡಿಮ ಬೀಜದಂತಹ ನೆಟ್ಟನೆಯ ಪುಟ್ಟ ಹಲ್ಲುಗಳ ಸಾಲು. ಕೆಂಪು ನಾಲಿಗೆ.

ಸಂಪಿಗೆಯಂಥ ನಾಸಿಕೆ. ಅದು ದೀರ್ಘ, ನೆಟ್ಟಗೆ, ಎತ್ತರ. ಯಾರನ್ನೂ ಮೋಹ ಗೊಳಿಸುವದು.

ತಾವರೆ ತನ್ನಾಕಾರವನ್ನು ಪಡೆಯಲು ಪ್ರಯತ್ನಿಸಿದ್ದೇ ದೇವರ ಕಣ್ಣಗಳನ್ನು ಕಂಡು. ಅದೇನು ಚೆಲುವು, ಅದೆಂಥ ಸೌಭಾಗ್ಯ !

ದೀರ್ಘವೂ ವಿಶಾಲವೂ ಶಾಂತ ಶೀತಕಾಂತಿಮಯವೂ ಆದ ಮೋಹಕ-ಕಣ್ಣುಗಳು ಪ್ರಸಾದರಸವನ್ನು ಸಂತತ ಸುರಿಸಿದಂತೆ ತೋರುತ್ತದೆ. ಕಣ್ಣುಗಳ ಅಂಚಿನಲ್ಲಿ ಕೆಂಪು. ಸುತ್ತಲೂ ಕಿರು ನೀಲ ಮಿಶ್ರವಾದ ಬಿಳಿ. ಮಧ್ಯದಲ್ಲಿ ಕಪ್ಪು. ಸೂರ್ಯ ಚಂದ್ರಮರ ತಾಯಿಮನೆ.

ಈತನ ಹುಬ್ಬಿನ ಚೆಲ್ಲಾಟ ವಿಧಿ, ವಾಯು, ಶರ್ವ ಶಕ್ರಾದಿಗಳನ್ನು ಹಿರಿದಾದ ಪದದಲ್ಲಿ ಇರಿಸಿದೆ. ವಿಶ್ವದ ಹುಟ್ಟು, ಅಳಿವು, ಇರವುಗಳಿಗೆ ಇದೇ ಮೂಲಕಾರಣ.

ಅರ್ಧ ಚಂದ್ರನಂತೆ ಇರುವ ವಿಶಾಲವಾದ ಹಣೆ ನಿರ್ಮಲ, ಶುಭ್ರವಾಗಿದೆ. ಸುತ್ತಣದ ಕಪ್ಪುಕೂದಲಿನ ಮಧ್ಯದ ಈ ಮುಖ ಕಪ್ಪು ಆಗಸದ ಮಧ್ಯದ ಚಂದ್ರನಂತೆ ಕಂಗೊಳಿಸುತ್ತಿದೆ.

ಮುಖಮಂಡಲದಲ್ಲಿಯ ಮಂದಸ್ಮಿತವು ಉಕ್ಕಿಬಂದ ಅನಂತ ಸೌಭಾಗ್ಯ-ದಂತಿದೆ.

ಇಂಥ ಭಗವಂತನ ರೂಪದ ಮೂವತ್ತೆರಡು ಲಕ್ಷಣಗಳನ್ನು ಸ್ಮರಿಸಬೇಕು.

**ದೇಹದಮೂವತ್ತೆರಡು ಲಕ್ಷಣಗಳು**

೧. ಐದು ದೀರ್ಘ, ೨. ಐದು ಸೂಕ್ಷ್ಮ, ೩. ಏಳು ಕೆಂಪು, ೪. ಆರು ಎತ್ತರ, ೫. ಮೂರು ವಿಶಾಲ, ೬. ಮೂರು ಕಿರಿದು, ೭. ಮೂರು ಗಂಭೀರ.

೧. ಭುಜ, ನೇತ್ರ, ಗದ್ದ, ತೊಡೆ, ನಾಸಿಕೆ ಇವು ಐದು ದೀರ್ಘವಾಗಿವೆ.

೨. ತೊಗಲು, ಕೂದಲು, ಬೆರಳು, ಹಲ್ಲು, ಬೆರಳುಗಳಲ್ಲಿನ ರೇಖೆ, ಇವು ಐದು ಸೂಕ್ಷ್ಮವಾಗಿವೆ.

೩. ಕಣ್ಣಿನ ಅಂಚು, ಉಗುರು, ಅಂಗೈ, ಅಂಗಾಲು, ತಾಲು (ನಾಲಿಗೆಯ ಮೇಲಿನ ಭಾಗ) ನಾಲಿಗೆ, ಕೆಳದುಟಿ ಇವು ಏಳು ಕೆಂಪಾಗಿವೆ.

೪. ಕಕ್ಷ, ಕುಕ್ಷಿ, ವಕ್ಷಸ್ಸು, ಮೂಗು, ಹೆಗಲು, ಹಣೆ ಇವು ಆರು ಉನ್ನತವಾಗಿವೆ.

೫. ಹಣೆ, ಸೊಂಟ, ಎದೆ ಈ ಮೂರು ಸ್ಥಾನಗಳು ವಿಶಾಲವಾಗಿವೆ.

೬. ಕುತ್ತಿಗೆ, ಜನನೇಂದ್ರಿಯ, ಬೆನ್ನು ಇವು ಮೂರು ಹ್ರಸ್ವವಾಗಿವೆ.

೭. ಸ್ವರ, ಶಕ್ತಿ, ನಾಭಿ ಇವು ಮೂರು ಗಂಭೀರವಾಗಿವೆ.

ಇಂಥ ಭಗವಂತನ ರೂಪವನ್ನು ಸಾಧ್ಯವಿದ್ದಷ್ಟು ಕಾಲದವರೆಗೆ ಸ್ಮರಿಸುತ್ತಿರಬೇಕು, ಧ್ಯಾನಿಸುತ್ತಿರಬೇಕು.

## ಬಿಂಬರೂಪನ ಮಾನಸಪೂಜೆ

ಈ ಭಗವಂತನನ್ನು ಅಮಲಮಾನಸಮಂದಿರದಲ್ಲಿ ಪೂಜಿಸಬೇಕು. ಇದಕ್ಕೆ ಯಾವ ಹಣ ವೆಚ್ಚಮಾಡುವ ಅಗತ್ಯವಿಲ್ಲ. ಇದರಿಂದ ಯಾರಿಗೂ ಪೀಡೆಯಿಲ್ಲ.

ಇದಕ್ಕಾಗಿ ಹೊರಗಿನ ಸಿರಿವಂತಿಕೆಗಿಂತ ಮನಸ್ಸಿನ ಸಿರಿವಂತಿಕೆ ಬೇಕು. ಹೊರಗಿನ ಹೂ-ಹಣ್ಣು-ಧೂಪ-ದೀಪಗಳಿಗಿಂತ ಅಂತಸ್ಸಂಪತ್ತು ವಿಪುಲವಾಗಿರಬೇಕು.

ಭಕ್ತಿಯ ರಸ ಉಕ್ಕೇರಿದಾಗ, ಭಾವದ ಹೊಳೆ ಹರಿದಾಗ, ಮನೋವಿಲಾಸ ಮೆರೆದಾಗ ಈ ಬಗೆಯ ಪೂಜೆ ಸಾಧ್ಯ.

ಈ ಬಗೆಯ ಪೂಜೆ ಅತ್ಯಂತ ಅಗತ್ಯ, ಅನಿವಾರ್ಯ, ಈ ಪೂಜೆಯಿಂದ ಭಗವಂತನಿಗೆ ಬಹಳ ಮೆಚ್ಚುಗೆ. ದೇವರಿಗೆ ಬೇಕು ಮನಸ್ಸು, ವಾಕ್, ಪ್ರಾಣ.

ನಾವು ಬಾಹ್ಯಪೂಜೆಯಲ್ಲಿ ಸಮರ್ಪಿಸುವ ಯಾವ ಪದಾರ್ಥಗಳೂ ದೇವರಿಗೆ ಬೇಕಾಗಿಲ್ಲ. ಆ ಎಲ್ಲ ಪದಾರ್ಥಗಳನ್ನೂ ನಮ್ಮ ಭಕ್ತಿಯ ಸಂಕೇತವಾಗಿ ಸಮರ್ಪಿಸಬೇಕು, ಅಷ್ಟೇ.

ಹೀಗೆಂದಮಾತ್ರಕ್ಕೆ ಬಹಿರಂಗಪೂಜೆಯನ್ನು ಮಾಡುವದು ಅಗತ್ಯವಲ್ಲ, ಅನಿವಾರ್ಯವಲ್ಲ ಎಂದು ಸರ್ವಥಾ ತಿಳಿಯಬಾರದು.

ಹಾಗಿದ್ದರೆ ಶ್ರೀಮದಾನಂದತೀರ್ಥರೂ ಕೇವಲ ಮಾನಸಪೂಜೆಯನ್ನೇ ಮಾಡಿ ಮುಗಿಸಬಹುದಿತ್ತು. ಬಾಹ್ಯಪೂಜೆಯನ್ನು ಸರ್ವಥಾ ಮಾಡಬಾರದಾಗಿತ್ತು.

ಆ ಸರ್ವಜ್ಞಾಚಾರ್ಯರೇ ಸಣ್ಣ ಸಣ್ಣ ಶಾಸ್ತ್ರನಿಯಮವನ್ನೂ ಬಿಡದೇ ಬಾಹ್ಯಪೂಜೆಯನ್ನು ಆಚರಿಸಿರುವದೇ ಆದರ್ಶವಾಗಿದೆ.

**ಆರ್ಚಾದೌ ಅರ್ಚಯೇತ್ ತಾವದೀಶ್ವರಂ ಮಾಂ ಸ್ವಕರ್ಮಕೃತ್ ।**
**ಯಾವತ್ ನ ವೇದ ಸ್ವಹೃದಿ ಸರ್ವಭೂತೇಷ್ವವಸ್ಥಿತಮ್ ॥★॥**

ಎಂದು ಭಾಗವತದಲ್ಲಿ ಹೃದಯದಲ್ಲಿ ಭಗವಂತನಿರುವನು ಎಂದು ತಿಳಿಯುವವರೆಗೆ ಪ್ರತಿಮೆಯಲ್ಲಿ ಪೂಜಿಸಬೇಕು. ತಿಳಿದಬಳಿಕ ಬಾಹ್ಯಪೂಜೆ ಅಗತ್ಯವಿಲ್ಲ ಎಂಬುದಾಗಿ ಹೇಳಿದಂತೆ ತೋರುತ್ತದೆ.

ಅದರರ್ಥವನ್ನು ಸ್ಪಷ್ಟ ತಿಳಿಸುವದಕ್ಕೆ ಆಚಾರ್ಯರು ಈ ವಾಕ್ಯವನ್ನು ಉದಾಹರಿಸಿರುವರು.

**'ಅಜ್ಞೋಽರ್ಚಯೇದೇವಾರ್ಚಾಯಾಮನ್ಯಥಾ ದೋಷವಾನ್ ಭವೇತ್ ।**
**ಜ್ಞಸ್ತ್ವರ್ಚಯನ್ ಸುಗುಣವಾನ್ ಅನ್ಯಥಾ ದೋಷವಾನ್ ನ ತು ।'**

ಇದರ ಅಭಿಪ್ರಾಯ 'ಅಪರೋಕ್ಷಜ್ಞಾನವಾಗುವವರೆಗೆ ಪ್ರತಿಮೆಯಲ್ಲಿ ಪೂಜೆಯನ್ನು ಮಾಡಲೇಬೇಕು. ಸರ್ವಥಾ ಅನಿವಾರ್ಯ. ಮಾಡದಿದ್ದರೆ ಮಹಾದೋಷ ಬರುವದು.

ಅಪರೋಕ್ಷಜ್ಞಾನವಾದ ಬಳಿಕ ಭಕ್ತನು ಪ್ರತಿಮೆಯಲ್ಲಿ ಭಗವಂತನನ್ನು ಪೂಜಿಸಿದರೆ ಹೆಚ್ಚಿನ ಲಾಭವಾಗುವದು. ಪೂಜಿಸದಿದ್ದರೆ ನರಕವಾಗುವದಿಲ್ಲ. ಮುಕ್ತಿಯಾಗುವದಾದರೂ ಮುಕ್ತಿಯಲ್ಲಿ ಆನಂದಹ್ರಾಸ ನಿಶ್ಚಿತ'

**ಅಜ್ಞಸ್ಯ ಕರ್ಮ ಲಿಪ್ಯೇತ ಕೃಷ್ಣೋಪಾಸ್ತಿಮಕುರ್ವತಃ ।**
**ಜ್ಞಾನಿನೋಽಪಿ ಯತೋ ಹ್ರಾಸಃ ಆನಂದಸ್ಯ ಭವೇದ್ ಧ್ರುವಮ್ ॥★॥**

**ಅತೋ ಅಲೇಪೇಽಪಿ ಲೇಪಃ ಸ್ಯಾದತಃ ಕಾರ್ಯೈವ ಸಾ ಸದಾ ।'**

ಈಶಾವಾಸ್ಯೋಪನಿಷದ್‌ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣವಿದು- ಇದರರ್ಥ- 'ಅಪರೋಕ್ಷಜ್ಞಾನವಿಲ್ಲದವನು ಕರ್ಮಗಳನ್ನು ಮಾಡದಿದ್ದರೆ ನರಕಾದ್ಯನರ್ಥಗಳು ಆಗುವವು. ಮಾತ್ರವಲ್ಲ, ಅಪರೋಕ್ಷಜ್ಞಾನಿಯಾದವನಿಗೂ

ಕರ್ಮಗಳನ್ನು ಬಿಟ್ಟಾಗ ನರಕಾದ್ಯನರ್ಥಗಳೆಂಬ ಲೇಪವಾಗದಿದ್ದರೂ ಮುಕ್ತಿಯಲ್ಲಿ ಆನಂದ ಹ್ರಾಸವೆಂಬ ಲೇಪವಾಗುವದು ಖಂಡಿತ. ಆದ್ದರಿಂದ ಕರ್ಮಗಳ-ನ್ನಾಚರಿಸಲೇ ಬೇಕು'

ಹೀಗಿರುವ ಕಾರಣ ಭಗವಂತನ ಸಾಕ್ಷಾತ್ಕಾರಕ್ಕಿಂತಲೂ ಮೊದಲು ಪ್ರತಿಮಾದಿಗಳಲ್ಲಿ ಪರಮಾತ್ಮನ ಪೂಜೆ ಅತ್ಯಂತ ಅನಿವಾರ್ಯ. ಇದಕ್ಕೆ ಹೊರತಾಗಿ ಹೇಳುವವರು ಹಾಗೂ ಮಾಡುವವರು ಮೂಢರು ಎಂದು ತಿಳಿಯಬೇಕು.

ಪ್ರಕೃತ, ಬಹಿರಂಗಪೂಜೆ ಪೂರ್ಣಸಫಲವಾಗಬೇಕಾದರೆ ಅಂತರಂಗ ಪೂಜೆಯನ್ನು ಮಾಡಲೇಬೇಕು.

ಆಂತರಪೂಜೆಯನ್ನು ಮಾಡದಿದ್ದರೆ ಎಷ್ಟೇ ವಿಸ್ತಾರದ ಬಹಿರಂಗಪೂಜೆಯು ಪೂರ್ಣವಾಗುವದಿಲ್ಲ. ಕೆಲವೊಮ್ಮೆ ಬಹಿರಂಗಪೂಜೆ ಯಾಂತ್ರಿಕವಾಗಿಬಿಡುತ್ತದೆ.

ಅಲ್ಲದೇ ಬಿಂಬರೂಪನ ಉಪಾಸನೆ, ಪೂಜೆ ಮುಂತಾದವು ತೀರ ಅವಶ್ಯಕ, ಬಿಂಬೋಪಾಸನೆ ಮುಕ್ತಿಗೆ ಪ್ರಧಾನವೂ, ಅತ್ಯಂತ ಅನಿವಾರ್ಯವೂ ಆದ ಸಾಧನೆ.

**'ಸ್ವಹೃದಿಸ್ಥಿತಂ ಸ್ವನಿಯಾಮಕಂ ಭಗವದ್ರೂಪಂ ಉಪಾಸ್ಯೈವ ಮೋಕ್ಷೋ ಭವತಿ। ಯೇಷಾಂ ಬಹಿರುಪಾಸನೇನ ಮೋಕ್ಷಃ ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ ಕರ್ತವ್ಯಮೇವ''**

ಎಂದು ಆಚಾರ್ಯಚರಣರ ಆದೇಶ ಬೃಹದಾರಣ್ಯಕಭಾಷ್ಯದಲ್ಲಿ.

ಎಲ್ಲ ಸಾಧನೆಗಳನ್ನು ಒಂದರ್ಥದಲ್ಲಿ ಸಾಂಗಗೊಳಿಸುವದು ಈ ಬಿಂಬೋಪಾಸನೆ. ಬಿಂಬನನ್ನು ಉಪಾಸಿಸದೇ, ಪೂಜಿಸದೇ, ಮಾಡಿದ ಉಳಿದೆಲ್ಲ ಸಾಧನೆಯು ಮೋಕ್ಷಫಲವಾಗುವದಿಲ್ಲ. ಆದುದರಿಂದಲೇ ಹೃದಯಮಂಟಪದಲ್ಲಿ ಮಾನಸಪೂಜೆಯನ್ನಾಚರಿಸಬೇಕು.

ಇದಲ್ಲದೇ, ಮಾನಸಪೂಜೆಯಲ್ಲಿ ಅತಿಮಹತ್ವದ ವಿಶೇಷವಿದೆ. ಬಾಹ್ಯಪೂಜೆಯಲ್ಲಿ ನಾವು ಕೊಡುವ ಅರ್ಘ್ಯಪಾದ್ಯಾದಿಗಳನ್ನು ಪ್ರತಿಮೆಯು ನಮ್ಮೊಟ್ಟಿಗೆ ಸ್ಪಂದಿಸುತ್ತ ಸ್ವೀಕರಿಸುವದಿಲ್ಲ. ಅಚಲವಾಗಿಯೇ ಇರುತ್ತದೆ.

ಪ್ರತಿಮಾಸ್ಥ ದೇವರು ಸ್ಪಂದಿಸುತ್ತ ಸ್ವೀಕರಿಸಿದರೂ ನಮಗದು ಕಾಣುವದಿಲ್ಲ.

ಅಲ್ಲದೇ ಬಾಹ್ಯಪೂಜೆಯಲ್ಲಿ ಭಾರೀ ಭಾರೀ ಪದಾರ್ಥಗಳನ್ನು ಪರಮ ಅದ್ಭುತರೀತಿಯಲ್ಲಿ ಬಳಸಿ ದೇವರ ಪೂಜೆಯನ್ನು ಮಾಡುವದು ಸಾಧ್ಯವಿಲ್ಲ.

ಈ ತರಹದ ಬಾಹ್ಯಪೂಜೆಗೆ ದಾರಿದ್ರ್ಯ, ರೋಗ, ಅಸಾಮರ್ಥ್ಯ, ದೇಶಕಾಲ ಅವಸ್ಥೆಗಳ ಅನನುಕೂಲತೆ, ಇನ್ನಿತರ ಸಂಕೋಚ ಮುಂತಾದವೆಲ್ಲ ಅಡ್ಡಿ-ಯಾಗುವವು.

ಆದರೆ ಮನಸ್ಸಿನಲ್ಲಿ ಎಂಥ ಅದ್ಭುತ ಪೂಜೆಯನ್ನು ಮನದಣಿಯೆ ಮಾಡಬಹುದು.

ಈ ನಿಟ್ಟಿನಲ್ಲಿ ಮಾನಸಪವೂಜೆಯನ್ನು ಮಾಡುವಾಗ ಆಗುವ ತೃಪ್ತಿ ಬಾಹ್ಯಪೂಜೆಯ ತೃಪ್ತಿಗಿಂತಲೂ ಮಿಗಿಲಾದುದು.

ಈ ಮಾನಸಪೂಜೆಯನ್ನು ಕೇವಲ ಕಲ್ಪನಾವಿಲಾಸಿಗಳೂ ಮಾಡಬಹುದು. ಆಧರೆ, ಜ್ಞಾನಭಕ್ತಿಗಳಿಲ್ಲದೆ ಮಾನಸಪೂಜೆಯನ್ನು ಮಾಡಿ ಏನೂ ಪ್ರಯೋಜನ-ವಿಲ್ಲ. ಅದು ಕೇವಲ ಮನೋವಿಲಾಸವಾದೀತು.

ಭಾವವಿಲ್ಲದ ಕಲ್ಪನೆ ವಿಭ್ರಮವೇ ಸರಿ. ಆದುದರಿಂದ ಭಕ್ತಿಜ್ಞಾನ ಪುರಸ್ಸರವಾಗಿ ಹದವಾದ ಮನಸ್ಸಿನಲ್ಲಿ ವಾಸನಾಮಯ ಭಗವದ್ರೂಪವನ್ನೂ, ವಾಸನಾಮಯ ಪದಾರ್ಥಗಳನ್ನೂ ನಿರ್ಮಿಸುತ್ತ, ಭಗವಂತನ ಅತಿ ಪ್ರೀತಿಕರವಾದ ಅರ್ಚನೆಯನ್ನು ಮಾಡಬೇಕು.

ಮಾನಸಪೂಜೆಯಲ್ಲಿಯೂ ಒಂದು ಬಾರಿ ಹಿಂದೆ ಹೇಳಿದ ಪೀಠದೇವತೆಗಳನ್ನು ಹೃದಯಕಮಲದಲ್ಲಿ ಪೂಜಿಸಬೇಕು.

ಈ ಎಲ್ಲ ದೇವತೆಗಳನ್ನು ಸ್ಮರಿಸಬೇಕು ಎಂದಾಗ ಸಾಮಾನ್ಯವಾಗಿ ಆಯಾ ದೇವತೆಗಳ ಹೆಸರನ್ನು ಮನಸಾ ಸ್ಮರಿಸಿ ಮುಗಿಸಿಬಿಡುವದುಂಟು. ಅದು ದೇವತಾಸ್ಮರಣವಲ್ಲ. ಅದು ಕೇವಲ ದೇವತಾನಾಮಸ್ಮರಣ.

''ಕೇವಲ ದೇವತಾನಾಮಸ್ಮರಣಮಾಡಬೇಕು'' ಎಂದು ಹೇಳಿಲ್ಲ ಆದುದರಿಂದ ಆಯಾ ದೇವತೆಗಳ ಚಿತ್ರಗಳನ್ನೇ ಮನೋಭಿತ್ತಿಯಲ್ಲಿ ರಚಿಸಿ ಸ್ಮರಿಸಬೇಕು. ಇದು ತುಂಬ ಮಹತ್ವದ ಮಾತು.

ಮಧ್ಯದಲ್ಲಿ ದೇವರು. ಎಡದಲ್ಲಿ ಗುರು. ಬಲದಲ್ಲಿ ಸರ್ವದೇವತೆಗಳು. ಪುನಃ ಎಡದಲ್ಲಿ ಸರ್ವಗುರುಗಳು.

ಪೀಠಪಾದದ ಕೆಳಭಾಗದ ನಾಲ್ಕು ಕೋಣಗಳಲ್ಲಿ ಗರುಡ, ವೇದವ್ಯಾಸ, ದುರ್ಗಾ, ಸರಸ್ವತಿಯರು.

ಮೇಲ್ಭಾಗದಲ್ಲಿ (ಧರ್ಮ) ಯಮ, (ವಿಜ್ಞಾನ) ವಾಯು, (ವೈರಾಗ್ಯ) ಶಿವ, (ಐಶ್ವರ್ಯ) ಇಂದ್ರ.

ಪೀಠದ ಫಲಕದಲ್ಲಿ (ಅಧರ್ಮ) ನಿರ್ಋತಿ, (ಅವಿಜ್ಞಾನ) ದುರ್ಗಾ, (ಅವೈರಾಗ್ಯ) ಕಾಮ, (ಅನೈಶ್ವರ್ಯ) ಶಿವ.

ಬಳಿಕ ಬ್ರಹ್ಮಾಂಡದ ಆಚೆಯಿಂದ ಆರಂಭಿಸಿ ಪರಮಪುರುಷ, ಆಧಾರಶಕ್ತಿ ಹೊರಗಿನ ವಿಷ್ಣುಕೂರ್ಮ, ಅಂಡದೊಳಗಿನ ವಿಷ್ಣುಕೂರ್ಮ, ವಾಯುಕೂರ್ಮ, ಶೇಷ, ಪೃಥಿವಿ, ಕ್ಷೀರಸಾಗರ (ವರುಣ), ಶ್ವೇತದ್ವೀಪ (ರಮಾ), ಮಂಡಪ (ರಮಾ), ಪದ್ಮ (ರಮಾ), ದಲಗಳಲ್ಲಿ ಸತ್ವ-ಶ್ರೀ, ರಜಸ್-ಭೂ, ತಮಸ್ -ದುರ್ಗಾ, ಸೂರ್ಯ, ಸೋಮ, ಅಗ್ನಿ.

ಸೋಪಾನ ದೇವತೆಗಳು - ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ.

ಅದರ ಮೇಲೆ ಎಂಟುದಳದ ಪದ್ಮ.

ಅಲ್ಲಿ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ. ಅದರ ಮೇಲೆ ಯೋಗಪೀಠ ರೂಪನಾದ ಶೇಷ.

ಅಲ್ಲಿ ಈ ಬಿಂಬರೂಪಿಯಾದ ಪ್ರಾಜ್ಞನಾಮಕ ಅಗ್ರೇಶ ರಾರಾಜಿಸುತ್ತಿರುವ ಎಂದು ಸ್ಮರಿಸಬೇಕು.

ಆ ಬಿಂಬರೂಪಿಯಾದ ಭಗವಂತನಿಗೆ ಮನಸ್ಸಿನಿಂದಲೇ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

೧. ದೇವರಿಗೆ ಅರ್ಘ್ಯವನ್ನು ನೀಡುತ್ತಿದ್ದೇವೆ. ದೇವರು ಕೈ ಚಾಚಿ ಸ್ವೀಕರಿಸುತ್ತಿರುವ.

೨. ಭಗವಂತನ ಪಾವನ ಪಾದಗಳಿಗೆ ಪಾದ್ಯ ಜಲವನ್ನು ಎರೆದು ತೊಳೆಯುತ್ತಿದ್ದೇವೆ.

ಆ ಪಾದಗಳಿಗೆ ಕೋಟಿ ಸೂರ್ಯರಂತಹ ತೇಜ. ತಾವರೆಯಂತೆ ಚೆಲುವು.

ಇದೇ ಪಾದವನ್ನು ತೊಳೆದು ಬ್ರಹ್ಮ ಧನ್ಯನಾದ. ಆ ತೀರ್ಥವನ್ನು ಧರಿಸಿ ಶಿವ ಪುನೀತನಾದ.

ನೆನೆದವರ ಮನದ ಅಜ್ಞಾನವನ್ನು ಪರಿಹರಿಸುವ ಪಾದವಿದು. ಅಂಥ ಪಾದವನ್ನು ತೊಳೆದು ಆ ಪಾದತೀರ್ಥವನ್ನು ಮನದಲ್ಲಿಯೇ ಮೈ ಮನೆಗಳಿಗೆಲ್ಲ ಪ್ರೋಕ್ಷಿಸುತ್ತಿದ್ದೇವೆ. ಧನ್ಯರೆಂದುಕೊಳ್ಳುತ್ತಿದ್ದೇವೆ.

೩. ಏಲಕ್ಕಿ, ಕರ್ಪೂರ, ಕೇಶರ, ಕಸ್ತೂರಿ ಇವುಗಳಿಂದ ಘಮಘಮಿಸುವ ಗಂಗೋದಕದ ಆಚಮನ ಭಗವಂತನ ಅಂಗೈಯಲ್ಲಿ ಹಾಕುತ್ತಿದ್ದೇವೆ. ದೇವರು ಸ್ವೀಕರಿಸುತ್ತಿರುವ.

೪. ದಿವ್ಯ ಮಧುಪರ್ಕವನ್ನು ಸಮರ್ಪಿಸುತ್ತಿದ್ದೇವೆ. ದೇವರು ಸ್ವೀಕರಿಸುತ್ತಿರುವ.

೫. ಪುನರಾಚಮನವನ್ನು ನೀಡುತ್ತಿದ್ದೇವೆ.

೬. ನೂರಾ ಒಂದು ಕಲಶದೇವತೆಗಳ ಸನ್ನಿಧಾನವುಳ್ಳ ಸ್ನಾನೀಯಕುಂಭದಿಂದ ಶಂಖದಲ್ಲಿ ನೀರೆತ್ತಿ ಅನಂತಶೀರ್ಷಾದಿಗಳುಳ್ಳ ಅನಂತರೂಪಿಯಾದ ಅಪ್ರಾಕೃತ ಸಚ್ಚಿದಾನಂದಮಯ ಭಗವಂತನಿಗೆ 'ಸಹಸ್ರಷಶೀರ್ಷಾ ಪುರುಷಃ' ಎಂದಂದು ಅಭಿಷೇಕ ಮಾಡುತ್ತಿದ್ದೇವೆ.

ಭಕ್ತಿಹೀನನಾದ ಯಾವ ವ್ಯಕ್ತಿಯ ಮನದಲ್ಲೂ ಮೂಡದ ಭಗವಂತನನ್ನು ನನ್ನ ಕೈಯಾರೆ ಅಭಿಷೇಕ ಮಾಡುತ್ತಲಿರುವೆ. ಅಹೋ ಧನ್ಯ !

ಭಗವಂತನ ಸಚ್ಚಿದಾನಂದಮಯವಾದ ವಿಗ್ರಹವನ್ನು ಬಟ್ಟೆಯಿಂದ ಒರಿಸುತ್ತಿದ್ದೇವೆ. ಭಗವಂತನ ಮೈ ಎಂಥ ಕೊಮಲ ! ಎಂಥ ಮೃದು ! ಅದ್ಭುತ!

೭. ಮೇರು ಬೆಟ್ಟದ ಮೇಲಿರುವ ಜಾಂಬೂನದ ಚಿನ್ನದ ಹೊಳಪಿನಂಥ ಪೀತಾಂಬರವನ್ನು ದೇವರಿಗೆ ನೀಡುತ್ತಿದ್ದೇವೆ. ಅದನ್ನು ಉಡುತ್ತಿದ್ದಾನೆ.

೮. ಅನಂತಶ್ರೀಮಂತನಾದ ಸಿರಿಯರಸನಿಗೆ ವಿಭೂಷಣಗಳನ್ನು ತೊಡಿಸುತ್ತಿದ್ದೇವೆ.

ಕಾಲುಬೆರಳುಗಳಿಗೆ ಉಂಗುರಗಳು, ಕಾಲಿಗೆ ಮಧುರನಿನಾದದ ಕಿರುಗೆಜ್ಜೆ, ಕಿರುಪೆಂಡೆ, ಸೊಂಟಕ್ಕೆ ಉಡಿದಾರ, ಕಟಿಬಂಧ, ಕೈಬೆರಳುಗಳಲ್ಲಿ ಉಂಗುರ, ಕೈಗೆ ಕಂಕಣ, ಮೇಲೆ ನಾಗಮುರಿಗೆ, ಅಂಗದ, ಬಾಹುಭೂಷಣ, ಕೊರಳಿಗೆ ಚಿನ್ನ ರನ್ನ, ನವರತ್ನಗಳ ಹಾರ, ವನಮಾಲೆ, ಕೊರಳಿಗೆ ಕೌಸ್ತುಭಮಣಿ, ಕರ್ಣಗಳಿಗೆ ಮಕರಕುಂಡಲ, ಭಾರಿಯಾದ ವಜ್ರದ ಕಿರೀಟ, ಕಾಲಿಗೆ ಹೊನ್ನದ ಪಾದುಕೆ ಇವುಗಳನ್ನೆಲ್ಲ ಸಮರ್ಪಿಸುತ್ತಿದ್ದೇವೆ.

ಒಂದೊಂದು ಆಭರಣವನ್ನು ನೀಡಿದಾಗ ಆಪ್ತಕಾಮನಾದರೂ ಪರಮಾತ್ಮ ಕೌತುಕದಿಂದ, ಪ್ರೀತಿಯಿಂದ ಸ್ವೀಕರಿಸುತ್ತಲಿದ್ದಾನೆ.

೯. ಮೂರುವೇದದೇವತೆಗಳ ಸನ್ನಿಧಾನವುಳ್ಳ ಯಜ್ಞೋಪವೀತವನ್ನು ಸಮರ್ಪಿಸಿದ್ದೇವೆ.

೧೦. ಆರಂಭದಲ್ಲಿ ಸಮರ್ಪಿಸಿದ ಆಸನವನ್ನೇ ಪುನಃ ಸಮರ್ಪಿಸುತ್ತಿದ್ದೇವೆ.

೧೧. ಕಸ್ತೂರೀ, ಕೇಸರ, ಕರ್ಪೂರ, ಪುನಗು, ಜಾಜಿ ಮುಂತಾದವುಗಳಿಂದ ಸಿದ್ಧವಾದ ಪರಮಸುರಭಿ ಗಂಧವನ್ನು ಸ್ವಯಂ ಗಂಧಮಯವಾದ ಭಗವಂತನ ಚಿನ್ಮಯದೇಹಕ್ಕೆ ಲೇಪಿಸುತ್ತಿದ್ದೇವೆ.

೧೨.ಪರಮಾತ್ಮನ ಪ್ರಸಾದ ಸಾಧನವಾದ ತುಲಸಿಯಿಂದರ್ಚನೆಯನ್ನು ಪಾದಗಳಿಗೆ ಮಾಡುತ್ತಿದ್ದೇವೆ.

ನವತುಲಸಿಯ ಹಾರವನ್ನು ದೇವರ ಕೊರಳಿಗೆ ಹಾಕುತ್ತಿದ್ದೇವೆ. ಬಗೆ ಬಗೆಯ ಹೂಗಳನ್ನು ಹೂಗಳಹಾರಗಳನ್ನು ಸಮರ್ಪಿಸುತ್ತಿದ್ದೇವೆ.

ತುಲಸೀಪುಷ್ಪಸಮರ್ಪಣೆಯ ಕಾಲದಲ್ಲಿ ಶತನಾಮ, ಸಹಸ್ರನಾಮ ಮುಂತಾದವನ್ನೆಲ್ಲ ಸ್ಮರಿಸುತ್ತಿದ್ದೇವೆ.

ಬಳಿಕ ಏಳು ಆವರಣಗಳ ದೇವತೆಗಳನ್ನು ಸ್ಮರಿಸಬೇಕು.

೧. ಶ್ರೀಭೂದೇವಿಯರು.

೨. ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯೂಲ್ಕ, ಸಹಸ್ರೋಲ್ಕ.

೩. ವಾಸುದೇವ-ಮಾಯಾ, ಸಂಕರ್ಷಣ-ಜಯಾ, ಪ್ರದ್ಯುಮ್ನ-ಕೃತಿ, ಅನಿರುದ್ಧ -ಶಾಂತಿ.

೪. ಕೇಶವನಿಂದ ದಾಮೋದರನ ವರೆಗೆ.

೫. ಮತ್ಸ್ಯದಿಂದ ಕಲ್ಕಿಯವರೆಗೆ. ಜೊತೆಗೆ ವಿಶ್ವರೂಪ, ಅನಂತ.

೬. ಬ್ರಹ್ಮ-ಸರಸ್ವತಿ, ವಾಯು-ಭಾರತಿ, ಶೇಷ-ವಾರುಣೀ, ಶಿವ-ಪಾರ್ವತೀ, ಗರುಡ-ಸೌಪರ್ಣೀ.

೭. ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಸೋಮ, ಈಶಾನ, ಅನಂತ, ಬ್ರಹ್ಮ,

ಈ ಎಲ್ಲ ಆವರಣದೇವತೆಗಳಿಗೆ ಪ್ರತ್ಯೇಕವಾಗಿ ಅರ್ಘ್ಯ ಮೊದಲು ಮಾಡಿ ಪುಷ್ಪದವರೆಗಿನ ಎಲ್ಲ ಉಪಚಾರಗಳನ್ನು ಮನಸ್ಸಿನಿಂದಲೇ ಅರ್ಪಿಸುತ್ತಿದ್ದೇವೆ.

ಆವರಣದೇವತೆಗಳಿಂದ ಸಹಿತನಾದ ಮೂಲರೂಪಿ ಭಗವಂತನಿಗೆ ಮುಂದಿನ ಉಪಚಾರಗಳು.

೧೩. ಧೂಪವನ್ನು ಸಮರ್ಪಿಸುತ್ತಿದ್ದೇವೆ.

೧೪. ದೀಪವನ್ನು ಬೆಳಗುತ್ತಿದ್ದೇವೆ.

೧೫. ಚಿನ್ನಭಕ್ಷ್ಚಂದ್ರಮಂಡಲದಿಂದ ಹರಿದುಬಂದ ಅಮೃತಸ್ಯಂದವನ್ನು ಹಾಗೂ ನಾನಾತೆರನಾದ ಅದ್ಭುತರಸಮಯ ಭಕ್ಷಭೋಜ್ಯಾದಿಗಳನ್ನು ಮಣಿಗಣ ಖಚಿತವಾದ ಸೌವರ್ಣಪಾತ್ರಗಳಲ್ಲಿ ನೈವೇದ್ಯವಾಗಿ ಆಪ್ತಕಾಮ, ಅನಶನ, ಸರ್ವಭೋಜೀ, ಶುಭಭೋಜೀ, ನಿಸ್ಪೃಹ, ಕೇವಲ ಸ್ವಾಖ್ಯರಸತೃಪ್ತನಾದ ಭಗವಂತನಿಗೆ ನೀಡುತ್ತಿದ್ದೇವೆ.

ಬಳಿಕ, ಕೋಟಿಸೂರ್ಯಪ್ರಭನಾದ ಸೂರ್ಯಾದಿ ಸಕಲ ತೇಜೋ-ಮಂಡಲಗಳಿಗೆ ತೇಜಃಪ್ರದನಾದ ಆ ಹೆದ್ದೈವನಿಗೆ ಲಕ್ಷೋಪಲಕ್ಷ ಕಿರುದೀಪಗಳ ಸಾಲುಗಳನ್ನು ಸೇವೆಯಾಗಿ ಸಮರ್ಪಿಸುತ್ತಿದ್ದೇವೆ.

೧೬. ಮನದಲ್ಲಿಯೇ ಪ್ರದಕ್ಷಿಣೆ ಹಾಕಿ ನಮನಗಳನ್ನು ಅರ್ಪಿಸುತ್ತಿದ್ದೇವೆ.

ನಾವು ಮಾಡಿದ ಈ ಮಾನಸಪೂಜೆಯಿಂದ ಮಿಗಿಲಾದ ಮೆಚ್ಚುಗೆಯಾಗಿ ಆ ಮಹಾದೊರೆ ತನ್ನ ಮುಖಮಂಡಲದಿಂದ ನಮ್ಮತ್ತ ಮುಗುಳುನಗೆಯನ್ನು ಸೂಸುತ್ತ ನಮ್ಮನ್ನು ಹರಸುತ್ತಿದ್ದಾನೆ.

ಹೀಗೆಲ್ಲ ಮನದಲ್ಲಿಯೇ ತುಂಬು ಭಕ್ತಿಯಿಂದ, ಭಾವಗಳಿಂದ ಚಿತ್ರಿಸಿದ ರೂಪವನ್ನು ಮನಸಾರೆ ಕಂಡು ಸಂತಸಪಡಬೇಕು. ಈ ತೃಪ್ತಿ ವಾಚಾತೀತ.

ಇದುವೇ 'ಹಸತ್ಯಥೋ ರೋದಿತಿ ರೌತಿ ಗಾಯತಿ ಉನ್ಮಾದವನ್ನೃತ್ಯತಿ ಲೋಕಬಾಹ್ಯಃ'

'ನಗುವರೋ, ರೋದಿಸುವರೋ, ನಾಟ್ಯವಾಡುವರೋ' ಎಂಬ ಲೋಕಬಾಹ್ಯಾವಸ್ಥೆಗೆ ಕಾರಣ.

ಈ ರೀತಿ ಷೋಡಶೋಪಚಾರಗಳಿಂದ ಪೂಜಿಸಬೇಕು.

## ಕೇವಲ ಶಾಲಿಗ್ರಾಮದ ಪೂಜೆ

ಪೂಜೆಯಲ್ಲಿ ಪ್ರತಿಮಾವನ್ನು ಇಟ್ಟುಕೊಳ್ಳದವರು ಕೇವಲ ಶಾಲಿಗ್ರಾಮವನ್ನು ಪೂಜಿಸುವವರು ಈ ರೀತಿ ಚಿಂತಿಸಬೇಕು.

**ಶಾಲಿಗ್ರಾಮಶಿಲಾಯಾಂ ವೈ ಸ್ವಯಂವ್ಯಕ್ತಸ್ತಥೈವ ಚ ।**
**ಬಿಂಬಮೂರ್ತ್ಯಾ ಸಹೈಕ್ಯೇನ ತದಂತಶ್ಚಿಂತಯೇದ್ಧರಿಮ್ ॥★॥**

'ಭಗವಂತನು ತನ್ನ ಸತ್ಯಸಂಕಲ್ಪಾನುಸಾರ ಶಾಲಿಗ್ರಾಮಶಿಲೆಯಲ್ಲಿ ಯಾವಾಗಲೂ ಸ್ವಯಂ ವ್ಯಕ್ತನಾಗಿರುತ್ತಾನೆ. ಆದುದರಿಂದ ಆ ಶಾಲಿಗ್ರಾಮ ಶಿಲೆಯಲ್ಲಿ ದೇವರನ್ನು ಆವಾಹಿಸಬಾರದು. ಕಿಂತು ಕೇವಲ ಶಾಲಿಗ್ರಾಮಾಂತಸ್ಥ ದೇವರನ್ನು ನಮ್ಮ ಬಿಂಬಮೂರ್ತಿಯ ಜೊತೆಗೆ ಅಭಿನ್ನನೆಂದು ಚಿಂತಿಸಬೇಕು.'

## ಬಿಂಬರೂಪಾವಾಹನ

**★ನಾನಾ ಬಗೆಯ ಅನುಸಂಧಾನಗಳು★**

ಹೀಗೆ ಹೃದಯಾಂತರಂಗದ ಅಂಗಣದಲ್ಲಿ ಹೃದಯತಾವರೆಯರಸನನ್ನು ಅರ್ಚಿಸಿ, ಮೆಚ್ಚಿಸಿ, ಹೊರಪ್ರತಿಮೆಯಲ್ಲಿ ಬಂದು ನೆಲೆಸಲು ಅರ್ತಿಯಿಂದ ಪ್ರಾರ್ಥಿಸಬೇಕು.

'ಓ ಬಿಂಬದೇವನೆ ! ಪೀಠಸ್ಥ ಪ್ರತಿಮೆಯಲ್ಲಿ ನಿನ್ನನ್ನಾವಾಹಿಸುವೆ. ಓ ಭಗವನ್! ಒಂದಂಶದಿಂದ ಹೊರಬಂದು ಪ್ರತಿಮೆಯಲ್ಲಿ ಸನ್ನಿಹಿತನಾಗು' ಎಂದು ಯಾಚಿಸಬೇಕು.

ಹೃದಯದಿಂದ ಸುಷುಮ್ನಾ ನಾಡಿಯ ಮಾರ್ಗದಿಂದ ಬ್ರಹ್ಮರಂಧ್ರಕ್ಕೆ ದೇವರನ್ನು ಕರೆತರಬೇಕು.

ಬಳಿಕ ದೇವರು ಕೆಳಗಿಳಿದು ಎಡಮೂಗಿನ ಉಚ್ಛ್ವಾಸದಿಂದ ಹೊರಬಿದ್ದು ಅಂಜಲಿಯಲ್ಲಿರುವ ತುಲಸಿ ಪುಷ್ಪಗಳಲ್ಲಿ ಸನ್ನಿಹಿತನಾದ ಎಂದು ಭಾವಿಸಬೇಕು.

ಅಂಜಲಿಯಲ್ಲಿರುವಾಗಲೂ ವಾಚಾ ಷೋಡಶೋಪಚಾರಗಳಿಂದ ಪೂಜಿಸಿ, ಪ್ರತಿಮೆಯಲ್ಲಿ ಸನ್ನಿಹಿತನಾಗಲು ಪ್ರಾರ್ಥಿಸಬೇಕು.

ಇದರರ್ಥ ಪ್ರತಿಮೆಯಲ್ಲಿ ದೇವರ ಸನ್ನಿಧಾನವೇ ಇಲ್ಲವೆಂದಲ್ಲ. ಇದಲ್ಲದೆ ಎಲ್ಲೆಡೆಯಲ್ಲೂ ತುಂಬಿದ ಭಗವಂತ ನಾವು ಆವಾಹಿಸುವದಕ್ಕೂ ಮುಂಚೆ ಪ್ರತಿಮೆಯಲ್ಲಿ ಒಂದು ರೂಪದಿಂದ ಇದ್ದೇ ಇರುವನು. ಆದರೂ ವಿಶೇಷ-ಸನ್ನಿಧಾನಕ್ಕಾಗಿ ಆವಾಹನ ಪ್ರಾರ್ಥನೆ.

## ಗೋಲಕ ಚಿಂತನ

(ಗೋಲಕ ಚಿಂತನ ಎಂಬ ಶೀರ್ಷಿಕೆಯಿಂದ ಆರಂಭಿಸಿ ಅಭಿಷೇಕವಿಧಿ ಎಂಬ ಶೀರ್ಷಿಕೆಯವರೆಗಿರುವಈಮುಂದಿನಭಾಗವುಸಂಸ್ಕೃತದಅನುಸಂಧಾನವಿಶೇಷಾಃ ಎಂಬುದರ ಕನ್ನಡಾನುವಾದ.)

ನಾವು ಹಿಂದೆ ತಿಳಿಸಿದಂತೆ ಭಗವಂತನನ್ನು ನೇರವಾಗಿ ಜಡಪ್ರತಿಮೆಯಲ್ಲಿ ಆವಾಹಿಸಕೂಡದು.

ಭಗವಂತನಿಗೆ ಸಾಕ್ಷಾತ್ ಅಧಿಷ್ಠಾನಳು ರಮಾದೇವಿ. ಅವಳಿಗೆ ಅಧಿಷ್ಠಾನರು ಮುಖ್ಯಪ್ರಾಣದೇವರು.

ಹೀಗಿರುವುದರಿಂದ ಮೊದಲು ವಾಯುದೇವರನ್ನು ಗೋಲಕವಾಗಿ ಪ್ರತಿಮೆಯಲ್ಲಿ ಆವಾಹಿಸಿ, ಬಳಿಕ ಆ ವಾಯುಗೋಲಕದಲ್ಲಿ ರಮಾದೇವಿಯನ್ನು ಗೋಲಕವಾಗಿ ಆವಾಹಿಸಬೇಕು. ಹೀಗೆ ಪ್ರತಿಮೆಯಲ್ಲಿ ವಾಯು ಲಕ್ಷ್ಮೀ ಎಂಬ ಎರಡು ಗೋಲಕ (ಅಧಿಷ್ಠಾನ)ಗಳನ್ನು ತಿಳಿಯಬೇಕು.

ವಾಯು ರಮಾ ನಾರಾಯಣರು ಇರುವ ಕ್ರಮವನ್ನು ಸ್ವಲ್ಪ ತಿಳಿಯೋಣ.

ಸ್ವತಃ ಪ್ರತಿಮೆಗೇ ಅನೇಕ ಅವಯವಗಳು. ಅವುಗಳಿಗೆ ಸಾವಿರಾರು ಭಾಗಗಳು. ಅಲ್ಲಿ ಹತ್ತಾರುಸಾವಿರ ತುಂಡುಗಳು. ಅದರಲ್ಲಿ ಲಕ್ಷಾಂತರ ತುಣುಕುಗಳು. ಅಲ್ಲಿ ನಮ್ಮ ಲೆಕ್ಕದಿಂದ ಕೊನೆಯಾದ ಪರಮಾಣುಗಳು. ಅವುಗಳನ್ನು ಭೇದಿಸಿ ಭಾಗಿಸಿದಾಗ ಕಂಡು ಬರುವದು ಅನಂತಾಂಶಗಳ ವಿಶ್ವ.

ಹೀಗೆ ಅನೇಕ ಅಂಗಗಳು ಸಹಸ್ರಾರು ಭಾಗಗಳು, ಲಕ್ಷಾಂತರ ತುಂಡುತುಣುಕುಗಳು ಲೆಕ್ಕವಿಲ್ಲದ ಅನಂತ ಪರಮಾಣುಗಳು.

ಇವುಗಳಲ್ಲೆಲ್ಲಾ ಆಯಾ ಪರಿಮಾಣದ ಆಯಾ ರೂಪ, ಗುಣ, ಭಾರ ಇತ್ಯಾದಿ ಗಳುಳ್ಳವರಾಗಿ ವಾಯುದೇವರು ಅನಂತಾಂಶಗಳಿಂದ ಸನ್ನಿಹಿತರಾಗಿರುವರು.

ಅವರು ನಿಖಿಲಜೀವೋತ್ತಮರು, ಪರಮಶುದ್ಧರು, ಋಜುಗಣದರಸರು, ಶ್ರೀಹರಿಯ ಪರಿಪೂರ್ಣಕೃಪಾಪಾತ್ರರು, ನಿಖಿಲವಿಶ್ವವ್ಯಾಪ್ತರು.

ಇಂಥ ಪಾಪಾವಿದ್ಧ ಅಖಿಲಜೀವೋತ್ತಮ ವಾಯುಪ್ರತಿಮೆಯ ಅನಂತಾಂಶ ಗಳಲ್ಲಿಶ್ರೀ ರಮಾದೇವಿಯು ತನ್ನ ಅಪ್ರಾಕೃತ ಕೇವಲ ಚಿನ್ಮಯ ಅನಂತಾಂಶಗಳಿಂದ ವ್ಯಾಪಿಸಿ ಇರುವಳು.

ಇವಳು ಭಗವಂತನಿಗೆ ಪರಮ ಪ್ರಿಯತಮಳು, ಭಗವಂತನಿಗೆ ಅನಂತಾಂಶ ಗಳಿಂದ ಕಡಿಮೆಯಾದರೂ ಅನಂತಗುಣಪೂರ್ಣಳೂ, ದೇವರಂತೆ ದೇಶಕಾಲ ವ್ಯಾಪ್ತಳೂ, ಶ್ರೀಹರಿಯನ್ನು ಬಿಟ್ಟು ವಿಶ್ವದ ಎಲ್ಲ ವಸ್ತುಗಳಿಗೆ ಅಭಿಮಾನಿನಿಯೂ ನಿತ್ಯಮುಕ್ತಳೂ ಆಗಿರುವಳು.

ಇವಳ ಈ ಎಲ್ಲ ಸೂಕ್ಷ್ಮಾತಿಸೂಕ್ಷ್ಮ ಅನಂತಾಂಶಗಳಲ್ಲಿ ನಿಸ್ಸೀಮಶಕ್ತಿಶಾಲಿ, ನಿರವಧಿಕಸ್ವತಂತ್ರ ಶ್ರೀಹರಿಯು ಅತಿಪರಮಸೂಕ್ಷ್ಮ ಅಣೋರಣೀಯ ನಿರವಧಿಕ ಅನಂತ ಪರಿಪೂರ್ಣಾಂಶಗಳಿಂದ ವ್ಯಾಪಿಸಿ ಪ್ರತಿಷ್ಠಿತನಾಗಿರುವ.

ಇದುವೇ ಗೋಲಕದ್ವಯದಲ್ಲಿ ಭಗವಚ್ಚಿಂತನ.

## ಪ್ರತಿಮಾಸ್ಥ ಭಗವದ್ರೂಪ ಚಿಂತನ

ನಾವು ಪೂಜಿಸುವ ಪ್ರತಿಮೆಯಲ್ಲಿ ಸನ್ನಿಹಿತನಾಗಿರುವ ಭಗವಂತನ ಒಂದು ರೂಪವು ಪ್ರತಿಮೆಯ ಸಮಾನಾಕಾರವಾದುದು.

ಈ ಸಮಗ್ರ ಪ್ರತಿಮೆಯಲ್ಲಿ ವ್ಯಾಪಿಸಿದ ಒಂದು ಭಗವಂತನ ರೂಪಕ್ಕೆ ಅನೇಕ ಇಂದ್ರಿಯಗಳು ಹಾಗೂ ಅಂಗಗಳು ಇರುವವು.

ಭಗವಂತನ ಬೇರೆ ಬೇರೆ ರೂಪಗಳೇ ದೇವರ ಇಂದ್ರಿಯಗಳು ಹಾಗೂ ಅಂಗಗಳು ಆಗಿವೆ. ಉದಾಹರಣೆಗೆ, ದೇವರ ಕಣ್ಣು ಕಪಿಲ, ಘ್ರಾಣ ನರಸಿಂಹ, ವಾಕ್ ಭಾರ್ಗವರಾಮ, ತಲೆ ಅನಿರುದ್ಧ, ಬಲಗೈ ಎಡಗೈ ಪ್ರದ್ಯುಮ್ನ, ಎರಡು ಕಾಲುಗಳು ಸಂಕರ್ಷಣ, ಮಧ್ಯದೇಹ ವಾಸುದೇವ ಇತ್ಯಾದಿ ಇತ್ಯಾದಿ.

ಈ ದೇವರ ಕಣ್ಣಾಗಿರುವ ಕಪಿಲದೇವರಿಗೂ ಕಣ್ಣು ಘ್ರಾಣ ವಾಕ್ ತಲೆ ಮುಂತಾದವುಗಳೆಲ್ಲ ಇವೆ. ಅವೂ ಎಲ್ಲವೂ ಕಪಿಲಾದಿಭಗವದ್ರೂಪಗಳೇ.

ಪರಮಾಣುವಿಗಿಂತಲೂ ಅಣುತರವಾದ ರೂಪಗಳಲ್ಲೂ ಇದೇ ತರಹ ಶಿರಸ್ಸು, ಕಣ್ಣು, ಬಾಹು, ವಕ್ಷಸ್ಸು, ಉದರ, ಕಟಿ, ತೊಡೆ, ಪಾದ ಎಂದಾಗಿ ಸಮಗ್ರ ಅಂಗಗಳು ಇವೆ.

ಇಷ್ಟು ಮಾತ್ರವಲ್ಲ, ಅಣೋರಣೀಯರೂಪಗಳಲ್ಲೂ ಅನಂತ ಶಿರಸ್ಸು ಅಸಂಖ್ಯ ಕಣ್ಣು, ಅಗಣಿತ ಬಾಹು, ಅಪರಿಮಿತ ವಕ್ಷಸ್ಸು, ಲೆಕ್ಕವಿಲ್ಲದ ಉದರ, ಎಣಿಕೆ ಮೀರಿದ ಕಟಿ, ಅಪಾರ ತೊಡೆ, ಅಮಿತ ಪಾದಗಳು ಇವೆ.

ಇಂಥ ಅಣೋರಣೀಯ ಅನೇಕ ರೂಪಗಳ ಸಮುದಾಯವೇ ಒಂದು ಅಣುವಿನ ಸಮಪರಿಮಾಣರೂಪ.

ಇಂಥ ಅಣುಪರಿಮಾಣರೂಪಗಳ ಗುಂಪು ಒಂದು ಕಣಸಮ ಪರಿಮಾಣ-ರೂಪ.

ಅಂಥ ಅನೇಕಾನೇಕ ಕಣಸಮಪರಿಮಾಣರೂಪಗಳ ಸಮೂಹವೇ ಸಣ್ಣ ಪ್ರತಿಮೆಯಲ್ಲಿರುವ ಭಗವದ್ರೂಪದ ಪಾದರೂಪ.

ಇಂಥ ಅನೇಕ ರೂಪಗಳ ಗಣವೇ ಆ ಪ್ರತಿಮೆಯಲ್ಲಿರುವ ಸಮಗ್ರರೂಪ.

ನಾವು ಹೇಳಿದುದಷ್ಟೇ ಕೊನೆಯೆಂದು ತಿಳಿಯಬಾರದು. ಇದು ಕೇವಲ ತಿಳಿವಿಗಾಗಿ ಹೇಳಿದ ಮಾತು.

ಇಂಥ ಭಗವದ್ರೂಪವನ್ನು ಪ್ರತಿಮೆಯಲ್ಲಿ ಸನ್ನಿಹಿತನಾಗಲು ಪ್ರಾರ್ಥಿಸಬೇಕು.

### ಅನೇಕ ಭಗವದ್ರೂಪಗಳ ಚಿಂತನ

ಇದಲ್ಲದೇ, ಮಹಾಕಾಲ, ಅವ್ಯಾಕೃತಾಕಾಶ, ವರ್ಣ, (ಶಬ್ದ)

ಪ್ರಕೃತ್ಯಾದಿ ತತ್ತ್ವ ಬ್ರಹ್ಮಾಂಡಗತ ಪದಾರ್ಥ,ತೀರ್ಥಕ್ಷೇತ್ರಪ್ರತಿಮೆ,

ಕಾರ್ಯಕಾರಣ-ಪ್ರೇರಕಪ್ರೇರ್ಯಾದಿಗಳು,

ಅನಂತ ಜೀವರಾಶಿ, ಜೀವರ ಗುಣ, ಕರ್ಮ,

ತರತಮಭಾವದಿಂದಿರುವ ಸಕಲ ಜೀವರು,

ಮುಕ್ತರು, ನಿತ್ಯಮುಕ್ತಳಾದ ಲಕ್ಷ್ಮೀ

ಇವರೆಲ್ಲರಲ್ಲಿರುವ ಅಂತರ್ಯಾಮಿರೂಪಗಳು,

ವಿಭೂತಿರೂಪಗಳು, ಹಾಗೂ ಅವತಾರಗಳು,

ಇನ್ನಿತರ ಭಗವದ್ರೂಪಗಳು

ಗುಣಾತ್ಮಕ, ಕ್ರಿಯಾತ್ಮಕ ಭಗವದ್ರೂಪಗಳು

ನಾನು ಪೂಜಿಸುವ ಈ ಪ್ರತಿಮೆಯಲ್ಲಿರುವ ಬಿಂಬರೂಪದೊಡನೆ ಅಭಿನ್ನರಾಗಿದ್ದು ಸನ್ನಿಹಿತರಾಗಬೇಕು ಎಂದು ಪ್ರಾರ್ಥಿಸಬೇಕು.

## ೧. ಕಾಲ

ಮಹಾಕಾಲ ಅನಾದಿ, ನಿತ್ಯ ಎಲ್ಲ ದೇಶದಲ್ಲಿ ವ್ಯಾಪಿಸಿರುವುದು. ಈ ಮಹಾಕಾಲದ ಅಂಶಗಳು ನಾನಾ ಬಗೆ.

ಬ್ರಹ್ಮಕಲ್ಪ, ದಿನಕಲ್ಪ, ಮನ್ವಂತರ, ಮಹಾಯುಗ, ಯುಗ, ವರ್ಷ, ಋತು, ಮಾಸ, ದಿನ, ಮುಹೂರ್ತ, ಘಟಿಕಾ, ಲಘು, ಕಾಷ್ಠಾ, ಕ್ಷಣ, ನಿಮೇಷ, ಲವ, ವೇಧ, ತ್ರುಟಿ, ತ್ರ್ಯಣುಕ, ದ್ವ್ಯಣುಕ, ಪರಮಾಣು ಹಾಗೂ ಆ ಪರಮಾಣುಕಾಲದ ಅಪರ್ಯವಸಿತ ಅನಂತಾಂಶಗಳು. ಇವುಗಳೆಲ್ಲ ಮಹಾಕಾಲದ ಅಂಶಗಳು.

ಈ ಪ್ರತಿಯೊಂದು ಕಾಲಾಂಶಗಳು ಅನಂತಾನಂತ. ಹಿಂದಿನ ಹಿಂದಿನ ಬೃಹತ್ ಕಾಲಾಂಶಗಳಿಗಿಂತಲೂ ಮುಂದಿನ ಮುಂದಿನ ಕಾಲಾಂಶಗಳ ಸಂಖ್ಯೆಯು ಹೆಚ್ಚು ಹೆಚ್ಚು ಇರುವದು.

ಇವೆಲ್ಲದಕ್ಕೂ ರಮಾ ಬ್ರಹ್ಮ ಮುಂತಾದ ಅನೇಕಾನೇಕ ಅಭಿಮಾನಿ ದೇವತೆಗಳಿರುವರು. ಹೀಗಿರುವ ಅನಾದಿ ಅನಂತ ಮಹಾಕಾಲದ, ಅನಂತಾನಂತಕಾಲಾಂಶಗಳ, ಇದೆಲ್ಲದರ ಅಭಿಮಾನಿದೇವತೆಗಳ ಸೃಷ್ಟಿ ನಿಯಮನ, ಪ್ರೇರಣೆ ಮಾಡುತ್ತವೆ ಭಗವಂತನ ಅನಂತ ರೂಪಗಳು.

ಅಲ್ಲದೇ ಯಾವುದೇ ಒಂದು ಕಾರ್ಯವು ಜನಿಸಲು ಕಾಲವು ನಿಮಿತ್ತ-ವಾಗುವದು. ಆಯಾ ಕಾಲಗಳನ್ನು ನಿಮಿತ್ತಗೊಳಿಸಿದ್ದೂ ಈ ಭಗವದ್ರೂಪಗಳೇ.

ಸಾಮಾನ್ಯವಾಗಿ, ನಾವೆಲ್ಲರೂ ವರ್ಷ ದಿನ ತಾಸು ನಿಮಿಷಗಳನ್ನು ಅನುಭವಿಸುತ್ತೇವೆ. ಆದರೆ ಅತಿಸೂಕ್ಷ್ಮವಾದ ಕಾಲಾಂಶಗಳು (Fraction of second) ಸ್ಪಷ್ಟವಾಗಿ ನಮ್ಮ ಅನುಭವಕ್ಕೆ ಗೋಚರಿಸುವದಿಲ್ಲ.

ದೇವರಿಗೆ ಮಾತ್ರ ಅನಂತಾನಂತಾಂಶಗಳೂ ಅನುಭವಕ್ಕೆ ಗೋಚರವಾಗುತ್ತವೆ. ಆದ್ದರಿಂದ ಆ ಆ ಸೂಕ್ಷ್ಮಾಂಶಗಳಲ್ಲಿರುವ ಭಗವಂತನು ಆ ಆ ಕಾಲಾಂಶಭೋಕ್ತಾ ಎಂದು ಕರೆಯಲ್ಪಡುತ್ತಾನೆ.

ಹೇಗೆ ದೇವರು ರಸದಲ್ಲಿ ರಸನಾಗಿ, ಶಬ್ದದಲ್ಲಿ ಶಬ್ದನಾಗಿ, ನೀರಿನಲ್ಲಿ ನೀರಾಗಿ ಮಣ್ಣಿನಲ್ಲಿ ಮಣ್ಣಾಗಿ ಇರುವನೋ ಅಂತೆಯೇ ಕಾಲದಲ್ಲಿ ಕಾಲವಾಗಿ ಇರುವನು.

ಅಲ್ಲಲ್ಲಿ ಆಯಾ ತೆರನಾಗಿ ಇರುವ ರೂಪಗಳಿಗೆ ಸ್ವಾಖ್ಯರಸ, ಸ್ವಾಖ್ಯಶಬ್ದ, ಸ್ವಾಖ್ಯದೇಶ, ಸ್ವಾಖ್ಯಕಾಲ ಎಂದು ಕರೆಯುತ್ತಾರೆ.

ಕಾಲಕ್ಕೆ ವ್ಯಾಪ್ತತ್ವವನ್ನು, ಮಹಾಕಾಲಕ್ಕೆ ಅನಾದಿನಿತ್ಯತ್ವವನ್ನು, ಅವಾಂತರ ಕಾಲಾಂಶಗಳಿಗೆ ಉತ್ಪತ್ತಿವಿನಾಶವನ್ನು, ನಿಮಿತ್ತಕಾರಣತ್ವವನ್ನು ಕೊಟ್ಟ, ಸರ್ವಕಾಲಾಂಶಗಳನ್ನು ಅನುಭವಿಸುವ, ಸಕಲಕಾಲನಿಯಾಮಕ ಪ್ರೇರಕ ಸ್ವಾಖ್ಯಕಾಲರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೨. ದೇಶ

ಒಂದು ಪರಮಾಣುವು ವ್ಯಾಪಿಸುವ ದೇಶವನ್ನು ಪರಮಾಣುದೇಶವೆಂದು ಕರೆಯೋಣ. ಇದೇ ರೀತಿ ಕಲ್ಲು, ಬಂಡೆ, ಬೆಟ್ಟ, ಬ್ರಹ್ಮಾಂಡ ಎಂಬುದಾಗಿ ದೇಶದ ಅಂಶಗಳು ಅನಂತವಾಗಿವೆ, ಅನಂತಬಗೆಯಾಗಿವೆ.

ಈ ಲೆಕ್ಕದಿಂದ ಅವ್ಯಾಕೃತಾಕಾಶದಲ್ಲಿ ಪರಮಾಣುವನ್ನಾರಂಭಿಸಿ ಎಷ್ಟೆಷ್ಟು ಪದಾರ್ಥಗಳು ಇರುವವೋ ಅಷ್ಟಷ್ಟು ಬಗೆಯ ಆಕಾರಗಳು ಇವೆ ಎಂದರ್ಥ.

ಇಷ್ಟೆಲ್ಲ ದೇಶಾಂಶಗಳನ್ನು, ಅವುಗಳ ಪರಿಮಾಣವನ್ನು, ಅನಾದಿತ್ವ ನಿತ್ಯತ್ವಗಳನ್ನು ಆ ದೇಶ ಮತ್ತು ಅಂಶಗಳ ಅಭಿಮಾನಿಗಳನ್ನೂ ನಿಯಮಿಸುತ್ತಿವೆ ಭಗವಂತನ ರೂಪಗಳು.

ಪ್ರತಿಯೊಂದು ಪದಾರ್ಥಕ್ಕೂ ಇರಲು ಅವಕಾಶ ಬೇಕು. ಅವಕಾಶವಿಲ್ಲದಿದ್ದರೆ ಇರಲು ಸಾಧ್ಯವಿಲ್ಲ. ಎಲ್ಲ ಪದಾರ್ಥಗಳಿಗೆ ಅವಕಾಶಗಳನ್ನು ಕೊಡುವದು ಆಕಾಶ. ಇದನ್ನೇ 'ಅವಕಾಶಪ್ರದ' ಎಂದು ಕರೆಯುತ್ತಾರೆ. ಈ ಅವಕಾಶಪ್ರದತ್ವವನ್ನು ನೀಡಿದವನು ದೇವರೇ.

ಹಿಂದೆ (ಕಾಲಪ್ರಕರಣದಲ್ಲಿ) ಹೇಳಿದಂತೆ ದೇವರು ಸ್ವಾಖ್ಯದೇಶ ರೂಪಗಳಿಂದ ದೇಶದಲ್ಲಿ ವ್ಯಾಪಿಸಿರುವ.

ಹಿಂದೆ ಹೇಳಿದಂತೆಯೇ ಪರಮ ಅಣುತಮ ದೇಶಾಂಶವನ್ನೂ ಭಗವಂತನು ಅನುಭವಿಸುತ್ತಾನೆ. ಅಂತೆಯೇ 'ದೇಶಭೋಕ್ತಾ' ಎಂದು ಕರೆಯುವರು.

ದೇಶಕ್ಕೆ ವ್ಯಾಪ್ತತ್ವವನ್ನು, ದೇಶಾಂಶಗಳಿಗೆ ನಾನಾ ಪರಿಮಾಣಗಳನ್ನು, ಅನಾದಿನಿತ್ಯತ್ವವನ್ನು, ನಿಮಿತ್ತಕಾರಣತ್ವವನ್ನು, ಅವಕಾಶಪ್ರದತ್ವವನ್ನು ಕೊಟ್ಟ, ಸರ್ವದೇಶಾಂಶಗಳನ್ನು ಅನುಭವಿಸುವ, ಸಕಲದೇಶನಿಯಾಮಕ ಪ್ರೇರಕ ಸ್ವಾಖ್ಯದೇಶರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೩. ವರ್ಣ-ಶಬ್ದ

ವೇದಗಳು ಅನಂತ. ಅವುಗಳಲ್ಲಿಯ ಅಂಶಗಳೂ ಅನಂತ. ಉಪವೇದ, ಅವಾಂತರವೇದ, ಶಾಖಾವೇದ, ಅಷ್ಟಕ, ಅಧ್ಯಾಯ, ಸೂಕ್ತ, ವರ್ಗ, ಋಕ್, ಅರ್ಧಋಕ್, ಪಾದ, ಪದ ಇತ್ಯಾದಿಗಳು ಅಂಶಗಳು.

ಈ ಎಲ್ಲ ಅಂಶಗಳಿಗೆ ಅಭಿಮಾನಿಗಳಿರುವರು. ಆ ಅಭಿಮಾನಿಗಳಲ್ಲಿ ತಾರತಮ್ಯವಿದೆ.

ಪದದ ಅಭಿಮಾನಿಗಿಂತಲೂ ಪಾದದ ಅಭಿಮಾನಿದೇವತೆ ಉತ್ತಮ. ಪಾದಾಭಿಮಾನಿಗಿಂತಲೂ ಅರ್ಧಋಕ್ಕಿನ ಅಭಿಮಾನಿದೇವತೆ ಉತ್ತಮ ಇತ್ಯಾದಿ.

ಇದಲ್ಲದೆ ಅನಾದಿನಿತ್ಯವಾದ ಎಲ್ಲದೇಶದಲ್ಲಿ ತುಂಬಿರುವ ಎಂದಿಗೂ ವಿಕೃತವಾಗದ ಐವತ್ತು ವರ್ಣಗಳೂ ಅಂಶಗಳೇ. ಅದಕ್ಕೆ ಅಭಿಮಾನಿನಿ ರಮಾದೇವಿ.

ಹೀಗೆ ವೇದರಾಶಿ ಒಂದು ಅನಂತವ್ಮಾಯ ಪ್ರಪಂಚ.

ಅಲ್ಲದೆ ಪಂಚರಾತ್ರಾಗಮ ನೂರುಕೋಟಿ. ಆದಿಭಾಗವತಪುರಾಣ ನೂರುಕೋಟಿ. ರಾಮಾಯಣವೂ ನೂರುಕೋಟಿ. ಬ್ರಹ್ಮತರ್ಕಬೃಹತ್ತರ್ಕಾದಿ ಗ್ರಂಥಗಳು ನೂರುಕೋಟಿ.

ಬ್ರಹ್ಮಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳು. ಒಂದೊಂದರಲ್ಲಿ ನಾಲ್ಕು ಪಾದಗಳು.

ಇದಲ್ಲದೆ ಅಪಾರ ಲೌಕಿಕವಾಙ್ಮಯ.

ಜೊತೆಗೆ ಸಮುದ್ರಘೋಷ, ಘಂಟಾನಾದ, ಪ್ರಾಣಿ-ಪಕ್ಷಿಗಳ ದನಿ, ಹಲ್ಲಿಯ ಲೊಚಗುಟ್ಟುವ ಶಬ್ದ ಮುಂತಾದ ಅಸಂಖ್ಯ ಧ್ವನಿಗಳು.

ಈ ಎಲ್ಲ ವರ್ಣಧ್ವನಿಗಳಲ್ಲೂ ವಾಙ್ಮಯಪ್ರಪಂಚದಲ್ಲೂ ಭಗವಂತ ಸ್ವಾಖ್ಯ ಧ್ವನಿ ವರ್ಣಾದಿರೂಪಗಳಿಂದ ವ್ಯಾಪಿಸಿದ್ದು ನಿಯಾಮಕ, ಪ್ರೇರಕ, ಜನಕ, ಆಧಾರನಾಗಿರುವನು.

ಈ ವರ್ಣಗಳು ಅನಾದಿ, ನಿತ್ಯ, ವ್ಯಾಪ್ತ, ಅವಿಕಾರಿ ಆಗಿರುವದು ಭಗವಂತನಿಂದಲೇ. ಇವೆಲ್ಲವನ್ನು ಸ್ವತಂತ್ರವಾಗಿ ಉಚ್ಚರಿಸುವವನು ಅವನೇ.

ಇವುಗಳಲ್ಲಿ ತತ್ತ್ವವನ್ನು ಬೋಧಿಸುವ, ಅರ್ಥವನ್ನು ತಿಳಿಸುವ ಶಕ್ತಿಯನ್ನು

ದಯಪಾಲಿಸುವವನು ಆತನೇ. ಈ ಎಲ್ಲ ವರ್ಣಧ್ವನಿಗಳು ಭಗವಂತನ ಅನಂತಗುಣಮಾಹಾತ್ಮ್ಯಗಳನ್ನು ಸ್ತುತಿಸುತ್ತವೆ.

ವರ್ಣಗಳನ್ನು ವ್ಯಾಪ್ತವನ್ನೂ, ಅನಾದಿನಿತ್ಯವನ್ನೂ, ಅವಿಕಾರಿಯನ್ನೂ ಅರ್ಥಬೋಧಕವನ್ನೂ ಮಾಡಿದ, ಅವೆಲ್ಲವನ್ನೂ ಅನುಭವಿಸುವ, ಅವೆಲ್ಲದಕ್ಕೆ ನಿಯಾಮಕ ಪ್ರೇರಕ ಸ್ವಾಖ್ಯ-ವರ್ಣ-ಧ್ವನಿರೂಪಗಳು ಹಾಗೂ ಆ ಎಲ್ಲ ವರ್ಣಧ್ವನಿಗಳಿಂದ ವರ್ಣಿಸಲ್ಪಡುವ ಭಗವದ್ರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೪. ಪ್ರಕೃತ್ಯಾದಿ ಪದಾರ್ಥಗಳು

ಸತ್ವ, ರಜಸ್, ತಮಸ್, ಮಹತ್, ಅಹಮ್, ಬುದ್ಧಿ, ಪ್ರಾಣ, ಮನಸ್ಸು, ಹತ್ತು ಇಂದ್ರಿಯ, ಐದು ತನ್ಮಾತ್ರಾ, ಐದು ಭೂತ ಇವೆಲ್ಲವುಗಳ ಪರಮಸೂಕ್ಷ್ಮರೂಪಕ್ಕೆ 'ಪ್ರಕೃತಿ' ಎಂದು ಹೆಸರು.

ಈ ಪ್ರಕೃತಿ ಅನಾದಿನಿತ್ಯ. ಈ ಪ್ರಕೃತಿಯು ವಿಕಾರಗೊಂಡಾಗ ಕ್ರಮವಾಗಿ ಗುಣತ್ರಯ, ಮಹತ್ ಅಹಂ ಇತ್ಯಾದಿಯಾಗಿ ಆಗುತ್ತವೆ.

ಅನಾದಿಕಾಲದಿಂದ ಅನಂತಕಾಲದವರೆಗೆ ನಡೆಯುತ್ತಲೆ ಇರುವ ಪ್ರತಿಯೊಂದು ಸೃಷ್ಟಿಕಾಲದಲ್ಲಿ ಅನಂತಾನಂತಪರಮಾಣುಗಳು ಹುಟ್ಟುತ್ತವೆ.

ಕಾರಣ ಸೃಷ್ಟಿಕಲ್ಪಗಳು ಹಿಂದೆ ಅನಂತ. ಮುಂದೆಯೂ ಅನಂತ. ಆ ಆ ಕಲ್ಪಗಳಲ್ಲಿ ಜನಿಸುವ ಪರಮಾಣುಗಳು ಅನಂತಾನಂತ.

ಅವುಗಳಿಂದ ಮುಂದೆ ದ್ವ್ಯಣುಕ, ತ್ರ್ಯಣುಕ, ಮಣ್ಣು, ಕಲ್ಲು, ಬೀಜ, ಸಸಿ, ಗಿಡ, ಕೊಂಬು, ಚಿಗುರು, ಎಲೆ, ಹೂ, ಹಣ್ಣು, ಮನೆ, ಊರು, ನಗರ, ಕಾಡು, ಬೆಟ್ಟ, ನದಿ, ಸಮುದ್ರ, ಮೇರು, ಮಂದರ, ಹಿಮಾಲಯ, ಸಹ್ಯ ಮುಂತಾದ ಬೆಟ್ಟಗಳು,

ಇಲಾವೃತ, ಭದ್ರಾಶ್ವ, ಹರಿವರ್ಷ, ಕೇತುಮಾಲ, ರಮ್ಯಕ, ಹಿರಣ್ಮಯ, ಕಿಂಪುರಷ, ಭರತ ಎಂಬ ಒಂಬತ್ತು ವರ್ಷಗಳು,

ಜಂಬೂ, ಪ್ಲಕ್ಷ, ಶಾಲ್ಮಲ, ಕುಶ, ಕ್ರೌಂಚ, ಶಾಕ, ಪುಷ್ಕರ ಎಂಬ ಸಪ್ತದ್ವೀಪಗಳು,

ಲವಣ, ಇಕ್ಷು, ಸುರಾ, ಸರ್ಪಿ, ಕ್ಷೀರ, ದಧಿ, ಸ್ವಾದೂದಕ ಎಂಬ ಸಪ್ತಸಾಗರಗಳು,

ಸೂರ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ ಎಂಬ ಗ್ರಹಗಳು, ಅಸಂಖ್ಯಜ್ಯೋತಿರ್ಮಂಡಲಗಳು,

ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ, ಪಾತಾಲ ಎಂಬ ಏಳು ಅಧೋಲೋಕಗಳು,

ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ ಎಂಬ ಏಳು ಮೇಲು ಲೋಕಗಳು.

ಇಷ್ಟೆಲ್ಲಕ್ಕೂ ಆಧಾರವಾದ ಐವತ್ತು ಕೋಟಿ ಯೋಜನವಿಸ್ತೀರ್ಣವಾದ ಬ್ರಹ್ಮಾಂಡ, ಅದರಾಚೆ ಒಂದರ ಹೊರಗೊಂದರಂತೆ ಇರುವ

ನೂರುಕೋಟಿಯೋಜನ ವಿಸ್ತೀರ್ಣವಾದ ಪೃಥಿವೀತತ್ತ್ವ

ಸಾವಿರಕೋಟಿ ಯೋಜನ ವಿಸ್ತೀರ್ಣವಾದ ಜಲತತ್ತ್ವ

ಹತ್ತುಸಾವಿರಕೋಟಿ ಯೋಜನ ವಿಸ್ತೀರ್ಣವಾದ ಅಗ್ನಿತತ್ತ್ವ

ಲಕ್ಷಕೋಟಿ ಯೋಜನ ವಿಸ್ತೀರ್ಣವಾದ ವಾಯುತತ್ತ್ವ

ದಶಲಕ್ಷಕೋಟಿ ಯೋಜನವಿಸ್ತೀರ್ಣವಾದ ಆಕಾಶತತ್ತ್ವ

ಅದಕ್ಕೆ ಹೊರಗೆ ಲಕ್ಷಾಂತರಯೋಜನವಿಸ್ತೀರ್ಣ ತನ್ಮಾತ್ರಾ, ಇಂದ್ರಿಯಾದಿ ತತ್ತ್ವ

ಕೋಟಿ ಕೋಟಿ ಯೋಜನ ವಿಸ್ತೀರ್ಣ ಅಹಂಕಾರತತ್ತ್ವ

ದಶಕೋಟಿಕೋಟಿ ಯೋಜನವಿಸ್ತೀರ್ಣವಾದ ಮಹತ್ತತ್ತ್ವ

ಶತಕೋಟಿಕೋಟಿಯೋಜನವಿಸ್ತೀರ್ಣವಾದ(ತಮೋರಜಸತ್ತ್ವಗಳೆಂಬ) ಗುಣತ್ರಯ

ಅದರ ಹೊರಗೆ ಅನಂತಮಡಿ ಮಿಗಿಲಾದ ಅಪರಿಚ್ಛಿನ್ನ ಅನಾದಿನಿತ್ಯ ಪರಮಸೂಕ್ಷ್ಮ ಮೂಲಪ್ರಕೃತಿ ಎಂಬುದಾಗಿ ವಿಶ್ವದ ವಿಸ್ತಾರವಿದೆ.

ಈ ಅಣುತಮ ಅನಂತಾನಂತ ಅಂಶಗಳಾರಂಭಿಸಿ ಮಹತ್ತಮ ತತ್ತ್ವಗಳವರೆಗಿರುವ ಎಲ್ಲ ಪದಾರ್ಥಗಳಲ್ಲಿ ಸ್ವಾಖ್ಯಪರಮಾಣು, ಸ್ವಾಖ್ಯಮಹತ್, ಸ್ವಾಖ್ಯಪ್ರಕೃತಿ ಮುಂತಾದ ರೂಪಗಳಿಂದ ಭಗವಂತನು ವ್ಯಾಪಿಸಿರುವ.

ಈ ರೂಪಗಳೇ ಆ ಎಲ್ಲ ಪದಾರ್ಥಗಳಿಗೆ ನಿಯಾಮಕ, ಜನಕ, ಪಾಲಕ, ವಿನಾಶಕ, ಪ್ರೇರಕ, ಪ್ರವರ್ತಕ, ನಿವರ್ತಕ, ಆಶ್ರಯ, ಆಧಾರ, ಸ್ವಾಮಿ, ಅಸ್ತಿತ್ವ ಕೊಡುವವು, ಪರಿಣಾಮಾದಿ ಶಕ್ತಿಯನ್ನು ಕೊಡುವವು ಆಗಿವೆ.

ಆ ಆ ಪದಾರ್ಥಗಳಿಗಿರುವ ಗುಣಧರ್ಮಗಳಿಗೆ ಸದೃಶವಾದ, ಆದರೂ ಸ್ವತಂತ್ರ ಚಿನ್ಮಯ ಆನಂದಮಯವಾಗಿರುವ ಕಾರಣ ಆ ಪದಾರ್ಥಗಳ ಗುಣ, ಧರ್ಮಗಳಿಗಿಂತ ತೀರ ಭಿನ್ನವಾದ ಗುಣಧರ್ಮಗಳು ಭಗವಂತನಲ್ಲಿ ಇವೆ.

ಉದಾಹರಣೆಗಾಗಿ ಬೆಂಕಿಯಲ್ಲಿ ದಹನಶಕ್ತಿ ಇರುವದು. ಬೆಂಕಿಯ ದಹನಶಕ್ತಿಯಂಥ ದಹನಶಕ್ತಿ ದೇವರಲ್ಲೂ ಇದೆ.

ಆದರೆ ಬೆಂಕಿಯಲ್ಲಿರುವ ದಹನಶಕ್ತಿ ಜಡ, ಅಸ್ವತಂತ್ರ. ಆ ಶಕ್ತಿ ಹುಟ್ಟುವದು. ನಾಶವಾಗುವದು. ಆ ಶಕ್ತಿಗೆ ಅವಧಿ ಇದೆ, ಪರಿಮಿತಿ ಇದೆ, ಭಂಗವಿದೆ.

ಆದರೆ ದೇವರಲ್ಲಿರುವ ದಹನಶಕ್ತಿ ಮಾತ್ರ ಚೇತನ, ಚಿನ್ಮಯ, ಆನಂದಮಯ, ಸ್ವತಂತ್ರ, ಅನಾದಿ, ಅವಿನಾಶಿ, ಅಪರಿಮಿತ, ಭಂಗರಹಿತ ಅವಧಿಶೂನ್ಯ.

ಆದ್ದರಿಂದ ಬೆಂಕಿಯ ದಾಹಶಕ್ತಿಗೆ ಸದೃಶವಾಗಿದ್ದರೂ ಅದರಿಂದ ತೀರ ವಿಲಕ್ಷಣ ಎಂದು ಶಾಸ್ತ್ರ ಹೇಳುತ್ತದೆ.

ಈ ಎಲ್ಲ ಪದಾರ್ಥಗಳ ಶಕ್ತಿ ಗುಣ-ಧರ್ಮಗಳು ಸ್ವತಂತ್ರವಾಗಿ, ನಿರವಧಿಕವಾಗಿ ದೇವರಲ್ಲಿ ಇವೆ.

ಈ ಎಲ್ಲ ಪದಾರ್ಥಗಳಲ್ಲಿ ವ್ಯಾಪಿಸಿರುವ ಸ್ವಾಖ್ಯಪ್ರಕೃತಿ ಮುಂತಾದ ರೂಪಗಳು ಅನಾದಿ, ಅನಂತ, ವ್ಯಾಪ್ತ, ಹಾಗೂ ಗುಣಪೂರ್ಣ ಆಗಿವೆ.

### ೫. ಕಾರ್ಯಕಾರಣಾದ್ಯಂತರ್ಗತರೂಪಗಳು

ಭಗವಂತನ ರೂಪಗಳ ಕುರಿತಾಗಿ ಇನ್ನೊಂದು ಮಹತ್ತ್ವದ ತತ್ವವನ್ನು ತಿಳಿಯೋಣ.

ಅಕ್ಕಿಯಿಂದ ಅನ್ನವಾಗುವದು. ಬೀಜದಿಂದ ಮರವಾಗುವದು. ಅಕ್ಕಿ, ಬೀಜ ಕಾರಣ; ಅನ್ನ, ಮರ ಕಾರ್ಯ.

ಅಕ್ಕಿ ಅನ್ನಕ್ಕೆ ಕಾರಣವಾದುದು ಸ್ವತಂತ್ರವಾಗಿ ಅಲ್ಲ. ದೇವರ ಹೊರತಾಗಿ ಯಾರೂ ಸ್ವತಂತ್ರರಲ್ಲ. ಆದುದರಿಂದ ದೇವರ ಇಚ್ಛೆಯಿಂದ, ದೇವರ ಸನ್ನಿಧಾನದಿಂದ ಅಕ್ಕಿ ಕಾರಣವಾಯಿತು, ಅನ್ನ ಕಾರ್ಯವಾಯಿತು.

ಅಕ್ಕಿಯನ್ನು ಕಾರಣಗೊಳಿಸಲು ಅವಶ್ಯವಾದ ಎಲ್ಲ ಗುಣಸ್ವಭಾವಗಳನ್ನು ಭಗವಂತ ಅಕ್ಕಿಯಲ್ಲಿಟ್ಟ. ಕಾರ್ಯವಾಗಲು ಅವಶ್ಯಕವಾದ ಗುಣಸ್ವಭಾವಗಳನ್ನು ಅನ್ನದಲ್ಲಿಟ್ಟ.

ಆಯಾ ಗುಣಸ್ವಭಾವಗಳನ್ನು ಇಡುವದು ಮಾತ್ರವಲ್ಲ, ಅವುಗಳನ್ನು ನಿಯಮಿಸುವದು, ಜೊತೆಗೆ ಅವುಗಳನ್ನು ಕ್ರಿಯಾಶೀಲವಾಗಿಯೂ, ಕಾರ್ಯಕಾರಿಯಾಗಿಯೂ ಮಾಡುವದು ಅಷ್ಟೇ ಅಗತ್ಯ.

ಇಷ್ಟೆಲ್ಲವನ್ನು ಮಾಡುವದು ಭಗವಂತನ ಅಕ್ಕಿಯಲ್ಲಿರುವ ಕಾರಣರೂಪ ಅನ್ನದಲ್ಲಿರುವ ಕಾರ್ಯರೂಪ.

ಇದೇ ರೀತಿ ಪ್ರಕೃತಿ-ಮಹತ್, ಪರಮಾಣು-ಘಟ, ಲೋಹ-ಪಾತ್ರೆ, ಕಲ್ಲುಕಬ್ಬಿಣ-ಮನೆಸೇತುವೆ.

ಇದೇ ಬಗೆಯಾಗಿ ಶಿಷ್ಯ ದಾಸ ಪುತ್ರರು ಪ್ರೇರ್ಯರಾಗಿದ್ದಾರೆ.

ಗುರು, ಸ್ವಾಮಿ ತಂದೆಗಳು ಪ್ರೇರಕರಾಗಿದ್ದಾರೆ. ಅವರನ್ನು ಪ್ರೇರ್ಯರನ್ನಾಗಿ ಇವರನ್ನು ಪ್ರೇರಕರನ್ನಾಗಿ ಮಾಡಿರುವದು ಭಗವಂತನ ಅಲ್ಲಲ್ಲಿರುವ ಪ್ರೇರ್ಯಪ್ರೇರಕರೂಪಗಳು.

ಪ್ರಜೆಗಳು ನಿಯಮ್ಯರು, ರಾಜನು ನಿಯಾಮಕ,

ನೂಲು ಅಂಶ, ಬಟ್ಟೆ ಅಂಶಿ,

ಶಿಶು ಪೋಷ್ಯ, ತಾಯಿ ಪೋಷಕ.

ದುರ್ಬಲರು ಬಾಧ್ಯರು, ಪ್ರಬಲರು ಬಾಧಕರು.

ಇವುಗಳಲ್ಲೆಲ್ಲಾ ಪ್ರೇರ್ಯ ಪ್ರೇರಕ, ನಿಯಮ್ಯ ನಿಯಾಮಕ, ಅಂಶ ಅಂಶಿ, ಪೋಷ್ಯ ಪೋಷಕ, ಬಾಧ್ಯ ಬಾಧಕವನ್ನಾಗಿ ಮಾಡುವ ರೂಪಗಳಿಂದ ಇರುವನು.

ಜೀವರು ಭೋಕ್ತೃಗಳು. ಅನ್ನಾದಿಗಳು ಭೋಗ್ಯಗಳು.

ಭೋಕ್ತೃಗಳಲ್ಲಿ ಪ್ರದ್ಯುಮ್ನ ಸಂಕರ್ಷಣರು, ಭೋಗ್ಯಗಳಲ್ಲಿ ಅನಿರುದ್ಧ ನಾರಾಯಣರು ಭೋಕ್ತೃ ಭೋಗ್ಯಶಕ್ತಿಪ್ರದರಾಗಿ ಇರುವರು.

ಇದಲ್ಲದೇ ಅಲ್ಲಲ್ಲಿ ಇರುವ ಆಹಿತ ಸಹಜ ವಿಭೂತಿ ಎಂಬ ಅನಂತ ರೂಪಗಳು.

## ೬. ಕ್ಷೇತ್ರಪ್ರತಿಮಾ

ಸೀತಾಸಮೇತಮೂಲರಾಮ, ವೆಂಕಟಾಚಲದ ವೇಂಕಟೇಶ, ಪಂಢರಪುರ ವಿಠ್ಠಲ, ವ್ಯಾಸಶಿಲಾ, ದಿಗ್ವಿಜಯರಾಮಾದಿ ಆಚಾರ್ಯ ಕರಾರ್ಚಿತಪ್ರತಿಮಾ,

ಉಡುಪಿಯ ಶ್ರೀಕೃಷ್ಣ, ಬದರೀನಾರಾಯಣ, ಶ್ರೀರಂಗದ ರಂಗನಾಥ, ಕಂಚೀ ವರದರಾಜ, ಅಹೋಬಿಲ ನರಸಿಂಹ, ಶ್ರೀಮುಷ್ಣ ಯಜ್ಞ ವರಾಹ, ಗಯಾ ವಿಷ್ಣುಪಾದ, ಪುರಿಯ ಜಗನ್ನಾಥ, ಮಥುರಾ ದ್ವಾರಕಾ ಶ್ರೀಕೃಷ್ಣ, ಅಯೋಧ್ಯಾ ಶ್ರೀರಾಮ, ಕಾಶೀ ಪ್ರಯಾಗ ಇತ್ಯಾದಿ ಇತ್ಯಾದಿ ಅಸಂಖ್ಯತೀರ್ಥಕ್ಷೇತ್ರಗಳಲ್ಲಿ ಕೋಟಿ ಕೋಟಿ ಶಾಲಿಗ್ರಾಮಗಳಲ್ಲಿ ಭಗವಂತನ ಅನಂತರೂಪಗಳು ಇವೆ.

## ೭. ಜೀವ

ಪ್ರತಿಯೊಂದು ಸೃಷ್ಟಿಕಲ್ಪದಲ್ಲಿ ಅನಂತಪರಮಾಣುಗಳು ಹುಟ್ಟಿ ಸಾಯುವವು. ಹೀಗೆ, ಹಿಂದೆ ಅನಂತಸೃಷ್ಟಿಕಲ್ಪಗಳು ಆಗಿಹೋಗಿವೆ. ಮುಂದೆ ಅನಂತಸೃಷ್ಟಿಕಲ್ಪಗಳು ಬರುವವಿವೆ.

ಆದುದರಿಂದ ಅವುಗಳಲ್ಲಿ ಹುಟ್ಟಿ ಸಾಯುವ ಪರಮಾಣುಗಳು ಅನಂತಾನಂತ. ಇದು ಒಂದು ಮೊತ್ತ.

ಅಲ್ಲದೆ ಹಿಂದೆ ಸಂದುಹೋದ ಕ್ಷಣಗಳು ಅನಂತ. ಮುಂದೆ ಬರುವ ಕ್ಷಣಗಳು ಅನಂತ, ಹಿಂದು ಮುಂದಿನ ಕ್ಷಣಗಳು ಒಟ್ಟು ಅನಂತಾನಂತ. ಇದು ಒಂದು ಮೊತ್ತ.

ಆ ಈ ಎರಡೂ ಮೊತ್ತಗಳೂ ಸೇರಿ ಮಹತ್ತರ ಅನಂತಾನಂತ ಸಂಖ್ಯೆಯಾಗುವದು. ಈ ಸಂಖ್ಯೆಗಿಂತಲೂ ಚೇತನರ ಸಂಖ್ಯೆ ಅನಂತಮಡಿ ಹೆಚ್ಚು.

ಈ ಜೀವರಾಶಿಗಳನ್ನು ಅಂಡಜ. ಉದ್ಭಿಜ್ಜ, ಸ್ವೇದಜ, ಜರಾಯುಜ ಎಂದು ಸ್ಥೂಲವಾಗಿ ವಿಂಗಡಿಸಬಹುದು.

ಅಂಡಜ ಎಂದರೆ ಮೊಟ್ಟೆಯಿಂದ ಹುಟ್ಟುವ ಪಕ್ಷಿ ಮುಂತಾದವು.

ಉದ್ಭಿಜ್ಜ ಎಂದರೆ ಭೂಮಿ ಒಡೆದು ಹುಟ್ಟುವ ಗಿಡ ಮುಂತಾದವು.

ಸ್ವೇದಜ ಎಂದರೆ ಬೆವರಿನಿಂದ ಜನಿಸುವ ಕ್ರಿಮಿ ಮುಂತಾದವು.

ಜರಾಯುಜ ಎಂದರೆ ಗರ್ಭಕೋಶದಿಂದ ಹುಟ್ಟುವ ಮನುಷ್ಯಾದಿಗಳು.

ಈ ಮೇಲೆ ಹೇಳಿದ ಗುಂಪಿನಲ್ಲಿ ಜೀವರು ಅತ್ಯಲ್ಪರು. ಅತಿಸ್ಥೂಲರು ಇರುವರು. ನೊಣ, ಇರಿವೆ, ನೊರಜು, ಸ್ತಂಬಗಳು ಇತ್ಯಾದಿಗಳು ಅತ್ಯಲ್ಪರಾದರೆ, ಕುದುರೆ, ಕೋಣ, ಒಂಟೆ, ಆನೆ, ತಿಮಿಂಗಿಲ ಇತ್ಯಾದಿಗಳು ಅತಿಸ್ಥೂಲರು.

ಈ ಎಲ್ಲ ಜೀವರನ್ನು ಪಾರ್ಥಿವ, ಆಪ್ಯ, ತೈಜಸಶರೀರ ಉಳ್ಳವರೆಂದೂ ವಿಂಗಡಿಸಬಹುದು.

ಈ ಎಲ್ಲ ಜೀವರ ಯೋನಿಗಳನ್ನು ಎಂಬತ್ತು ನಾಲ್ಕು ಲಕ್ಷವೆಂದು ಹೇಳಿರುವರು.

ಇದಲ್ಲದೆ ದಾನವ, ಮಾನವ, ದೇವ ಎಂಬ ವಿಭಾಗವೂ ಶಾಸ್ತ್ರದೃಷ್ಟ. ಈ ಗುಂಪಿನಲ್ಲಿ ಅನಂತಕಲಿ, ಅನಂತಕಾಲನೇಮಿ, ಅನಂತವಿಪ್ರಚಿತ್ತಿ, ಅನಂತ ಇಂದ್ರ, ಅನಂತರುದ್ರ, ಅನಂತಬ್ರಹ್ಮರು ಇರುವರು.

ಈ ಎಲ್ಲ ಅಸಂಖ್ಯಜಾತಿಯ, ಅಗಣಿತ ಆಕಾರದ, ಭಿನ್ನ ಭಿನ್ನ ಯೋನಿಜ, ನಾನಾಜಾತಿಯ ಶರೀರಗಳುಳ್ಳ, ಅನಂತಾನಂತ ಜೀವರಾಶಿಗಳಲ್ಲಿ ಅನಂತಾನಂತ ಸ್ವಾಖ್ಯರೂಪಗಳಿಂದ ಭಗವಂತನು ಇದ್ದು ನಿಯಮಿಸುವನು.

ಅನಾದಿಕಾಲದಿಂದ ಅನಂತಕಾಲದವರೆಗೆ ಅವರಲ್ಲಿಯ ಒಬ್ಬೊಬ್ಬರಿಗೂ ಇರುವ ಅನಂತಾನಂತ ದೇಹ, ಇಂದ್ರಿಯ, ಮನಸ್ಸು ಮುಂತಾದವುಗಳನ್ನು ಸ್ವಾಖ್ಯರೂಪಗಳಿಂದ ವ್ಯಾಪಿಸಿ ನಿಯಮಿಸುವವನು ಭಗವಂತ.

ಆ ದೇಹಗಳಲ್ಲಿ ಶಿರಸ್ಸು, ಮುಖ, ಬಾಹು, ತೊಡೆ, ಕಾಲು, ಮಸ್ತಿಷ್ಕ, ಹೃದಯ, ಪ್ಲೀಹ, ಯಕೃತ್, ಉದರ, ಕರಳು, ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್, ಮಜ್ಜಾ, ಸ್ನಾಯು, ಅಸ್ಥಿ, ನಾಡಿಗಳೆಂಬ ಅವಯವ, ಅಂಗ, ಅಂಶಗಳಲ್ಲಿ ಸ್ವಾಖ್ಯರೂಪಗಳಿಂದ ಆಯಾ ಆಕಾರವಾಗಿ ಇರುವ.

ಆ ಆ ಪದಾರ್ಥಗಳ ಆಶ್ರಯ, ಚೇಷ್ಟಕ, ಶಕ್ತಿಪ್ರದ, ಶಕ್ತಿಪ್ರೇರಕ ಆಗಿವೆ ಭಗವಂತನ ಆ ರೂಪಗಳು.

ಅಲ್ಲದೆ, ಆ ಆ ಜೀವರಾಶಿಗಳಿಗೆ ಇರವು, ಅಳಿವು, ಹಸಿವು, ತೃಷೆ, ರೋಗ, ಆರೋಗ್ಯ, ಚಿಂತೆ, ಸಂತಾಪ, ಶ್ರಮ, ಕ್ಲೇಶ, ನೋವು, ತೃಪ್ತಿ, ತೃಷ್ಣಾ, ಬಲ, ದೌರ್ಬಲ್ಯ, ಸ್ವಾದರ, ಪ್ರೇಮ, ದ್ವೇಷ, ಸಿಟ್ಟು, ಸಹನೆ, ಕಾಮ, ವೈರಾಗ್ಯ, ವಿನಯ, ಅಹಂಕಾರ, ವಿವೇಕ, ಅವಿವೇಕ, ಸ್ಥಿರತೆ, ಚಾಂಚಲ್ಯ, ಭೋಗ, ತ್ಯಾಗ, ದಯೆ, ನಿರ್ದಯತೆ, ಔದಾರ್ಯ, ಕ್ಷುದ್ರತೆ, ಜಿಪುಣತೆ, ಸೌಜನ್ಯ, ದೌರ್ಜನ್ಯ, ಸತ್ಯ, ಸುಳ್ಳು, ದಮ, ಶಮ, ಭಯ, ಅಭಯ, ಹಿಂಸೆ, ಅಹಿಂಸೆ, ಯಶಸ್ಸು, ಅಪಯಶಸ್ಸು, ಸಂಪತ್ತು, ಬಡತನ, ಧೈರ್ಯ, ಅಧೈರ್ಯ, ದಂಭ, ದರ್ಪ, ಜಯ, ಪರಾಜಯ, ಲಾಭ, ಹಾನಿ, ಸಿದ್ಧಿ, ಅಸಿದ್ಧಿ, ಸ್ಮೃತಿ, ವಿಸ್ಮೃತಿ, ಸಂಶಯ,

ಭ್ರಾಂತಿ, ಜಾಗರ, ಸ್ವಪ್ನ, ಸುಷುಪ್ತಿ, ಮೂರ್ಛೆ, ಸಮಾಧಿ, ಕ್ಷೋಭ, ಶಾಂತಿ, ಶ್ರದ್ಧೆ, ಅಶ್ರದ್ಧೆ, ಜ್ಞಾನ, ಅಜ್ಞಾನ, ದ್ವೇಷ, ಭಕ್ತಿ ಮುಂತಾದವುಗಳನ್ನೆಲ್ಲ ನೀಡುವವನು, ದಯಪಾಲಿಸುವವನು ದೇವರು.

ಹಾಗೂ ದೇಹ, ಇಂದ್ರಿಯ, ಮನಸ್ಸು ಮತ್ತು ಜೀವರ ಈ ಅನಂತಜಾತಿಯ, ಒಂದೊಂದರಲ್ಲೂ ಅಸಂಖ್ಯಬಗೆಯ ಗುಣಧರ್ಮಗಳಲ್ಲಿ ಭಗವಂತನು ಸ್ವಾಖ್ಯರೂಪಗಳಿಂದ ವ್ಯಾಪಿಸಿ ಇರುವನು.

ಭಗವಂತನ ಆ ರೂಪಗಳು ಈ ಎಲ್ಲ ಗುಣಗಳಿಗೆ ಉತ್ಪಾದಕ, ನಿಯಾಮಕ, ಪ್ರೇರಕ, ಪಾಲಕ, ವಿನಾಶಕ, ಪ್ರವರ್ತಕ, ನಿವರ್ತಕ, ಸತ್ತಾಪ್ರದ, ಶಕ್ತಿಪ್ರದ, ಆಧಾರ, ಆಶ್ರಯಗಳಾಗಿವೆ.

ಅನಂತಾನಂತಜೀವರ ಹಾಗೂ ಅವರ ದೇಹೇಂದ್ರಿಯಮನಸ್ಸುಗಳ ಮತ್ತು ಅವುಗಳೆಲ್ಲದರ ಗುಣಧರ್ಮಗಳ ನಿಯಾಮಕಾದಿಗಳಾದ ಜೀವಾದಿನಾಮಕ ಸ್ವಾಖ್ಯರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೮. ಕರ್ಮ

ಹಿಂದೆ ಹೇಳಿದಂತೆ ಅನಂತ ಪರಮಾಣುಗಳಿಗಿಂತಲೂ ಅನಂತ ಕ್ಷಣಗಳಿಗಿಂತಲೂ ಅನಂತಮಡಿ ಮಿಗಿಲಾದ ಅನಂತಾನಂತ ಜೀವರಲ್ಲಿ ಪ್ರತಿಯೊಬ್ಬರೂ ಅನಾದಿಕಾಲದಿಂದ ಅನಂತಕಾಲದವರೆಗೆ ತಮ್ಮ ದೇಹೇಂದ್ರಿಯಮನಸ್ಸುಗಳಿಂದ ಅನಂತ ಕರ್ಮಗಳನ್ನು ಮಾಡುತ್ತಾರೆ.

ಆ ಪ್ರತಿಯೊಂದು ಕರ್ಮಗಳಿಗೂ ಒಬ್ಬ ಚೇತನ ಅಭಿಮಾನಿಯಾಗಿರುವನು. ಅವನೂ ತನ್ನ ದೇಹೇಂದ್ರಿಯಮನಸ್ಸುಗಳಿಂದ ಲೆಕ್ಕ ಮೀರಿ ಕರ್ಮಗಳನ್ನು ಮಾಡುವನು. ಆ ಕರ್ಮಗಳಿಗೂ ಬೇರೆ ಚೇತನರು ಅಭಿಮಾನಿಗಳು. ಅವರಿಗೂ ಅಸಂಖ್ಯ ಕರ್ಮಗಳು.

ಹೀಗೆ ಕರ್ಮಗಳು ಅನಂತ ಗುಣಿತ ಅನಂತ. ಈ ಎಲ್ಲ ಜೀವರ ಕರ್ಮಗಳಿಗೂ, ಆ ಆ ಕರ್ಮಾಭಿಮಾನಿಗಳಿಗೂ, ಅವರ ಕರ್ಮಗಳಿಗೂ, ಎಲ್ಲದಕ್ಕೂ ನಿಯಾಮಕರಾದ ವಾಯುದೇವರಿಗೂ ಕರ್ಮಾದಿನಾಮಕ ಸ್ವಾಖ್ಯ ಭಗವಂತನ ರೂಪಗಳು ನಿಯಾಮಕ, ಪ್ರೇರಕ, ಉತ್ಪಾದಕ, ಪಾಲಕ, ವಿನಾಶಕ, ಪ್ರವರ್ತಕ, ನಿವರ್ತಕ, ಸತ್ತಾಪ್ರದ, ಶಕ್ತಿಪ್ರದ, ಆಧಾರ, ಆಶ್ರಯ, ಶುದ್ಧಿಪ್ರದ, ಸಿದ್ಧಿಪ್ರದ, ಸಾಕ್ಷಿ, ಅಂತಸ್ಥ ಆಗಿವೆ.

ಒಂದು ಕರ್ಮ ಇದ್ದ ಮಾತ್ರಕ್ಕೆ ಫಲವನ್ನು ಕೊಡುವದಿಲ್ಲ. ಆ ಕರ್ಮವು ಪಕ್ವವಾಗಬೇಕು. ಆಗ ಮಾತ್ರ ಫಲ ದೊರೆಯುವದು. ಈ ಕರ್ಮದ ಪಾಕ ಎನ್ನುವದು ಒಂದು ಬಗೆಯ ಅವಸ್ಥೆ.

ಈ ಅವಸ್ಥೆಯನ್ನು ತರುವವನು ಕರ್ಮಾಂತರ್ಯಾಮಿ ಕಪಿಲನಾಮಕ ಭಗವಂತ. ಈ ಕಪಿಲನಿಗೆ 'ಕರ್ಮಪಾಚಕ' ಎಂದು ಕರೆಯುತ್ತಾರೆ. ಅಲ್ಲದೇ ನಾವು ಮಾಡುವ ಕರ್ಮಗಳ ಫಲವನ್ನು ಭಗವಂತನು ಭೋಗಿಸುತ್ತಾನೆ. ಆದುದರಿಂದ ಅವನಿಗೆ 'ಕರ್ಮಫಲಭೋಕ್ತಾ' ಎಂದು ಕರೆದಿದ್ದಾರೆ.

ಅನಂತಾನಂತಜೀವರ ಅನಂತಾನಂತ ಕರ್ಮಗಳ ಪಾಚಕ, ಫಲಭೋಕ್ತೃ ನಿಯಾಮಕಾದಿಗಳಾದ ಕರ್ಮಾದಿನಾಮಕ ಭಗವಂತನ ಈ ಸ್ವಾಖ್ಯರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೯. ತಾರತಮ್ಯ

ಸರ್ವಜೀವರಲ್ಲಿ ಭಗವಂತನಿರುವನು. ಆದರೆ, ಎಲ್ಲ ಜೀವರಲ್ಲಿ ಭಗವಂತ ಸಮಾನವಾಗಿಲ್ಲ.

ಇದರರ್ಥ, ಉತ್ತಮ ಜೀವರಲ್ಲಿರುವ ದೇವರು ಉತ್ತಮ, ಅಧಮ ಜೀವರಲ್ಲಿರುವ ದೇವರು ಅಧಮ ಎಂದಲ್ಲ.

ಆದರೆ ಅಧಮಜೀವರಲ್ಲಿ ದೇವರ ಸನ್ನಿಧಾನ ಅಲ್ಪ, ಉತ್ತಮಜೀವರಲ್ಲಿ ದೇವರ ಸನ್ನಿಧಾನ ಹೆಚ್ಚು ಎಂದರ್ಥ.

ಭಗವಂತ ತನ್ನ ಇಚ್ಛೆಯಿಂದ ಆ ಆ ಜೀವರಲ್ಲಿ ತನ್ನ ಸಾಮರ್ಥ್ಯವನ್ನು ಗುಣಮಾಹಾತ್ಮ್ಯಗಳನ್ನು ಪ್ರಕಟಗೊಳಿಸುವನು. ಇದುವೇ ಸನ್ನಿಧಾನ.

ಈ ಅರ್ಥದಲ್ಲಿ ದೇವರು ಯಾವ ಜೀವನಲ್ಲಿ ತನ್ನ ಹೆಚ್ಚಿನ ಸಾಮರ್ಥ್ಯವನ್ನು ಪ್ರಕಟಗೊಳಿಸುವನೋ ಆ ಜೀವನಲ್ಲಿ ದೇವರ ಸನ್ನಿಧಾನವು ಹೆಚ್ಚು ಎಂದು ಹೇಳುತ್ತೇವೆ.

ಸತ್ಯಸಂಕಲ್ಪನಾದ ಭಗವಂತನು ರಮಾ ಬ್ರಹ್ಮ ವಾಯು ಮುಂತಾದ ಉತ್ತಮ ಜೀವರಲ್ಲಿ ಉಳಿದೆಲ್ಲ ಜೀವರಾಶಿಗಳಿಗಿಂತಲೂ ಅತಿ ಹೆಚ್ಚಿನ ಮಟ್ಟದಲ್ಲಿ ತನ್ನ ಸಾಮರ್ಥ್ಯವನ್ನು ವ್ಯಕ್ತಗೊಳಿಸುವನು.

ಅಂತೆಯೇ ರಮಾ, ಬ್ರಹ್ಮ, ವಾಯು ಮುಂತಾದ ದೇವತೆಗಳಲ್ಲಿ ಭಗವಂತನ ಸನ್ನಿಧಾನ ನಿರತಿಶಯ.

ಎಲ್ಲ ಜೀವರು ಶಾಲಿಗ್ರಾಮಾದಿಗಳಂತೆ ಭಗವಂತನ ಪ್ರತಿಮೆಗಳು, ಅಧಿಷ್ಠಾನರು ಎಂದೆನಿಸಿಕೊಳ್ಳುತ್ತಾರೆ. ಹಾಗಾಗಿ ಜೀವರೆಂಬ ಅಧಿಷ್ಠಾನಗಳಲ್ಲಿ (ಪ್ರತಿಮೆಗಳಲ್ಲಿ) ಭಗವಂತನನ್ನು ಪೂಜಿಸಬೇಕು.

ಭಗವಂತನ ಸನ್ನಿಧಾನವು ಯಾವ ಅಧಿಷ್ಠಾನದಲ್ಲಿ (ಪ್ರತಿಮೆಯಲ್ಲಿ) ಹೆಚ್ಚೋ, (ಅಂದರೆ ಯಾವ ಜೀವರಲ್ಲಿ ಹೆಚ್ಚೋ) ಆ ಅಧಿಷ್ಠಾನದಲ್ಲಿ (ಪ್ರತಿಮೆಯಲ್ಲಿ) (ಆ ಜೀವರಲ್ಲಿ ) ಭಗವಂತನನ್ನು ಹೆಚ್ಚಿನ ಭಕ್ತಿಶ್ರದ್ಧೆಗಳಿಂದ ಪೂಜಿಸಬೇಕು.

(ಅಂತೆಯೇ ಸಾಮಾನ್ಯ ಪ್ರತಿಮೆಗಳಿಗಿಂತಲೂ ಮೂಲರಾಮ, ಕೃಷ್ಣ ವ್ಯಾಸಶಿಲೆ, ವೇಂಕಟೇಶ, ರಂಗನಾಥ ಮುಂತಾದವುಗಳಲ್ಲಿ ಅತ್ಯಧಿಕ ಭಕ್ತಿಯಿಂದ ಸೇವೆ ಆರಾಧನೆಗಳನ್ನು ಮಾಡುವದು ಕಾಣುತ್ತದೆ.

ಏಕೆಂದರೆ ಸಾಮಾನ್ಯ ಪ್ರತಿಮೆಗಳಿಗಿಂತಲೂ ಅತಿಹೆಚ್ಚಿನ ಮಟ್ಟದಲ್ಲಿ ಕಿಂ ಬಹುನಾ ನಿರತಿಶಯವಾಗಿ ಈ ಪ್ರತಿಮೆಗಳಲ್ಲಿ ಭಗವಂತನ ಸನ್ನಿಧಾನವಿರುವದು.)

ಈ ನಿಟ್ಟಿನಲ್ಲಿ ಅಲ್ಪಜೀವರುಗಳಿಗಿಂತ ಉತ್ತಮೋತ್ತಮ ಜೀವರಲ್ಲಿ, ಅಧಮ ದೇವತೆಗಳಿಗಿಂತ ಉತ್ತಮೋತ್ತಮ ದೇವತೆಗಳಲ್ಲಿ ಭಗವಂತನನ್ನು ಹೆಚ್ಚು ಹೆಚ್ಚು ಆದರ ಭಕ್ತಿಗಳಿಂದ ಭಜಿಸುವದು ಅತ್ಯಗತ್ಯ.

ಹೀಗೆ ಮೇಲೆ ಹೋದಂತೆ ವಾಯು, ಬ್ರಹ್ಮರು ಸರ್ವೋತ್ತಮ ಅಧಿಷ್ಠಾನರಾಗುವರು. ಈ ಬಗೆಯ ಉತ್ತಮ ಅಧಿಷ್ಠಾನಗಳಲ್ಲಿ ಅಧಿಕವಾದ ಆರಾಧನೆ ಶ್ರೀಹರಿಯ ಪರಮಪ್ರೀತಿಸಾಧನ.

ಇದರರ್ಥ ಕಡಿಮೆ ಜೀವರಲ್ಲಿ ದೇವರನ್ನು ಪೂಜಿಸಬಾರದೆಂದಲ್ಲ. ಈ ಸಮಗ್ರದೃಷ್ಟಿಯನ್ನು ಮನದಲ್ಲಿಟ್ಟುಕೊಂಡು ತಾರತಮ್ಯವನ್ನು ತಿಳಿಯುವದು ಬಹಳ ಆವಶ್ಯಕ.

ಜೀವರ ತಾರತಮ್ಯವು ಈ ತೆರನಾಗಿದೆ.

ಸ್ತಂಬ, ಗುಲ್ಮ, ಲತಾ, ವೃಕ್ಷಾದಿ ಸ್ಥಾವರ, ಭೂಚರ, ಜಲಚರ, ಖೇಚರ,

೩೨) ಮನುಷ್ಯೋತ್ತಮ ೩೧) ಚಕ್ರವರ್ತಿ

| | |
|---|---|
| ೩೦) ಮನುಷ್ಯಗಂಧರ್ವ | ೨೯) ದೇವಗಂಧರ್ವ |
| ೨೮) ಚಿರಪಿತೃ, | |

೨೭) ತೊಂಬತ್ತೊಂಬತ್ತು ಕೋಟಿ ತೊಂಬತ್ತೊಂಬತ್ತು ಲಕ್ಷ ತೊಂಬತ್ತೊಂಬತ್ತು ಸಾವಿರದ ಒಂಬತ್ತು ನೂರು ಋಷಿಗಳು, ಗೋಪಿಕಾ, ಅಪ್ಸರಾ, ಗಂಧರ್ವ, ಅಸುರ, ವಿದ್ಯಾಧರ, ರಾಕ್ಷಸ, ಯಕ್ಷ, ಚಾರಣ, ಕಿಂಪುರುಷ, ಗುಹ್ಯಕ, ಸಾಧ್ಯ, ಸಿದ್ಧ, ಆಜಾನಜ,

| | |
|---|---|
| ೨೬) ಕರ್ಮಾಭಿಮಾನಿ ಪುಷ್ಕರ, | ೨೫) ಶನಿ, |
| ೨೪) ನಾಮಾಭಿಮಾನಿ ಉಷಾ, | ೨೩) ಜಲಾಭಿಮಾನಿ ಬುಧ, |
| ೨೨) ಮಂತ್ರಾಭಿಮಾನಿ ಸ್ವಾಹಾ, | ೨೧) ಕೂರ್ಮಾದಿ ಅನಾಖ್ಯಾತ ದೇವತೆಗಳು, |

೨೦) ಮೇಘಾಭಿಮಾನಿ ಪರ್ಜನ್ಯ, ಗಂಗಾ, ಶಾಮಲಾ, ಸಂಜ್ಞಾ, ರೋಹಿಣೀ, ವಿರಾಟ್, ಉಷಾ,

೧೯) ದಿಗಭಿಮಾನಿ ದೇವತೆಗಳು, ಭೀಮಪತ್ನೀ ಅಬಭಿಮಾನಿ ದೇವತೆಗಳು,

ಚಿತ್ರಗುಪ್ತ, ಬಲಿ ಮುಂತಾದ ಸಪ್ತ ಇಂದ್ರ,

ರಾಹು, ಕೇತು, ಮಂಗಲ, ಶುಕ್ರ,

ಅರ್ಚಿರಾದಿ, ಧೂಮಾದಿ ಮಾರ್ಗಾಭಿಮಾನಿ ದೇವತೆಗಳು,

ಯಜ್ಞ ಸಾಧನಾಭಿಮಾನಿ ದೇವತೆಗಳು,

ಅಷ್ಟಗಂಧರ್ವ, ಇಬ್ಬರು ಅಪ್ಸರೆ, ಏಳು ಪಿತೃ, ಏಕಾದಶ ಮನು, ವಿಶ್ವಕರ್ಮ,

ಚಂಡ, ಸುಧಾಮ, ವಪ್ರ ಮುಂತಾದ ವಿಷ್ಣುಪಾರ್ಷದ,

ಸನಕ, ಸನಂದನ, ಸನತ್ಸುಜಾತರು,

ಚ್ಯವನ, ಉಚಥ್ಯ, ಕರ್ದಮ ಮುಂತಾದ ತೊಂಬತ್ತೆರಡು ಋಷಿಗಳು.

ಪ್ರಿಯವ್ರತ, ಉತ್ತಾನಪಾದ, ಗಯ, ಮಾಂಧಾತೃ, ಧ್ರುವ, ಪೃಥು, ಶಶಬಿಂದು, ಕಾರ್ತವೀರ್ಯ, ಕಕುತ್ಸ್ಥ, ದುಷ್ಯಂತನ ಮಗ ಭರತ, ಪರೀಕ್ಷಿತ್, ಜನಕ, ಹೈಹಯ, ಋಷಭನ ಮಗ ಭರತ ಮುಂತಾದ ನೂರು ಚಕ್ರವರ್ತಿಗಳು,

ವಾಯುಪುತ್ರ ಮರೀಚಿ, ಅಗ್ನಿಪುತ್ರ ಪಾವಕ, ಇಂದ್ರಪುತ್ರ ಜಯಂತ, ಜಯವಿಜಯ ಮುಂತಾದ ಐವತ್ತಾರು ದ್ವಾರಪಾಲರು, ಕರ್ಮಜ ದೇವತೆಗಳು,

೧೮) ವಿಷ್ವಕ್ಸೇನ, ಅಶ್ವಿನಿ, ಗಣಪತಿ, ಕುಬೇರ, ಎಂಬತ್ತೈದು ಸೋಮಪಾನಾರ್ಹ ದೇವತೆಗಳು,

೧೭) ಮಿತ್ರ, ನಿರ್ಋತಿ, ಪ್ರಾವಹಿ, ತಾರಾ,

೧೬) ಮರೀಚಿ, ಪುಲಸ್ತ್ಯ, ಅತ್ರಿ, ಪುಲಹ, ಅಂಗಿರಸ, ಕ್ರತು, ವಸಿಷ್ಠ, ವಿಶ್ವಾಮಿತ್ರ, ವೈವಸ್ವತ ಮನು,

೧೫) ಅಗ್ನಿ, ಭೃಗು, ಪ್ರಸೂತಿ,

೧೪) ನಾರದ,

೧೩) ವರುಣ,

೧೨) ಸೂರ್ಯ, ಚಂದ್ರ, ಯಮ, ಶತರೂಪಾ,

೧೧) ಪ್ರವಹವಾಯು,

೧೦) ಸ್ವಾಯಂಭುವ ಮನು, ದಕ್ಷ, ಬೃಹಸ್ಪತಿ, ಅನಿರುದ್ಧ, ಶಚೀ, ರತಿ,

೯) ಅಹಂಕಾರಿಕ ಪ್ರಾಣ,

೮) ಇಂದ್ರ, ಕಾಮ,

೭) ಸೌಪರ್ಣೀ, ವಾರುಣೀ, ಪಾರ್ವತೀ,

೬) ಜಾಂಬವತೀ, ಭದ್ರಾ, ನೀಲಾ, ಕಾಲಿಂದೀ, ಮಿತ್ರವಿಂದಾ, ಲಕ್ಷಣಾ,

೫) ರುದ್ರ, ಶೇಷ, ಗರುಡ,

೪) ಪರಶುಕ್ಲರಾದ ಭಾರತೀ, ಸರಸ್ವತೀ,

೩) ವಾಯು, ಬ್ರಹ್ಮಾ,

೨) ಲಕ್ಷ್ಮೀ ಎಂದು.

ಈ ಎಲ್ಲ ಜೀವರ ಸ್ವರೂಪದಲ್ಲೂ, ಆ ಜೀವಸ್ವರೂಪದ ಅನಂತಾಂಶಗಳಲ್ಲೂ, ದೇಹೇಂದ್ರಿಯಮನಸ್ಸುಗಳಲ್ಲೂ, ಭಗವಂತನು ಅನಂತರೂಪಗಳಿಂದ ವ್ಯಾಪಿಸಿರುವನು.

ಹಾಗೂ ಆ ಜೀವರ ಆನಂತಶಕ್ತಿ, ಅಪರಿಮಿತ ಗುಣ, ಅದ್ಭುತ ಬಲ, ಪರಮಸೌಂದರ್ಯ, ಅಚಿಂತ್ಯ ಐಶ್ವರ್ಯ, ಅಗಾಧ ಆನಂದ, ಅಮಿತ ತೇಜಸ್ಸು,

ಅಪಾರ ದಯೆ, ಯಥಾಯೋಗ್ಯ ಸ್ವಾತಂತ್ರ್ಯ, ಸ್ವಾಮಿತ್ವ

ಹಾಗೂ ಅಭಿಮನ್ಯಮಾನವಾದ ಪದಾರ್ಥಗಳ ನಿಯಾಮಕತ್ವ, ಪ್ರವರ್ತಕತ್ವ, ನಿವರ್ತಕತ್ವ, ಉತ್ಪಾದಕತ್ವ, ಪಾಲಕತ್ವ, ವಿನಾಶಕತ್ವ, ಆಧಾರತ್ವ, ತದಾಕಾರತ್ವ ಮುಂತಾದ ಗುಣ, ಕ್ರಿಯಾ ಮಾಹಾತ್ಮ್ಯಗಳಲ್ಲೂ

ಆ ಆ ಹೆಸರಿನ ರೂಪಗಳಿಂದ ಭಗವಂತನು ಸನ್ನಿಹಿತನಾಗಿದ್ದು ನಿಯಮನ, ಪ್ರೇರಣಾದಿಗಳನ್ನು ಮಾಡುತ್ತಲಿರುವ.

ಜೀವಸ್ವರೂಪ, ಅವುಗಳ ಅನಂತಾಂಶ, ಅವರ ದೇಹೇಂದ್ರಿಯಮನಸ್ಸು ಹಾಗೂ ಅವರ ಗುಣ ಕ್ರಿಯಾ ಮಾಹಾತ್ಮ್ಯಗಳ ನಿಯಮನಾದಿಗಳನ್ನು ಮಾಡುವ ಈ ರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೧೦) ಮುಕ್ತ

ಇಷ್ಟು ಮಾತ್ರವಲ್ಲ. ಮುಕ್ತರಾದ ಅನಂತ ಜೀವರು ಹಾಗೂ ಅನಂತ ಇಂದ್ರ, ಶೇಷ, ಬ್ರಹ್ಮರು ಮತ್ತು ನಿತ್ಯಮುಕ್ತಳಾದ ರಮಾದೇವಿ ಇವರೆಲ್ಲರಿಗೆ ಜ್ಞಾನ, ಸತ್ಯಸಂಕಲ್ಪ, ಭೋಗ, ಭಕ್ತಿ, ಆನಂದ ಮುಂತಾದ ಗುಣಗಳಿವೆ.

ಒಂದೊಂದೂ ತಾರತಮ್ಯಾನುಸಾರ ಅನಂತವಾಗಿದೆ. ಅಲ್ಲದೆ ಒಂದೊಂದು ಗುಣವೂ ನಾನಾ ಬಗೆಯಾಗಿದೆ.

ಉದಾಹರಣೆಗೆ ಒಂದು ಬಗೆಯ ಆನಂದ ಹೂವು ಕಾಣುವಾಗ ಆಗುವದು. ಇನ್ನೊಂದು ಬಗೆಯದು ಅದರ ಪರಿಮಳವನ್ನು ಸೇವಿಸುವಾಗ ಆಗುವದು. ಮತ್ತೊಂದು ಬಗೆಯದು ಹಣ್ಣು ಮೆಲುವಾಗ. ಇದೆಲ್ಲದಕ್ಕಿಂತಲೂ ತೀರ ಬೇರೆ ತೆರನಾದುದು ಆ ಭಗವಂತನ ದಿವ್ಯರೂಪವನ್ನು ಕಾಣುವಾಗ.

ಹೀಗೆ ಆನಂದವು ಬಗೆ ಬಗೆಯಾಗಿದೆ. ಮಾತ್ರವಲ್ಲ, ಸಾವಿರ, ಲಕ್ಷ, ಕೋಟಿ ಕೋಟಿ ಬಗೆಯಾಗಿದೆ. ಹೀಗೆ ಭೋಗ, ಜ್ಞಾನ ಮುಂತಾದ ಗುಣಗಳಲ್ಲೂ ನಾನಾಬಗೆಗಳನ್ನು ತಿಳಿಯಬೇಕು.

ಈ ಎಲ್ಲ ಅನಂತವಿಧವಾದ ಅನಂತ ಗುಣಗಳಲ್ಲಿ ಭಗವಂತನು ವ್ಯಾಪಿಸಿ ನಿಯಮಿಸುತ್ತಿರುವನು.

ಈ ರೂಪಗಳು ಅನಾದಿ ಅನಂತ ವ್ಯಾಪ್ತ ಹಾಗೂ ಗುಣಪೂರ್ಣ ಆಗಿವೆ.

## ೧೧) (ಸ್ವತಂತ್ರ) ಭಗವದ್ರೂಪ

ಇಲ್ಲಿಯವರೆಗೆ ಅಧಿಷ್ಠಾನಗಳ ಮುಖಾಂತರ ಭಗವಂತನ ಅಂತರ್ಯಾಮಿ ರೂಪಗಳನ್ನು ಚಿಂತನ ಮಾಡಿದ್ದೇವೆ. ಇನ್ನು ಮೇಲೆ ಇದಕ್ಕೆ ಹೊರತಾಗಿ ಇರುವ ಭಗವದ್ರೂಪಗಳನ್ನು ನೆನೆಯೋಣ.

ಒಂದನೆಯದು ಎಲ್ಲೆಡೆಯೂ ತುಂಬಿದ, ಆದರೆ ಎಲ್ಲೂ ಅಂತರ್ಯಾಮಿಯಾಗಿರದ ರೂಪ. ಈ ರೂಪದ ಹೆಸರು ನಾರಾಯಣ, ಶೂನ್ಯ, ಬ್ರಹ್ಮ. ಇದು ನಿರುಪಚರಿತ ಮೂಲರೂಪ

ಎರಡನೆಯದು ಪ್ರಳಯ ಮುಗಿದಾಗ ಸೃಷ್ಟಿಯ ಆದಿಯಲ್ಲಿ ವಿಶಿಷ್ಟ ಅವಸ್ಥೆಯಲ್ಲಿರುವ ನಾರಾಯಣನ ಪುರುಷನಾಮಕರೂಪ.

ಅದರ ತರುವಾಯ

ಪುರುಷನಾಮಕವಾಸುದೇವರೂಪ, ಸಂಕರ್ಷಣ ಪ್ರದ್ಯುಮ್ನ, ಅನಿರುದ್ಧ. (ಚತುರ್ವ್ಯೂಹ)

ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ. (ಪಂಚವ್ಯೂಹ)

ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ,

ಕೇಶವಾದಿ ಹನ್ನೆರಡು ರೂಪಗಳು.

ಕೇಶವಾದಿ ಇಪ್ಪತ್ತನಾಲ್ಕು ರೂಪಗಳು.

ಮತ್ಸ್ಯಾದಿ ಹತ್ತು ರೂಪಗಳು.

ಕ್ರುದ್ಧೋಲ್ಕಾದಿ ಐದು ರೂಪಗಳು.

ಅನ್ನಮಯಾದಿ ಐದು ರೂಪಗಳು.

ಅಜ ಆನಂದಾದಿ ಐವತ್ತು ರೂಪಗಳು.

ನರನಾರಾಯಣಾದಿ ನೂರು ರೂಪಗಳು.

ವಿಶ್ವಾದಿ ಸಹಸ್ರ ರೂಪಗಳು.

ಪರಾದಿ ಬಹುರೂಪಗಳು.

ಅಜಿತಾದಿ ಅನಂತ ರೂಪಗಳು.

ಬೃಹತೀನಾಮಕ ಎಪ್ಪತ್ತೆರಡುಸಾವಿರರೂಪಗಳು.

ಗಾಯತ್ರೀ, ಭೂತ, ವಾಕ್, ಪೃಥಿವೀ, ಶರೀರ, ಹೃದಯಗಳೆಂಬ ಆರು ರೂಪಗಳು.

ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿರುವ (ಹಾಗೂ ಸರ್ವಜೀವಸ್ಥಿತ) ಮೂರು (ನಾಲ್ಕು) ರೂಪಗಳು.

ಲೋಕ, ವೇದ, ಸಮೀರ, ರಮಾಂತರ್ಗತ ಅನಿರುದ್ಧಾದಿ ನಾಲ್ಕು ರೂಪಗಳು.

ಪ್ರಾಣಾಪಾನಾದಿ ಐದು ರೂಪಗಳು.

ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ ಅನುಗ್ರಹಾ ಎಂಬ ಒಂಬತ್ತು ರೂಪಗಳು.

ಮೋಚಿಕಾ, ಸೂಕ್ಷ್ಮಾ, ಸೂಕ್ಷ್ಮಾಮೃತಾ, ಜ್ಞಾನಾಮೃತಾ, ಧ್ಯಾಯಂತೀ, ವ್ಯಾಪಿನೀ, ವ್ಯೋಮರೂಪಿಣೀ, ಅನಂತಾ ಎಂಬ ಎಂಟು ರೂಪಗಳು.

ಅಣಿಮಾದಿಗಳೆಂಬ ಎಂಟು ರೂಪಗಳು.

ದ್ಯು, ಪರ್ಜನ್ಯ, ಪೃಥಿವೀ, ಪುರುಷ, ಸ್ತ್ರೀ ಎಂಬಲ್ಲಿ ನಡೆಯುವ ಐದು ಯಜ್ಞಗಳಲ್ಲಿರುವ ಮೂವತ್ತು ರೂಪಗಳು.

ಸರ್ವಭಕ್ಷಕ ಅದಿತಿ ರೂಪ.

ಸಪ್ತಾನ್ನಜನಕ ಅಕ್ಷಿತಿ ರೂಪ.

ನಾರಾಯಣ, ಹರಿ, ಕೃಷ್ಣ, ತಾಪಸಮನು, ಯಜ್ಞ, ಧನ್ವಂತರಿ, ಹಂಸ, ದತ್ತಾತ್ರೇಯ, ಕಪಿಲ, ಮಹಿದಾಸ, ನಾರಾಯಣೀ, ಮೋಹಿನೀ, ಹಯಗ್ರೀವ, ವೇದವ್ಯಾಸ, ಉಪೇಂದ್ರ, ಅಜಿತ, ಶ್ರೀಕರ, ತ್ರಿವಿಕ್ರಮ, ಶಿಂಶುಮಾರ, ಸನತ್ಕುಮಾರ, ವೈಶ್ವಾನರ, ವಾಮನಿ, ಭಾಮನಿ, ಅರ್ಧನಾರೀನಾರಾಯಣ,

ಮೂರು ಶಿರಸ್ಸುಗಳಲ್ಲಿ ಮೂರು ಧಾಮಗಳನ್ನು ಹೊತ್ತ ತ್ರಿಮೂರ್ಧಾ,

ಪದ್ಮನಾಭ, ಬ್ರಹ್ಮಾಂಡದ ಒಳಗೆ ವ್ಯಾಪಿಸಿದ ವಿರಾಟ್,

ಬ್ರಹ್ಮಾಂಡದಲ್ಲಿ ವ್ಯಾಪಿಸಿದ ವಿಷ್ಣು ಇತ್ಯಾದಿ ರೂಪಗಳು.

ಅಗ್ನಿದೇವತೆಯಲ್ಲಿ ಅಗ್ನಿನಾಮಕನಾದ ಭಗವಂತನಿರುವ. ಇದು ಒಂದು ಅಗ್ನಿನಾಮಕರೂಪ. ಇದಲ್ಲದೆ, ಭಗವಂತನಿಗೆ ಅಗ್ನಿನಾಮಕವಾದ ಅನಂತರೂಪಗಳಿವೆ. ಅವೆಲ್ಲ ಅಗ್ನಿದೇವತೆಯಲ್ಲಿ ಸನ್ನಿಹಿತವಾದವುಗಳಲ್ಲ.

ಹೀಗೆ ಅಗ್ನ್ಯಂತರ್ಗತ ಅಗ್ನಿನಾಮಕ ಭಗವದ್ರೂಪ ಒಂದು. ಮತ್ತು ಅಗ್ನ್ಯನಂತರ್ಗತವಾದ ಅಗ್ನಿನಾಮಕ ಭಗವದ್ರೂಪಗಳು ಅನಂತ.

ಇದೇ ತೆರನಾಗಿ ರಮಾ, ಬ್ರಹ್ಮ, ರುದ್ರ ಮುಂತಾದವುಗಳ ವಿಷಯದಲ್ಲೂ ತಿಳಿಯಬೇಕು.

ದೇವರಿಗೆ ರಾಮ, ಕೃಷ್ಣ, ವೇದವ್ಯಾಸ ಎಂಬ ರೂಪಗಳಂತೆ ಜ್ಞಾನ, ಆನಂದ, ಬಲ ಎಂಬ ಹೆಸರಿನ ರೂಪಗಳೂ ಇವೆ.

ಅದೇರೀತಿ ಸೃಜನ, ಪಾಲನ, ಹನನ ಎಂಬ ಹೆಸರಿನ ರೂಪಗಳೂ ಇವೆ.

ರಾಮ ಕೃಷ್ಣಾದಿಗಳಿಗೆ ದ್ರವ್ಯಾತ್ಮಕವೆಂತಲೂ, ಜ್ಞಾನ ಆನಂದರೂಪಗಳಿಗೆ ಗುಣಾತ್ಮಕರೂಪಗಳೆಂತಲೂ, ಸೃಜನ ಪಾಲನಾದಿಗಳಿಗೆ ಕ್ರಿಯಾತ್ಮಕವೆಂತಲೂ ಹೆಸರಿಸಬಹುದು.

ಹೀಗೆ ಆನಂದ, ಜ್ಞಾನ, ಬಲ, ಧೃತಿ, ಶೌರ್ಯ, ಧೈರ್ಯ, ಸಾಹಸ, ಪರಾಕ್ರಮ, ವೀರ್ಯ, ತೇಜಸ್ಸು, ದಯಾ, ಕ್ಷಮಾ, ಸಹಸ್, ಕಾಂತಿ, ಸೌಂದರ್ಯ, ಗಾಂಭೀರ್ಯ, ಔದಾರ್ಯ, ವೈರಾಗ್ಯ, ಉತ್ಸಾಹ, ಲೀಲಾ, ಪ್ರಾಗಲ್ಭ್ಯ, ಅಣಿಮಾ, ಮಹಿಮಾ, ವ್ಯಾಪ್ತಿ, ಸ್ವಾತಂತ್ರ್ಯ ಎಂಬ ಅನಂತ ಗುಣಾತ್ಮಕರೂಪಗಳು ಇವೆ.

ಹಾಗೆಯೇ ಸೃಜನ, ಪಾಲನ, ಹನನ, ನಿಯಮನ, ಬಂಧನ, ಉತ್ಸರ್ಜನ, ನಿಗ್ರಹಣ, ಮೋಚನ ಎಂಬ ಅನಂತ ಕ್ರಿಯಾತ್ಮಕರೂಪಗಳೂ ಇವೆ.

ಇದಲ್ಲದೆ, ರಾಮನಿಗೆ ಕೃಷ್ಣ, ವೇದವ್ಯಾಸ, ರಾಮ, ಕಪಿಲ ಮುಂತಾದ ಅನಂತರೂಪಗಳಿವೆ. ಆ ರೂಪಗಳಿಗೆ ರಾಮಕೃಷ್ಣ ರಾಮವೇದವ್ಯಾಸ, ರಾಮರಾಮ, ರಾಮಕಪಿಲ ಎಂದು ಹೆಸರು.

ಇವುಗಳು ರಾಮನಿಂದ ಹೊರಹೊಮ್ಮಿದ ರೂಪಗಳಾದುದರಿಂದ ರಾಮೋದ್ಭೂತ-ಕಪಿಲ, ರಾಮೋದ್ಭೂತ-ವೇದವ್ಯಾಸ, ರಾಮೋದ್ಭೂತ-ಕೃಷ್ಣ ರಾಮೋದ್ಭೂತ-ರಾಮ ಎಂಬುದಾಗಿ ಕರೆಯಬಹುದು.

ಈ ರಾಮಕಪಿಲನಿಗೆ ಪುನಃ ಕಪಿಲ ವೇದವ್ಯಾಸ ಕೇಶವ ನಾರಾಯಣಾದಿ ಅನಂತ ರೂಪಗಳಿವೆ. ಹೀಗೆ ಅನಂತ ರೂಪಗಳಾಗುವವು.

ಇದರಂತೆ ರಾಮನಿಗೆ ಜ್ಞಾನ, ಆನಂದ, ಸೃಜನ ಪಾಲನವೆಂಬ ರೂಪಗಳು. ಆ ರಾಮಜ್ಞಾನನಿಗೆ ಆನಂದಾದಿ ಕೇಶವಾದಿ ರೂಪಗಳು. ಅವುಗಳೂ ಅನಂತವೇ.

ಇದೇ ತೆರನಾಗಿ ಜ್ಞಾನನಿಗೆ ಜ್ಞಾನ, ಆನಂದ, ಸೃಜನ, ಪಾಲನ ಗೋವಿಂದ, ಕೇಶವ ಮುಂತಾದ ರೂಪಗಳು. ಅಂದರೆ ಜ್ಞಾನಜ್ಞಾನ, ಜ್ಞಾನಗೋವಿಂದ, ಜ್ಞಾನಪಾಲನ. ಇವೂ ಅನಂತವೇ.

## ೧೨. ಸರ್ವಮೂಲದಲ್ಲಿಯ ಇತರ ರೂಪಗಳು

ಇವುಗಳಲ್ಲದೆ ಇನ್ನನೇಕ ಬಗೆಯ ರೂಪ ಮಹಿಮೆಗಳನ್ನು ಸರ್ವಮೂಲಾದಿ ಗ್ರಂಥಗಳಲ್ಲಿ ನಾವು ಕಾಣುತ್ತೇವೆ. ಅದರಲ್ಲಿಯ ಕೆಲವನ್ನು ಮಾತ್ರ ಇಲ್ಲಿ ಸಂಗ್ರಹಿಸೋಣ.

ಸಾತ್ವತತಂತ್ರಗಳಲ್ಲಿ - ನಾರಾಯಣ, ಲಕ್ಷ್ಮೀ, ಬ್ರಹ್ಮ, ವಾಯು, ಶೇಷ, ಗರುಡರಿಗೆ ನವ ನವ ಮೂರ್ತಿಗಳಿವೆ ಎಂದು ಹೇಳಿದ್ದಾರೆ.

ರಮಾಬ್ರಹ್ಮಾದಿಗಳ ನವಮೂರ್ತಿಗಳಲ್ಲಿ ಸನ್ನಿಹಿತವಾದ ರೂಪಗಳು.

ಹಾಗೂ ಲಕ್ಷ್ಮೀಬ್ರಹ್ಮಾದಿಗಳ ನವಮೂರ್ತಿಗಳಿಗಿಂತಲೂ ಆದಿಯಲ್ಲಿ ಅತಿಪ್ರಧಾನವಾಗಿ ಪೂಜಿಸಬೇಕೆಂದು ಸಾತ್ವತತಂತ್ರಗಳಲ್ಲಿ ವಿಧಿಸಿದ ಭಗವಂತನ ನಾರಾಯಣ, ಪರಂಬ್ರಹ್ಮ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನರಸಿಂಹ, ವರಾಹ, ಪರಂಜ್ಯೋತಿ ಎಂಬ ಒಂಭತ್ತು ರೂಪಗಳು.

ಮನುಷ್ಯನ ದೇಹದ ಮಜ್ಜಾಗಳಲ್ಲಿ ಇರುವ ಒಂದು ಸಾವಿರದ ಎಂಬತ್ತು ರೂಪಗಳು. ಅಸ್ಥಿಗಳಲ್ಲಿರುವ ಮೂರುನೂರ ಅರವತ್ತು ರೂಪಗಳು.

ಪೂರ್ವವರ್ಣ, ಉತ್ತರವರ್ಣ, ಸಂಧಿ, ಸಂಧಾನನಿಯಾಮಕ ತದ್ವಾಚ್ಯ, ಲೋಕ-ಜ್ಯೋತಿ-ವಿದ್ಯಾ-ಪ್ರಜಾ-ದೇಹ ಎಂಬ ಐದು ಅಧಿಷ್ಠಾನಗಳಲ್ಲಿರುವ ನಾರಾಯಣಾದಿ ವಾಸುದೇವಾದಿ ಇಪ್ಪತ್ತು ರೂಪಗಳು.

ಅಥವಾ, ಪೂರ್ವವರ್ಣ ಉತ್ತರವರ್ಣ, ಸಂಧಿ ನಿಯಾಮಕರಾದ ತದ್ವಾಚ್ಯರಾದ ವರಾಹ, ವಾಮನ, ನರಸಿಂಹ ಅಥವಾ ವರಾಹ, ವಾಮನ, ವೇದವ್ಯಾಸರೂಪಗಳು.

ಸಂಹಿತೆಗೆ ನಿರ್ಭುಜ ಎಂದು ಹೆಸರು. ಪದಪಾಠಕ್ಕೆ ಪ್ರತೃಣ್ಣ ಎಂದು ಹೆಸರು. ಇವುಗಳಿಗೂ ಹಾಗೂ ಕ್ರಮಪಾಠಕ್ಕೂ ನಿಯಾಮಕನಾದ ಪೃಥಿವೀ ಸ್ವರ್ಗ ಅಂತರಿಕ್ಷಗಳಲ್ಲಿರುವ ವರಾಹ ವಾಮನ ನರಸಿಂಹರೂಪಗಳು.

ಪ್ರಸ್ತಾವ, ಉದ್ಗೀಥ, ಪ್ರತಿಹಾರ, ಉಪದ್ರವ, ನಿಧನ ಎಂಬ ಐದು ಸಾಮಗಳಿಂದ ಆದಿ ಹಿಂಕಾರ ಸಹಿತ ಏಳು ಸಾಮಗಳಿಂದ ಪ್ರತಿಪಾದ್ಯವಾದ ನಾರಾಯಣಾದಿ ಐದು ವರಾಹನರಸಿಂಹ ಸಹಿತ ಏಳು ರೂಪಗಳು.

ಸಾಮಗಾನದಲ್ಲಿ ಬರುವ 'ಹಾವೂಹಾ' ಮುಂತಾದ ಕೋಟಿ ಕೋಟಿ ಸ್ತೋಭಾಕ್ಷರಗಳಿಂದ ಪ್ರತಿಪಾದ್ಯವಾದ ಕೋಟಿ ಕೋಟಿ ರೂಪಗಳು.

ಅನೇಕವಿಧ ಸ್ತೋಮದಿಂದ (ಮಂತ್ರಗಳ ಗುಂಪು) ಪ್ರತಿಪಾದ್ಯವಾದ ಅನಿರುದ್ಧನ ಅನಿರುದ್ಧಾದಿ ರೂಪಗಳು.

ಏಳು ಛಂದಸ್ಸುಗಳಿಗೆ ಆಶ್ರಯವಾದ ಲೋಮ, ತ್ವಕ್, ಮಾಂಸ, ಸ್ನಾಯು, ಅಸ್ಥಿ, ಮಜ್ಜಾ, ಪ್ರಾಣ ಎಂಬ ರೂಪಗಳು.

ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮಾ, ಅಹಂಕಾರ, ಆತ್ಮ ಎಂಬ ರೂಪಗಳು.

ಪ್ರಾತಃಸವನ, ಮಾಧ್ಯಂದಿನಸವನ, ಸಾಯಂಸವನಗಳಲ್ಲಿ ಬರಬಹುದಾದ ಯಜಮಾನನ ರೋಗಗಳನ್ನು ಪರಿಹರಿಸುವ ವಸುರುದ್ರ ಆದಿತ್ಯಾಂತರ್ಗತ ತನ್ನಾಮಕ ಮೂರು ರೂಪಗಳು.

ಆದಿತ್ಯಸ್ಥ ಮಧುನಾಮಕ ರೂಪ.

ಈ ರೀತಿಯಲ್ಲಿ ಶ್ರೀಮದಾನಂದತೀರ್ಥರು ಭಕ್ತಾನುಗ್ರಹದಿಂದ ನಿರೂಪಿಸಿದ ಭಗವಂತನ ಅನಂತರೂಪಗುಣಕ್ರಿಯೆಗಳು.

ಇಷ್ಟೆಲ್ಲ ರೂಪಗಳಿಂದ ಅಭಿನ್ನನಾದ ಹಾಗೂ
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ,
ಸಕಲದೇವತೆಗಳ, ಋಷಿಗಳ, ಪಿತೃಗಳ,
ಚಕ್ರವರ್ತಿಗಳ, ಗಂಧರ್ವಾಪ್ಸರೆಯರ, ಸಿದ್ಧಾದಿ ದೇವಜಾತಿಗಳ
ಸಮಸ್ತಯತಿವರೇಣ್ಯರ, ಜ್ಞಾನಿವರೇಣ್ಯರ, ದಾಸವರೇಣ್ಯರ,
ನಮ್ಮ ಪರಮಗುರುಗಳ ಹಾಗೂ
ನಮ್ಮ ಸ್ವರೂಪೋದ್ಧಾರಕರಾದ ಅಸ್ಮದಾರಾಧ್ಯ ಗುರುಗಳ ಬಿಂಬರೂಪ.

ಅವನೇ ನಮಗೆ ನಮ್ಮ ಗುರುಗಳ ಸಮಾಗಮವನ್ನು ಮಾಡಿಸಿ, ಅವರಿಂದ ಉಪದೇಶಗೈಸಿ, ಅವರ ಆದೇಶಗಳನ್ನು ಕಿಂಚಿತ್ತಾದರೂ ಬದುಕಿನಲ್ಲಿ ತರುವಂತೆ

ಮಾಡಿ ಭಕ್ತಿಬೀಜವನ್ನಂಕುರಗೊಳಿಸಿ, ಅದರಿಂದ ಜ್ಞಾನವನ್ನು ಬೆಳೆಸಿ, ತಾನೆ ತುಷ್ಟನಾಗಿ ಕಿಂಚಿದಧಿಕ ಶ್ರವಣ, ಮನನ, ನಿಧಿಧ್ಯಾಸನಗಳಿಗಾಗಿ ನನ್ನನ್ನು ಅನುಗ್ರಹಿಸಿದ್ದಾನೆ.

ನಿರವಧಿಕಾನಂತಶಕ್ತಿಶಾಲಿ, ಅಂತೆಯೇ ನಿರವಧಿಕಾನಂತ ಸ್ವಾತಂತ್ರ್ಯಪೂರ್ಣ, ಅನಂತದೇಶಕಾಲವ್ಯಾಪ್ತ, ಆದುದರಿಂದಲೇ ದೇಶ ಕಾಲ ವಸ್ತು ಸ್ವಭಾವಗಳಿಂದ ಉಂಟಾಗಬಹುದಾದ ವ್ಯವಧಾನಶೂನ್ಯವಾದ

ರಮಾದೇವಿಯಲ್ಲಿ, ಬ್ರಹ್ಮಾದಿದೇವತೆಗಳಲ್ಲಿ, ಸಮಸ್ತ ಮುಕ್ತಾಮುಕ್ತ-ಜೀವರಲ್ಲಿ, ಅವರವರ ಗುಣಕ್ರಿಯಾದಿಗಳಲ್ಲಿ, ಜೀವರ ಕರ್ಮಗಳಲ್ಲಿ, ದೇಶದಲ್ಲಿ, ಕಾಲದಲ್ಲಿ, ಶಬ್ದಗಳಲ್ಲಿ, ಪ್ರಕೃತ್ಯಾದಿ ತತ್ವಗಳಲ್ಲಿ, ಬ್ರಹ್ಮಾಂಡ ತದಂತರ್ಗತ ಪದಾರ್ಥಗಳಲ್ಲಿ

ಹಾಗೂ ಸಮಸ್ತ ಯತಿವರೇಣ್ಯ-ಜ್ಞಾನಿವರೇಣ್ಯ-ದಾಸವರೇಣ್ಯರಲ್ಲಿ ನಮ್ಮ ಪರಮಗುರುಗಳಲ್ಲಿ ನಮ್ಮ ಸ್ವರೂಪೋದ್ಧಾರಕ ಗುರುಗಳಲ್ಲಿ ಇರುವ ಅಂತರ್ಯಾಮಿ ರೂಪಗಳು, ವಿಭೂತಿರೂಪಗಳು, ಅವತಾರರೂಪಗಳು, ಇತರರೂಪಗಳು ಮತ್ತು ಮೂಲರೂಪಗಳು ಎಂಬ

ಭಗವಂತನ ನಿರವಧಿಕಾನಂತಾನಂತ ರೂಪಗಳು ಸ್ವಭಾವತಃ ತಾವು ಇರುವ ದೇಶಕಾಲಗಳಲ್ಲಿ ಸನ್ನಿಹಿತವಾಗಿದ್ದೇ ತಮ್ಮ ಅಚಿಂತ್ಯಾದ್ಭುತಶಕ್ತಿಯಿಂದ ಈ ಪ್ರತಿಮೆಯಲ್ಲಿ ಆವಾಹಿಸಿದ ನನ್ನ ಬಿಂಬರೂಪದೊಡನೆ ಅಭಿನ್ನವಾಗಿದ್ದು ಪ್ರತಿಷ್ಠಿತವಾಗಲಿ ಎಂದು ಪ್ರಾರ್ಥಿಸಬೇಕು.

**ಪಂಚಾತ್ಮಕಃ ಸ ಭಗವಾನ್ ದ್ವಿಷಡಾತ್ಮಕೋಽಭೂತ್**
**ಪಂಚದ್ವಯೀ ಶತಸಹಸ್ರಪರೋಽಮಿತಶ್ಚ ।**
**ಏಕಃ ಸಮೋಽಪ್ಯಖಿಲದೋಷಸಮುಜ್ಝಿತೋಽಪಿ**
**ಸರ್ವತ್ರ ಪೂರ್ಣಗುಣಕೋಽಪಿ ಬಹೂಪಮೋಽಭೂತ್ ॥★॥**

**ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ**
**ಸಹಸ್ರಪಾದಾಕ್ಷಿಶಿರೋರುಬಾಹವೇ ।**
**ಸಹಸ್ರನಾಮ್ನೇ ಪುರುಷಾಯ ಶಾಶ್ವತೇ**
**ಸಹಸ್ರಕೋಟಿಯುಗಧಾರಿಣೇ ನಮಃ ॥★॥**

ಭಕ್ತನ ಭಕ್ತಿಪೂರ್ವಕ ಆಗ್ರಹದ ಪ್ರಾರ್ಥನೆಗೆ ಮನಕರಗಿದ ದಯಾಘನ ಸ್ವಾಮಿ ನಾವು ಪೂಜಿಸುವ ಪ್ರತಿಮೆಯಲ್ಲಿ ಸನ್ನಿಹಿತನಾಗುವ; ಸಂದೇಹವಿಲ್ಲ.

ಇಂಥ ಭಗವಂತನ ಬಿಂಬರೂಪವನ್ನು ''ಆತ್ಮಾ ದೇವಾನಾಂ...'' ಎಂಬ ಮಂತ್ರದಿಂದ ಪ್ರತಿಮೆಯಲ್ಲಿ ಆವಾಹಿಸುವದು.

**ಓಂ ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ। ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥ (ಋ.೧೦.೧೬೮.೪)**

**ಅಭಿಪ್ರಾಯ :-** ದೇವಾದಿ ಜೀವರ ಒಡೆಯನಾದ ದೇವರು ದೇವತೆಗಳ ಹಾಗೂ ಜಗತ್ತಿನ ಒಳಗಿದ್ದು ಸ್ವತಂತ್ರವಾಗಿ ಸಂಚರಿಸುವವ. ಅವನ ಸ್ತುತಿ ಕೇಳುತ್ತದೆ. ಆದರೆ ರೂಪ ಕಾಣುವದಿಲ್ಲ. ಅವನನ್ನು ಅರ್ಚಿಸೋಣ.

**ಅನ್ವಯ :-** [೧೩]ಯಃ ದೇವಾನಾಂ ಆತ್ಮಾ, ಭುವನಸ್ಯ ಆತ್ಮಾ ದೇವಾನಾಂ ಗರ್ಭಃ, ಭುವನಸ್ಯ ಗರ್ಭಃ ಏಷಃ ದೇವಃ ಯಥಾವಶಂ ಚರತಿ (ಯಸ್ಯ), ಅಸ್ಯ ಘೋಷಾಃ ಇತ್ ಶ್ರುಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ.

''ಯಃ ಯಾರು ದೇವಾನಾಂ ದೇವತೆಗಳಿಗೆ ಆತ್ಮಾ ಸ್ವಾಮಿಯೋ, ದೇವತೆಗಳಲ್ಲಿ ವ್ಯಾಪ್ತನೋ ಭುವನಸ್ಯ ಆತ್ಮಾ ಇಡಿಯ ಜಗತ್ತಿನ ಸ್ವಾಮಿಯೋ ಹಾಗೂ ಇಡಿಯ ಜಗತ್ತಿನಲ್ಲಿ ವ್ಯಾಪ್ತನೋ, ದೇವಾನಾಂ ಗರ್ಭಃ ದೇವತೆಗಳ ಅಂತರ್ಯಾಮೀ ಭುವನಸ್ಯ ಗರ್ಭಃ ಇಡಿಯ ಜಗತ್ತಿನ ಅಂತರ್ಯಾಮೀ ಏಷಃ ಆ- ಸತ್ಯವಾದ ಇಷ ಇಚ್ಛೆಯುಳ್ಳ ಸತ್ಯಕಾಮನೋ ದೇವಃ ಕ್ರೀಡಾದಿ ಗುಣವಿಶಿಷ್ಟನೋ ಯಥಾವಶಂ ಯಥೇಷ್ಟವಾಗಿ ಮನಬಂದಂತೆ ಚರತಿ ಸಂಚರಿಸುತ್ತಾನೆ, ಜೀವರನ್ನು ಸಂಚಾರ ಮಾಡಿಸುತ್ತಾನೆ, (ಚರ ಗತಿಭಕ್ಷಣಯೋಃ) ಸ್ವಯಂ ಎಲ್ಲವನ್ನೂ ಭೋಗಿಸುತ್ತಾನೆ, ಜೀವರಿಂದ ಅವರ ಕರ್ಮಫಲಗಳನ್ನು ಭೋಗ ಮಾಡಿಸುತ್ತಾನೆ (ಯಸ್ಯ) ಅಸ್ಯ ಯಾವ ಈ ದೇವರ ಘೋಷಾಃ ಇತ್ ಶ್ರುಣ್ವಿರೇ ಶಬ್ದಗಳು ಮಾತ್ರ

೧೩. ಬ್ರ.ವ್ಯಾಖ್ಯಾ- ಯಃ ದೇವಾನಾಂ ಆತ್ಮಾ ಭುವನಸ್ಯ ಆತ್ಮಾ ದೇವಾನಾಂ ಗರ್ಭಃ ಭುವನಸ್ಯ ಗರ್ಭಃ ಏಷಃ- (ಆ+ಇಷಃ) ಸತ್ಯಕಾಮಃ ದೇವಃ ಯಥಾವಶಂ ಚರತಿ- ಸಂಚರತಿ ಸಂಚಾರಯತಿ ಭುಂಕ್ತೇ ಭೋಜಯತಿ । (ಯಸ್ಯ) ಅಸ್ಯ ಘೋಷಾಃ ಇತ್ ಶ್ರುಣ್ವಿರೇ ನ ರೂಪಂ ತಸ್ಮೈ ವಾತಾಯ (ವಾ- ಜ್ಞಾನೇನ ತಃ- ತತಃ, ಪೂರ್ಣಃ. ವಾ- ಜ್ಞಾನಮಯಃ ತಃ- ವ್ಯಾಪ್ತಃ. ವಾ- ಜ್ಞಾನಂ ತ- ತನೋತಿ ದದಾತಿ ವಿಸ್ತಾರಯತಿ.) ಹವಿಷಾ ವಿಧೇಮ ॥

ಕಿವಿ ಮುಚ್ಚಿದಾಗ ಕೇಳುತ್ತವೆ ನ ರೂಪಂ ರೂಪವು ಕಾಣುವದಿಲ್ಲ ತಸ್ಮೈ ವಾತಾಯ ಅಂಥ ವಾಯ್ವಂತರ್ಯಾಮೀ, ಜ್ಞಾನಪೂರ್ಣನೂ, ಜ್ಞಾನಮಯನೂ, ವ್ಯಾಪ್ತನೂ ಆದ, ಜ್ಞಾನವನ್ನು ದಯಪಾಲಿಸುವನೂ ಆದ ನಾರಾಯಣನಿಗೆ ಹವಿಷಾ ವಿಧೇಮ ಹವಿಸ್ಸಿನಿಂದ ಸೇವಿಸೋಣ.''

ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ರಮಾಪತೇ ।
ತೇಜಸ್ಸಾರಮಯೀಂ ದಿವ್ಯಾಂ ಪ್ರತಿಮಾಂ ಪ್ರತಿಮಾಗತಾಮ್ ॥★॥

ಧ್ಯಾತ್ವಾ ಪ್ರಾಣಾಧಿಪಂ ತತ್ರ ಪ್ರತಿಮಾರೂಪಿಣಂ ಪ್ರಭುಮ್ ।
ತನ್ಮಧ್ಯೇ ರಮಯಾ ಸಾರ್ಧಂ ಆಸೀನಂ ಕ್ಷೀರನೀರವತ್ ॥★॥

ಪ್ರತಿಮಾರೂಪಿಣಂ ಸಮ್ಯಗ್ ಧ್ಯಾತ್ವೈವಾವಾಹಯೇತ್ಸುಧೀಃ ।'

'ಹೇ ರಮಾಪತೇ! ನಿನ್ನನ್ನು ಪೀಠದಲ್ಲಿರುವ ಪ್ರತಿಮೆಯಲ್ಲಿ ಆವಾಹಿಸುವೆ. ಪೀಠದಲ್ಲಿರುವ ಪ್ರತಿಮೆಯಲ್ಲಿ ತೇಜಃಸಾರಮಯವಾದ ದಿವ್ಯಪ್ರತಿಮೆ ಇದೆ. ಅಲ್ಲಿ ಮುಖ್ಯಪ್ರಾಣದೇವರು ಪ್ರತಿಮಾರೂಪದಲ್ಲಿ ಇರುವರು. ಅವರಲ್ಲಿ ರಮಾದೇವಿಯ ಜೊತೆಗೆ ಕ್ಷೀರನೀರದಂತೆ ಮಿಶ್ರನಾಗಿ ಪ್ರತಿಮಾಸಮಾನರೂಪನಾದ ದೇವರನ್ನು ನೆನೆದು ಜ್ಞಾನಿಯಾದವನು ಆವಾಹಿಸಬೇಕು.'

ಪ್ರತಿಮಾಂ ಪ್ರತಿಮಾಂತಃಸ್ಥಾಂ ವಾಯೋಸ್ತೇಜೋಮಯೀಂ ಸುಧೀಃ
ವಿಷ್ಣೋರ್ವಪುಶ್ಚ ತನ್ಮಧ್ಯೇ ಧ್ಯಾಯೇದಾನಂದಚಿದ್ಘನಮ್ ॥★॥

'ಕಣ್ಣಿಗೆ ಕಾಣುವ ಈ ಪ್ರತಿಮೆಯಲ್ಲಿ ವಾಯುದೇವರ ತೇಜೋಮಯವಾದ ಪ್ರತಿಮೆ ಉಂಟು. ಅದರಲ್ಲಿ ಜ್ಞಾನಾನಂದಮಯವಾದ ಭಗವಂತನ ಸ್ವರೂಪವನ್ನು ಧ್ಯಾನಿಸಬೇಕು.'

ವಿನಾ ಪ್ರತೀಕಂ ಪ್ರಾಣಸ್ಯ ಸ್ಮರನ್ ನಿರಯಭಾಗ್ಭವೇತ್ ।
ವಾಯುಂ ವಿನಾ ನ ಗೃಹ್ಣಾಮಿ ಯತ್ಕಿಂಚಿದ್ ವಸ್ತು ಮೇ ಪ್ರಿಯಮ್ ।
ತಸ್ಮಾದ್ವಾಯುಮುಖೈರ್ದೇವೈಃ ವಾಯುಹಸ್ತೇನ ದಾಪಯೇತ್ ॥★॥

''ಪ್ರಾಣದೇವರ ಪ್ರತೀಕವಿಲ್ಲದೇ ದೇವರನ್ನು ಸ್ಮರಿಸುವವ ನರಕವನ್ನು ಹೊಂದುವನು. ವಾಯುದೇವರಿಲ್ಲದೇ ನನಗೆ ತುಂಬ ಪ್ರಿಯವಾಗಿದ್ದರೂ ನಾನು ಯಾವುದನ್ನೂ ಸ್ವೀಕರಿಸುವದಿಲ್ಲ. ಆದುದರಿಂದ ವಾಯುದೇವರ ದ್ವಾರದಿಂದಲೇ ಎಲ್ಲ ಉಪಚಾರಗಳನ್ನು ದೇವರಿಗೆ ಸಮರ್ಪಿಸುವದು.''

ಪ್ರತಿಮಾಧಿಕಸಾದೃಶ್ಯಾತ್ ಮುಖ್ಯಾ ವಿಷ್ಣೋಃ ಸದಾ ರಮಾ ।

''ರಮಾದೇವಿಯು ಭಗವಂತನಿಗೆ ಅನಾದ್ಯನಂತಕಾಲದಲ್ಲಿ ಉಳಿದೆಲ್ಲ ದೇವತೆಗಳಿಗಿಂತ ಅತ್ಯಂತ ಅಧಿಕ ಸದೃಶಳಾಗಿದ್ದಾಳೆ. ಆದುದರಿಂದ ಭಗವಂತನಿಗೆ ಮುಖ್ಯಪ್ರತಿಮೆ ಎಂದು ಕರೆಯಲ್ಪಡುತ್ತಾಳೆ.''

ತತ್ರ ತತ್ರ ಸ್ಥಿತಂ ವಿಷ್ಣುಂ ತತ್ತನ್ಮೂರ್ತಿಗತೇನ ವೈ ।
ಏಕೀಭೂತಂ ಚಿಂತಯಿತ್ವಾ ತದ್ರೂಪಂ ವ್ಯಾಪ್ತರೂಪತಃ ॥★॥

ವ್ಯಾಪ್ತಂ ತದ್ಬಿಂಬರೂಪೇಣ ಬಿಂಬಮರ್ಚಾಗತೇನ ವೈ ॥★॥

ಏಕೀಭೂತಂ ಚಿಂತಯಿತ್ವಾ ಭಕ್ತಿಮಾನ್ ಪೂಜಯಾಮ್ಯಹಮ್ ।
ಸ್ವಾತಂತ್ರ್ಯಾತ್ ದೇಶಕಾಲಾದಿವ್ಯವಧಾನೋಜ್ಝಿತತ್ವತಃ ॥★॥

ಸ್ಥಿತ್ವೈವ ತತ್ತತ್ಸ್ಥಾನೇಷು ಸ್ವಪೂಜ್ಯಪ್ರತಿಮಾಗತಮ್ ।
ಭಾವಯೇತ್ ಸಚ್ಚಿದಾನಂದಸಾಂದ್ರಸುಂದರವಿಗ್ರಹಮ್ ॥★॥

ನಖಾದಿಕೇಶಪರ್ಯಂತಂ ರೂಪಾನಂತ್ಯೇನ ಸಂಯುತಮ್ ।
ಮದ್ಗುರೂಕ್ತಾನುಸಾರೇಣ ಚಿಂತಯೇಽಹಂ ಯಥಾಮತಿ ॥★॥

''ಭಿನ್ನ ಭಿನ್ನ ಅಧಿಷ್ಠಾನಗಳಲ್ಲಿ ಇರುವ ಭಗವಂತನ ರೂಪಗಳು ಪ್ರತಿಮಾಗತ ರೂಪದ ಜೊತೆಗೆ ಅಭಿನ್ನ. ಪ್ರತಿಮಾಗತ ರೂಪ ವ್ಯಾಪ್ತರೂಪದಿಂದ ಅಭಿನ್ನ. ವ್ಯಾಪ್ತರೂಪವು ಆಯಾ ಜೀವರ ಬಿಂಬರೂಪದಿಂದ ಅಭಿನ್ನ. ಆ ಬಿಂಬರೂಪವು ಪ್ರತಿಮಾಂತಸ್ಥರೂಪದಿಂದ ಅಭಿನ್ನ. ಹೀಗೆ ಆಯಾ ೧. ಅಧಿಷ್ಠಾನಗತ, ೨. ಪ್ರತಿಮಾಗತ, ೩. ವ್ಯಾಪ್ತರೂಪ, ೪. ಬಿಂಬರೂಪ ಈ ಎಲ್ಲ ರೂಪಗಳಿಗೆ ಪರಸ್ಪರವಾಗಿ ಅಭೇದ ಚಿಂತಿಸಿ ಭಕ್ತಿಯಿಂದ ನಾನು ಪೂಜಿಸುವೆ.

ಭಗವಂತನು ನಿರವಧಿಕ ಸ್ವತಂತ್ರ. ಆದುದರಿಂದ ಅವನಿಗೆ ದೇಶದಿಂದ, ಕಾಲದಿಂದ, ವಸ್ತುಗಳಿಂದ, ಸ್ವಭಾವದಿಂದ ವ್ಯವಧಾನ ಸರ್ವಥಾ ಇಲ್ಲ. ಆದಕಾರಣ ಬ್ರಹ್ಮಾಂಡದ, ಎಲ್ಲ ಆವರಣಗಳ ಹೊರಗೆ ಆಚೆ ಅವ್ಯಾಕೃತಾಕಾಶದಲ್ಲಿ ವ್ಯಾಪಿಸಿ ಇದ್ದೇ ಇದ್ದು ಭಗವಂತನು ನಿರ್ದೋಷ, ಜ್ಞಾನಾನಂದಾದಿ ನಿರವಧಿಕಾನಂತ ಸಾಂದ್ರಗುಣಾತ್ಮಕ ಸುಂದರತಮದೇಹದಿಂದ ನಾನು ಪೂಜಿಸುವ ಪ್ರತಿಮೆಯಲ್ಲೂ ಇರುವನು. ಅಡಿಯಿಂದ ಮುಡಿಯ ವರೆಗೆ ನಖದಿಂದ ಕೇಶದ ವರೆಗೆ ಅನಂತಾನಂತ ರೂಪಗಳಿಂದ ಸಂಯುಕ್ತವಾದ

ವಿಶಿಷ್ಟರೂಪೋಪೇತ ಎಂದು ನನ್ನ ಗುರುಗಳು ಮಾಡಿದ ಉಪದೇಶಾನುಸಾರ ನಾನು ಯಥಾಮತಿ ಚಿಂತಿಸಿ ಪೂಜಿಸುವೆ.''

''ಏಹಿ ಏಹಿ ಮಮ ಹೃತ್ಕಮಲಸ್ಥಿತ ಶ್ರೀಮುಖ್ಯಪ್ರಾಣಾಂತರ್ಗತ ಬಿಂಬರೂಪಿನ್ ಲಕ್ಷ್ಮೀನಾರಾಯಣ ಪೀಠಸ್ಥಿತೈತತ್ಪ್ರತಿಮಾಂತಃಸ್ಥ ತೇಜಃಸಾರಪ್ರತಿಮಾಂತಃಸ್ಥಿತ ಶ್ರೀ ಮುಖ್ಯಪ್ರಾಣರೂಪಪ್ರತಿಮಾಂತರ್ಗತ ರಮಾರೂಪಚಿನ್ಮಯಪ್ರತಿಮಾಯಾಂ ಮದಂತರ್ಯಾಮಿಣಮ್, ಮನ್ನಿಯಾಮಕಮ್, ಮದಾಕಾರಮ್, ಮದಾಶ್ರಯಮ್, ಮದಾಧಾರಮ್, ಮದುತ್ಪಾದಕಮ್, ಮತ್ಪಾಲಕಮ್, ಮತ್ಸಂಹಾರಕಮ್, ಮತ್ಪ್ರೇರಕಮ್, ಮನ್ನಿವರ್ತಕಮ್, ಮತ್ಸತ್ತಾಪ್ರದಮ್, ಮದೀಯದೋಷಾತಿದೂರಮ್, ಮದತ್ಯಂತವಿಲಕ್ಷಣಮ್, ಮದಚಿಂತ್ಯಮ್, ಮದುತ್ತಮಂ ನಾರಾಯಣಂ ತ್ವಾಂ ಆವಾಹಯಾಮಿ ಆವಾಹಯಾಮಿ'' ಇತಿ ದ್ವಿರುಚ್ಚಾರ್ಯ ಆವಾಹನಮುದ್ರಯಾ ತಂ ಆವಾಹಯೇತ್ ॥''

''ಹೇ ಭಗವನ್! ನನ್ನ ಹೃದಯಕಮಲದಲ್ಲಿ ನೆಲೆಸಿದ ಶ್ರೀಮುಖ್ಯಪ್ರಾಣ-ದೇವರ ಅಂತರ್ಯಾಮಿಯಾದ ಬಿಂಬರೂಪಿಯಾದ ಲಕ್ಷ್ಮೀಸಹಿತ ನಾರಾಯಣ! ಈ ಪೀಠದಲ್ಲಿರುವ (ಶಿಲಾಲೋಹಾದಿಮಯ) ಪ್ರತಿಮೆಯಲ್ಲಿ ತೇಜಃ ಸಾರಪ್ರತಿಮೆ ಇರುವದು. ಅದರಲ್ಲಿ ಮುಖ್ಯಪ್ರಾಣದೇವರು ವ್ಯಾಪಿಸಿ ಇರುವರು. ಅವರಲ್ಲಿ ರಮಾದೇವಿಯ ಚಿನ್ಮಯಪ್ರತಿಮೆಯೂ ವ್ಯಾಪಿಸಿದೆ. ಅಂಥ ರಮಾದೇವಿಯಲ್ಲಿ ನನ್ನ ಅಂತರ್ಯಾಮಿಯಾದ, ನನ್ನ ನಿಯಾಮಕನಾದ, ನನ್ನಂಥ ಆಕಾರವುಳ್ಳ, ನನಗೆ ಸಾಕ್ಷಾತ್ ಆಶ್ರಯನಾದ, ಅಂತಿಮ ಆಧಾರನಾದ, ನನ್ನ ಜನಕ, ನನಗೆ ಪಾಲಕ, ನನ್ನ ಸಂಹಾರಕ, ನನಗೆ ಪ್ರೇರಕ, ನನಗೆ ನಿವರ್ತಕ, ನನಗೆ ಅಸ್ತಿತ್ವಪ್ರದ, ನನ್ನ ದೋಷಗಳಿಂದ ಅತಿದೂರನಾದವ, ನನ್ನಿಂದ ಅತ್ಯಂತವಿಲಕ್ಷಣ, ನನಗೆ ಅಚಿಂತ್ಯ, ನನಗಿಂತ ಉತ್ತಮ ನಾರಾಯಣ! ಬಾ! ಅವಶ್ಯವಾಗಿ ಬಾ! ನಾನು ನಿನ್ನನ್ನು ಆವಾಹಿಸುವೆ. ಆವಾಹಿಸುವೆ.'' ಎಂದು ಅಂದು ಆವಾಹನಮುದ್ರವನ್ನು ತೋರಿ ಆವಾಹಿಸಬೇಕು.

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।
ವಿಭೋ ಸಕಲಲೋಕೇಶ ವಿಷ್ಣೋ ಜಿಷ್ಣೋ ಹರೇ ಪ್ರಭೋ ॥★॥

ತ್ವಾಂ ಭಕ್ತ್ಯಾ ಪೂಜಯಾಮ್ಯದ್ಯ ಭೋಗೈರರ್ಘ್ಯಾದಿಭಿಃ ಕ್ರಮಾತ್ ॥

''ಹೇ ದೇವತೆಗಳ ಒಡೆಯ, ಹೇ ದೇವತೆಗಳಿಗೆ ನಿಯಾಮಕ! ಈ ಪ್ರತಿಮೆಯಲ್ಲಿ ಸಾನ್ನಿಧ್ಯವನ್ನು ಉಂಟುಮಾಡು. ಆಧ್ಯಾತ್ಮಿಕಾದಿ ಎಲ್ಲ ಸಂಪತ್ತುಗಳನ್ನು ದಯಪಾಲಿಸು. ಹೇ ವ್ಯಾಪ್ತನೇ! ಸಕಲಲೋಕಗಳಿಗೆ ಒಡೆಯನೇ! ವಿಷ್ಣುವೇ! ಎಲ್ಲವನ್ನು ಗೆದ್ದವನೇ! ಹರೇ! ಸರ್ವಸಮರ್ಥನೇ! ಇಂದು ನಾನು ನಿನ್ನನ್ನು ಅರ್ಘ್ಯಾದಿ ಉಪಚಾರಗಳನ್ನು ಸಮರ್ಪಿಸಿ ಭಕ್ತಿಯಿಂದ ಪೂಜಿಸುವೆ.''

ಆಮೇಲೆ ಪ್ರತಿಮೆಯಲ್ಲಿ ಮೊದಲು ಮಾತೃಕಾನ್ಯಾಸ, ಬಳಿಕ ತತ್ವನ್ಯಾಸ, ನಾರಾಯಣಮಂತ್ರದ ಪಂಚಾಂಗನ್ಯಾಸ, ಅಷ್ಟಾಕ್ಷರನ್ಯಾಸ ಮಾಡಿ ಪ್ರತಿಮೆಯನ್ನು ಸ್ಪರ್ಶಿಸಿ ಹನ್ನೆರಡು ಬಾರಿ ಅಥವಾ ಇನ್ನೂ ಹೆಚ್ಚು ಸಲ ನಾರಾಯಣ ಮಂತ್ರವನ್ನು ಅಥವಾ ವೇದವ್ಯಾಸ, ಕೃಷ್ಣ, ರಾಮ ಮುಂತಾದ ಮಂತ್ರಗಳನ್ನು ಜಪಿಸಬೇಕು.

ಆಮೇಲೆ ಪ್ರಾರ್ಥನಾಮುದ್ರೆಯನ್ನು ತೋರಿ ಈ ರೀತಿ ಪ್ರಾರ್ಥಿಸಬೇಕು.

**ಯಾಗಾವಸಾನಪರ್ಯಂತಂ ಅತ್ರ ಸ್ಥಿತ್ವಾ ಜನಾರ್ದನ ।**
**ಭಕ್ತಸ್ಯ ಮಮ ಪೂಜಾಂ ತ್ವಂ ಗೃಹೀತ್ವಾ ಪಾಹಿ ಮಾಂ ಪ್ರಭೋ ॥★॥**

**ಭೋಃ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।**
**ತಾವತ್ಸಂಪ್ರೀತಿಭಾವೇನ ಬಿಂಬೇಽಸ್ಮಿನ್ ಸನ್ನಿಧೌ ಭವ ॥★॥**

''ಹೇ ಜನಾರ್ದನ! ಓ ಪ್ರಭೊ! ಪೂಜೆ ಮುಗಿಯುವವರೆಗೆ ಈ ಪ್ರತಿಮೆಯಲ್ಲಿ ನೆಲೆ ನಿಂತು ಭಕ್ತನಾದ ನಾನು ಮಾಡುವ ಪೂಜೆಯನ್ನು ಸ್ವೀಕರಿಸಿ ನನ್ನನ್ನು ಕಾಪಾಡು. ಹೇ ಸ್ವಾಮಿನ್! ಹೇ ಅನಂತ ಜಗತ್ತುಗಳಿಗೆ ನಾಥ! ಪೂಜೆ ಮುಗಿಯುವವರೆಗೆ ನನ್ನ ಮೇಲಿನ ಪ್ರೀತಿಯಿಂದ ಈ ಪ್ರತಿಮೆಯಲ್ಲಿ ಸನ್ನಿಹಿತನಾಗಿರು.'' ಎಂದು ಪ್ರಾರ್ಥಿಸಬೇಕು.

ಬಳಿಕ ನಾರಾಯಣ ಮಂತ್ರದಿಂದಲೇ ಆವಾಹನ, ಸ್ಥಾಪನ, ಸಾನ್ನಿಧ್ಯ, ಸನ್ನಿರೋಧನ, ಸಮ್ಮುಖೀಕರಣ, ಅವಗುಂಠನ ಎಂಬ ಆರು ಮುದ್ರೆಗಳನ್ನು ತೋರಿಸಬೇಕು.

**ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ। ಸಮ್ಮುಖೋ ಭವ । ಅವಕುಂಠಿತೋ ಭವ । ಎಂದು ಅನ್ನಬೇಕು.**

## ಅಭಿಷೇಕವಿಧಿ

ಇಷ್ಟಾದ ಬಳಿಕ ಭಗವಂತ ಧರಿಸಿದ ಚಕ್ರಾದಿ ಆಯುಧಗಳಿಗೆ ಹಾಗೂ ಆಭರಣಗಳಿಗೆ ವಂದಿಸಿ ಅದನ್ನು ಕೆಳಗಿಳಿಸಬೇಕು.

**ಏಹಿ ಶ್ರೀ ಭಗವನ್ ವಿಷ್ಣೋ ಸ್ನಾನಾರ್ಥಂ ಮಜ್ಜನಾಲಯಮ್ ।**

ನಂತರ 'ಭೋ ಸ್ವಾಮಿನ್ ! ಸ್ನಾನಕ್ಕಾಗಿ ಮಜ್ಜನಾಲಯಕ್ಕೆ ಬಾ' ಎಂದು ಬಿನ್ನೈಸಿ.

**'ಓಂ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ ।**
**ಸಮೂಳ್ಹಮಸ್ಯ ಪಾಂಸುರೇ'॥** (ಋ.೧-೨೨-೧೭)

ಎಂಬ ಮಂತ್ರದಿಂದ ಚಿನ್ನದ ಪಾದುಕೆಗಳನ್ನು ಒಪ್ಪಿಸಬೇಕು.

**ಅಭಿಪ್ರಾಯ** :- ಮೂರು ಪಾದಗಳಿಂದ ವಿಷ್ಣುವು ಇಡಿಯ ವಿಶ್ವವನ್ನು ಆಕ್ರಮಿಸಿದ. ದೇವತೆಗಳು ಆಶ್ರಯಿಸಿದ ಆ ಪಾದದಲ್ಲಿ ಇಡಿಯ ವಿಶ್ವವೇ ಮನೆ ಮಾಡಿತು.

**ಅನ್ವಯ :- ವಿಷ್ಣುಃ ಇದಂ ವಿಚಕ್ರಮೇ. ತ್ರೇಧಾ ಪದಂ ನಿದಧೇ. ಅಸ್ಯ ಪಾಂಸುರೇ (ಪದೇ) (ಇದಂ ವಿಶ್ವಂ) ಸಮೂಢಮ್ ।**

**ಭಾಷ್ಯ :- ರಮಂತಿ ಪಾಂಸವೋ ಯತ್ರ ಪಾಂಸುರಂ ಪದಮೀರಿತಮ್ । ಸಮೂಢಂ ತತ್ರ ವಿಶ್ವಂ ಹಿ ಪಾಂಸುವಜ್ಜಗತಃ ಪತೇಃ ॥**

**ಟೀಕಾ :- ರಮಂತಿ ಶೋಭಂತೇ । ಪಾಂಸುಂ ಆಶ್ರಿತಾಃ ದೇವಾಃ ಪಾಂಸವಃ । ವಿಷ್ಣುಃ ಭಗವಾನ್ ಇದಂ ವಿಶ್ವಂ ವಿಚಕ್ರಮೇ ವಿಂಕ್ರಾಂತವಾನ್ । ಕಥಂ? ತ್ರೇಧಾ ಪದಮ್ । ತದಾ ಅಸ್ಯ ಜಗತಃ ಪತೇಃ ಪಾಂಸುರೇ ಪದೇ ಇದಂ ವಿಶ್ವಂ ಸಮೂಢಂ ಪ್ರತಿಷ್ಠಿತಮ್ । ಸಂ ವಹೇಃ ಕ್ತಪ್ರತ್ಯಯೇ ಸಮೂಢಮ್ । ರಮೇಃ ಡಪ್ರತ್ಯಯೇ ರಮ್ ।**

ವಿಷ್ಣುಃ ವಿಷ್ಣುವು ಇದಂ ಈ ವಿಶ್ವವನ್ನು ವಿಚಕ್ರಮೇ ಆಕ್ರಮಿಸಿದನು. ಹೇಗೆ? ಪದಂ ಪಾದವನ್ನು ತ್ರೇಧಾ ಮೂರಾಗಿ ನಿದಧೇ ಇಟ್ಟನು. ಆಗ ಅಸ್ಯ ಈ ಜಗದೊಡೆಯನ ಪಾಂಸುರೇ ಎಲ್ಲಿ ಧೂಳಿಗಳು ಶೋಭಿಸುತ್ತವೆಯೋ ಅಥವಾ ದೂಳಿಯಲ್ಲಿಯ ದೇವತೆಗಳು ಎಲ್ಲಿ ಸಂತಸಪಡುವರೋ ಆ ಪಾದದಲ್ಲಿ ಈ ವಿಶ್ವವು ಸಮೂಢಂ ಪ್ರತಿಷ್ಠಿತವಾಗಿತ್ತು. (ಇಡಿಯ ವಿಶ್ವವನ್ನೇ ಆಳಿದ ಹಾಗೂ ಅದಕ್ಕೆ ಆಸರೆ ನೀಡಿದ ಪಾದಗಳಿಗೆ ಪಾದುಕೆ ಸಲ್ಲಿಸುತ್ತಿರುವೆ. ಎಂತಹ ಭಾಗ್ಯ!)

ಛತ್ರಚಾಮರಾದಿ ವೈಭವಗಳಿಂದ ಕೈಹಿಡಿದು ಕರೆತರಬೇಕು.

'ಓಂ [೧೪]ಭದ್ರಂ ಕರ್ಣೇಭಿಃ ಶ್ರುಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಿಭಿ-ರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥ (ಋ.೧-೮೯-೮)

ಎಂಬ ಮಂತ್ರದಿಂದ ಸ್ನಾನಪೀಠದಲ್ಲಿ ಕುಳ್ಳಿರಿಸಬೇಕು.

ಅಭಿಪ್ರಾಯ ಪರಮಮಂಗಳ ದೇವರನ್ನು ಕಿವಿಯಿಂದ ಕೇಳೋಣ. ಕಣ್ಣಿಂದ ನೋಡೋಣ. ದೇವರನ್ನು ಸ್ತುತಿಸುತ್ತ ದೇವರು ಕೊಟ್ಟ ಆಯುಷ್ಯವನ್ನು ಧೃಡವಾದ ದೇಹದಿಂದ ಬಾಳೋಣ.

ಅನ್ವಯ :- ಹೇ ದೇವಾಃ! ಕರ್ಣೇಭಿಃ ಭದ್ರಂ ಶೃಣುಯಾಮ. ಹೇ ಯಜತ್ರಾಃ ಅಕ್ಷಿಭಿಃ ಭದ್ರಂ ಪಶ್ಯೇಮ. ತುಷ್ಟುವಾಂಸಃ ಸ್ಥಿರೈಃ ಅಂಗೈಃ ತನೂಭಿಶ್ಚ ಯದಾಯುಃ ದೇವಹಿತಂ ತತ್ ವ್ಯಶೇಮ.

''ದೇವಾಃ ಓ ದೇವತೆಗಳೇ! ಭದ್ರಂ ಪರಮಮಂಗಲಮಯ ಭಗವಂತನನ್ನು ಅವನ ಮಹಿಮೆಯನ್ನು ಕರ್ಣೇಭಿಃ ಶ್ರುಣುಯಾಮ ದೇವರು ಕೊಟ್ಟ ಕಿವಿಗಳನ್ನು ಮೈ ಎಲ್ಲ ಮಾಡಿ ಕೇಳಬೇಕೆಂಬ ಆಸೆಯಿದೆ. ಹೇ ಯಜತ್ರಾಃ ಯಜನೀಯರೇ ಭದ್ರಂ ದೇವರನ್ನು ಅಕ್ಷಿಭಿಃ ದೇವರು ದಯಪಾಲಿಸಿದ ಕಣ್ಣಳನ್ನು ಮೈ ಎಲ್ಲ ಮಾಡಿ ನೋಡಬೇಕೆಂಬ ಹಂಬಲವಿದೆ. ತುಷ್ಟುವಾಂಸಃ ದೇವರನ್ನು ಸ್ತುತಿಸುತ್ತಾ ಸ್ಥಿರೈಃ ಅಂಗೈಃ ತನೂಭಿಃ ಸ್ಥಿರವಾದ ಅಂಗ ಹಾಗೂ ದೇಹಗಳಿಂದ ದೇವಹಿತಂ ಯತ್ ಆಯುಃ ದೇವರು ದಯಪಾಲಿಸಿದ ಆಯುಷ್ಯವನ್ನು (ತತ್) ವ್ಯಶೇಮ ಇಡಿಯಾಗಿ ಬದುಕಬೇಕೆಂದು ಬಯಕೆಯಿದೆ. (ದೇವರನ್ನು ಕಾಣಬೇಕೆಂದು ತೀವ್ರ ಹಂಬಲದಿಂದ ಪೀಠದಲ್ಲಿ ಸ್ಥಿರವಾಗಿ ಕೂಡಿಸಬೇಕು.)''

---

೧೪ ಬ್ರ.ವ್ಯಾಖ್ಯಾ - ಆಶ್ರಯಂ ಭದ್ರಮೀಕ್ಷಿತಮ್ । ಭದ್ರಂ ಹರಿಮ್ । ಇತಿ ಭಾಗವತೇ ತಾತ್ಪರ್ಯೇ ಚ (೨-೧-೨೧) । ಯದ್ಯಪಿ ಶ್ರುಣುಯಾಮ ಇತಿ ಬಹುವಚನಾತ್ ಕರ್ಣೇಭಿಃ ಇತಿ ಬಹುತ್ವಂ ಸಾಧು । ತಥಾಽಪಿ ''ಗುಣಾಧಿಕ್ಯಂ ಯೇನ ಭವೇತ್ ವೇದಸ್ಯಾರ್ಥಃ ಸ ಏವ ಹಿ । ಪ್ರಯೋಜಕತ್ವಾತ್ ನಾನ್ಯಸ್ಯ ಫಲಾಭಾವಾತ್ ತದರ್ಥತಾ''। ಇತ್ಯಾಚಾರ್ಯಚರಣಾದೇಶಾತ್ ಕರ್ಣೇಭಿಃ ಇತಿ ಬಹುತ್ವಸ್ಯ ಏಕೈಕಸ್ಮಿನ್ನಪಿ ಪರ್ಯಾಪ್ತಿವಿವಕ್ಷಾ । ತೇನ ಆಕರ್ಣನೀಯಸ್ಯ ಮಹಿಮ್ನೋ ಭೂಮಾ ಸೂಚ್ಯತೇ । ಏವಂ ಅಕ್ಷಿಭಿರಿತಿ ।

ಪುನಃ ಆವಾಹನಾದಿ ಆರು ಮುದ್ರೆಗಳನ್ನು ತೋರಿಸಬೇಕು. ಮೃತ್ತಿಕಾಶೌಚ (ಮೃತ್ತಿಕೆಯಿಂದ ಕೈಕಾಲು ತೊಳೆಯುವದು), ಗಂಡೂಷ (ನೀರಿನಿಂದ ಬಾಯಿ ಮುಕ್ಕಳಿಸುವದು), ದಂತಧಾವನ (ಹಲ್ಲುಉಜ್ಜುವದು) ಹಾಗೂ ಮುಖಪ್ರಕ್ಷಾಲನೆ (ಮುಖ ತೊಳೆಯುವದು)ಗಳಿಗಾಗಿ ನಾರಾಯಣಮಂತ್ರದಿಂದ ಜಲವನ್ನು ಸಮರ್ಪಿಸಬೇಕು.

ವಾಯುದೇವರ ಕೈಯಿಂದ ಛತ್ರ, ಚಾಮರ, ದರ್ಪಣ, ಪೀಠಗಳನ್ನು ಕೊಡಿಸುವದಕ್ಕಾಗಿಪ್ರತ್ಯೇಕವಾಗಿನಾರಾಯಣಮಂತ್ರದಿಂದತುಲಸಿಯನ್ನಾಗಲೀ, ಜಲವನ್ನಾಗಲೀ ಸಮರ್ಪಿಸಬೇಕು.

ಹಾಗೆಯೇ ರಮಾದೇವಿಯ ಕೈಯಿಂದ ಕೇಶಸಂಸ್ಕಾರ (ಕೂದಲನ್ನು ಬಾಚುವದು), ಅಂಗಮರ್ದನ (ಎಣ್ಣೆ ಹಚ್ಚಿ ಮೈ ಕೈಗಳನ್ನು ಒತ್ತುವದು) ಸುಗಂಧತೈಲ ಹಾಗೂ ಕಸ್ತೂರಿಮುಂತಾದವುಗಳ ಕಲ್ಕ (ಎಣ್ಣೆ ಹೋಗಿಸುವದಕ್ಕೆ ಬೇಕಾದ ಪುಡಿ) ಇವುಗಳಿಂದ ಅಭ್ಯಂಗ, ಚಿನ್ನದ ಪಾತ್ರೆಯಲ್ಲಿ ಉಷ್ಣೋದಕಸ್ನಾನ ಇವುಗಳಿಗಾಗಿ ತುಲಸೀದಲಗಳನ್ನು ಸಮರ್ಪಿಸಬೇಕು.

| | | | |
|---|---|---|---|
| ಅರ್ಘ್ಯಸಮರ್ಪಣೆ | ಲಕ್ಷ್ಮೀಹಸ್ತದಿಂದ | ಮೂಲಮಂತ್ರ | ಆಪೋಹಿಷ್ಠಾ.. |
| ಪಾದ್ಯಸಮರ್ಪಣೆ | ಸರಸ್ವತೀ ಹಸ್ತದಿಂದ | ಮೂಲಮಂತ್ರ | ಅಸ್ಮಿನ್ ರಾಷ್ಟ್ರೇ.. |
| ಆಚಮನ ಸಮರ್ಪಣೆ | ರತಿಯ ಕೈಗಳಿಂದ | ಮೂಲಮಂತ್ರ | ಶಂನೋ ದೇವೀಃ.. |
| ಮಧುಪರ್ಕ ಸಮರ್ಪಣೆ | ಬ್ರಹ್ಮನಿಂದ | ಮೂಲಮಂತ್ರ | ಮಧುವಾತಾ.. |
| ಪುನರಾಚಮನ .... | ಶಾಂತಿಯಿಂದ | ಮೂಲಮಂತ್ರ | ಶಂನೋ ದೇವೀಃ. |
| ಸ್ನಾನ ಸಮರ್ಪಣೆ | ವರುಣನಿಂದ | ಮೂಲಮಂತ್ರ | |

ಓಂ [೧೫] 'ಆಪೋ ಹಿ ಷ್ಠಾ ಮಯೋಭುವ ಸ್ತಾ ನ ಊರ್ಜೇ ದಧಾತನ ।
ಮಹೇ ರಣಾಯ ಚಕ್ಷಸೇ ॥'

ಅಭಿಪ್ರಾಯ :- ಸುಖದ ಸೆಲೆಯಾದ ಜಲದೇವತೆಗಳೇ! ಸಂಸಾರದ ಯುದ್ಧದಲ್ಲಿ ಗೆಲ್ಲಲು ಅಗತ್ಯವಾದ ಜ್ಞಾನಕ್ಕಾಗಿ ಆಹಾರವನ್ನು ಒದಗಿಸಿರಿ.

ಅನ್ವಯ :- ಹೇ ಆಪಃ ! ಯಾಃ ಯೂಯಂ ಮಯೋಭುವಃ ಸ್ಥ. ತಾಃ ನಃ ಮಹೇರಣಾಯ ಚಕ್ಷಸೇ ಊರ್ಜೇ ದಧಾತನ.

೧೫ ಬ್ರ.ವ್ಯಾಖ್ಯಾ:- ಸಂಸಾರೋ ಹಿ ಮಹಾನ್ ರಣಃ । ಮಯಃ ಇತಿ ಸುಖನಾಮ । ರಣಃ ರಮಣೀಯಃ ಇತಿ ನಿರುಕ್ತೋಕ್ತಂ ವಾ ।

ಆಪಃ ಓ ಜಲದೇವತೆಗಳೇ! ನೀವು ಮಯೋಭುವಃ ಸ್ಥ ನಮ್ಮ ಸಂತಸದ ಸೆಲೆಯಾಗಿರಿ. ತಾಃ ಆ ನೀವು, ಊರ್ಜೇ ಅನ್ನವನ್ನು ಹಾಗೂ ಮಹೇರಣಾಯ ಸಂಸಾರವೆಂಬ ಸಂಘರ್ಷಕ್ಕಾಗಿ, (ಅಗತ್ಯವಾದ) ಚಕ್ಷಸೇ ಮಿಗಿಲಾದ ಜ್ಞಾನವನ್ನು ನಃ ದಧಾತನ- ನಮಗೆ ದಯಪಾಲಿಸಿರಿ.

''ಶಂನೋ ದೇವೀರಭಿಷ್ಟಯ ಆಪೋ...... ''

ಮಧುವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥ ಮಧು ನಕ್ತಮುತೋಷಸೋ ಮಧುಮತ್ ಪಾರ್ಥಿವಂ ರಜಃ । ಮಧು ದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ (ಋ.೧-೯೦-೬/೭/೮)

[೧೬]'ಅಸ್ಮಿನ್ ರಾಷ್ಟ್ರೇ ಶ್ರಿಯಮಾವೇಶಯಾಮ್ಯತೋ ದೇವೀಃ ಪ್ರತಿಪಶ್ಯಾಮ್ಯಾಪಃ। ದಕ್ಷಿಣಂ ಪಾದಮವನೇನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ದಧಾಮಿ । ಸವ್ಯಂ ಪಾದಮವನೇನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ವರ್ಧಯಾಮಿ । ಪೂರ್ವಮನ್ಯಂ ಅಪರಮನ್ಯಂ ಪಾದಾವವನೇನಿಜೇ। ದೇವಾ ರಾಷ್ಟ್ರಸ್ಯ ಗುಪ್ತ್ಯಾ ಅಭಯಸ್ಯಾವರುದ್ಧ್ಯೈ। ಆಪಃ ಪಾದಾವನೇಜನೀಃ ದ್ವಿಷಂತಂ ನಿರ್ದಹಂತು ಮೇ' ।

ಅಭಿಪ್ರಾಯ :- ಬಲಪಾದದ ಪೂಜೆಯಿಂದ ಇಂದ್ರಿಯದ ಪೋಷಣೆ. ಎಡಪಾದದ ಪೂಜೆಯಿಂದ ಇಂದ್ರಿಯದ ವರ್ಧನ. ರಾಷ್ಟ್ರದ ರಕ್ಷೆ ಹಾಗೂ ಅಭಯದ ಪ್ರಾಪ್ತಿಗಳನ್ನು ದೇವತೆಗಳು ಕೊಟ್ಟು ಶತ್ರುಗಳನ್ನು ದಹಿಸಲಿ.

ಅನ್ವಯ :- ಅಸ್ಮಿನ್ ರಾಷ್ಟ್ರೇ ಶ್ರಿಯಂ ನಿವೇಶಯಾಮಿ. ಅತಃ ಆಪಃ ದೇವೀಃ ಪ್ರತಿಪಶ್ಯಾಮಿ. ದಕ್ಷಿಣಂ ಪಾದಂ ಅವನೇನಿಜೇ. ಅಸ್ಮಿನ್ ರಾಷ್ಟ್ರೇ ಇಂದ್ರಿಯಂ ದಧಾಮಿ. ಸವ್ಯಂ ಪಾದಂ ಅವನೇನಿಜೇ. ಅಸ್ಮಿನ್ ರಾಷ್ಟ್ರೇ ಇಂದ್ರಿಯಂ ವರ್ಧಯಾಮಿ. ಪೂರ್ವಂ ಅನ್ಯಂ ಅಪರಂ ಅನ್ಯಂ ಪಾದೌ ಅವನೇನಿಜೇ. ರಾಷ್ಟ್ರಸ್ಯ ಗುಪ್ತ್ಯೈ,

---

೧೬ ಬ್ರ.ವ್ಯಾಖ್ಯಾ- 'ಪ್ರಭುರ್ಹಿ ಜೀವೋ ಜಡಮಪೇಕ್ಷ್ಯ' ಇತಿ ಗೀತಾಭಾಷ್ಯೋಕ್ತೇಃ ದೇಹೇಂದ್ರಿಯಮನಸಾಂ ಇಂದ್ರಃ ಸ್ವಾಮೀ ಖಲು ಜೀವಃ । ತಸ್ಮೈ ಯದ್ಧಿತಂ ತದಿಂದ್ರಿಯಮ್ । ಅತಃ ಇಂದ್ರಿಯಮಿತಿ ನ ಕೇವಲಂ ಕರಣಾನಿ ಇತ್ಯರ್ಥಃ । ಅಪಿ ತು ಜೀವಹಿತಾನಿ ವಿಷ್ಣುಭಕ್ತ್ಯಾದೀನಿ ನಿಖಿಲಾನಿ । 'ತದ್ವಿದ್ಧಿ ಪ್ರಣಿಪಾತೇನ... ಸೇವಯಾ', 'ಮಹೀಯಸಾಂಪಾದರಜೋಭಿಷೇಕಮ್', 'ಮಹತ್ಸೇವಾಂದ್ವಾರಮಾಹುರ್ವಿಮುಕ್ತೇಃ', 'ಮುಕುಂದಭಕ್ತ್ಯೈ ಗುರುಭಕ್ತಿಜಾಯೈ' ಇತ್ಯಾದಿ ವಚನಸಿದ್ಧಃ ಖಲು ಅಯಂ ಪ್ರಮೇಯಃ ।

ಅಭಯಸ್ಯ ಅವರುದ್ಧ್ಯೈ ದೇವಾಃ ಪಾದಾವನೇಜನೀಃ ಆಪಃ ಮೇ ದ್ವಿಷಂತಂ ನಿರ್ದಹಂತು.

''ಅಸ್ಮಿನ್ ರಾಷ್ಟ್ರೇ ಈ ರಾಷ್ಟ್ರದಲ್ಲಿ, ಈ ಜನರಲ್ಲಿ, ಈ ದೇಹದಲ್ಲಿ, ಶ್ರಿಯಂ-ಲಕ್ಷ್ಮೀದೇವಿಯನ್ನು, ನಿವೇಶಯಾಮಿ ಇರಿಸುತ್ತೇನೆ. ಅತಃ ಆ ಉದ್ದೇಶ್ಯದಿಂದ, ಆಪಃ ದೇವೀಃ ಜಲದೇವತೆಗಳನ್ನು, ಪ್ರತಿಪಶ್ಯಾಮಿ ಕಾಂಕ್ಷಾಪೂರ್ಣ ಕಣ್ಣಿನಿಂದ ನೋಡುತ್ತೇನೆ. ದಕ್ಷಿಣಂ ಪಾದಂ ಬಲಗಾಲನ್ನು, ಅವನೇನಿಜೇ ಪ್ರಕ್ಷಾಲಿಸುವೆ. ಅದರಿಂದ ಅಸ್ಮಿನ್ ರಾಷ್ಟ್ರೇ ಇಂದ್ರಿಯಂ ದಧಾಮಿ ಇಂದ್ರಿಯವನ್ನು ಪೋಷಿಸುವೆ.

ಶರೀರ, ಕರಣ, ಮನಸ್ಸುಗಳಿಗೆ ಒಡೆಯನಾದವ ಜೀವ. ಅಂತೆಯೇ ಆತ ಇಂದ್ರ. ಅವನಿಗೆ ಹಿತವಾದುದು ಇಂದ್ರಿಯ. ಜೀವನಿಗೆ ಹಿತವಾದ ವಿಷ್ಣುಭಕ್ತಿ, ಜ್ಞಾನ, ಸತ್ಕರ್ಮಾನುಷ್ಠಾನ, ಗುರ್ವನುಗ್ರಹ ಮುಂತಾದವುಗಳನ್ನು ನಾನು ಇಡುವೆ. ಪೋಷಿಸುವೆ.

ಸವ್ಯಂ ಪಾದಂ ಎಡಗಾಲನ್ನು, ಅವನೇನಿಜೇ ಪ್ರಕ್ಷಾಲಿಸುವೆ. ಅದರಿಂದ ಅಸ್ಮಿನ್ ರಾಷ್ಟ್ರೇ ಇಂದ್ರಿಯಂ ವರ್ಧಯಾಮಿ ಇಂದ್ರಿಯಸಾಮರ್ಥ್ಯವನ್ನು ಬೆಳೆಸುವೆ. ಜೀವನಿಗೆ ಹಿತವಾದ ವಿಷ್ಣುಭಕ್ತಿ ಮುಂತಾದವುಗಳನ್ನು ನಾನು ಹೆಚ್ಚಿಸುವೆ.

ಜ್ಞಾನಿಗಳ ಪಾದಧೂಳಿಯಲ್ಲಿ ಅವಗಾಹನೆಯೇ ಜೀವನಿಗೆ ಹಿತವಾದ ಸಕಲಸಾಧನಗಳನ್ನೆಲ್ಲ ಒದಗಿಸುವದು.

ಪೂರ್ವಂ ಅನ್ಯಂ ಅಪರಂ ಅನ್ಯಂ ಪಾದೌ ಅವನೇನಿಜೇ ಮೊದಲಿಗೊಂದು ನಂತರ ಮತ್ತೊಂದು ಹೀಗೆ ಎರಡೂ ಪಾದಗಳನ್ನು ತೊಳೆಯುವೆ. ರಾಷ್ಟ್ರಸ್ಯ ರಾಷ್ಟ್ರದ ದೇಹದ ಜನರ, ಗುಪ್ತ್ಯೈ ರಕ್ಷೆಗಾಗಿ, ಅಭಯಸ್ಯ ಅವರುದ್ಧ್ಯೈ ನ್ಯಾಯದ ಅಭಯವನ್ನು ಸ್ಥಿರಗೊಳಿಸುವದಕ್ಕಾಗಿ ದೇವಾಃ ದೇವತೆಗಳು ಸಮರ್ಥರಾಗಿರುವರು. ಪಾದಾವನೇಜನೀಃ ಪಾದ ತೊಳೆದ, ಆಪಃ ನೀರು, ಮೇ ದ್ವಿಷಂತಂ ನನ್ನ ಶತ್ರುವನ್ನು, ನಿರ್ದಹಂತು ಸುಟ್ಟು ಹಾಕಲಿ.''

### ಪಂಚಾಮೃತಾಭಿಷೇಕ

೧. [೧೭]ಓಂ ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ ।

---

೧೭ ಬ್ರ.ವ್ಯಾಖ್ಯಾ- ಪಯಃ ಶುಭ್ರತಯಾ ಪವಿತ್ರತಯಾ ದೇವಪ್ರಿಯತಯಾ ಚ ಸೋಮಸದೃಶಮ್ । ಅತಃ ಗೌಣ್ಯಾ ಸೋಮಶಬ್ದಃ । ಯದ್ವಾ 'ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮಃ' ಇತ್ಯತಃ ಓಷಧಯಃ ಸೋಮಪುಷ್ಟಾಃ । ಪಯಃ ಓಷಧಿನಿಷ್ಪನ್ನಂ

ಭವಾ ವಾಜಸ್ಯ ಸಂಗಥೇ ॥ (ಋ.೧-೯೧-೧೬)

ಅಭಿಪ್ರಾಯ ಹೇ ಸೋಮದೇವತೆ! ಎಲ್ಲೆಡೆಯಿಂದಲೂ ನಿನ್ನ ಬಲಶಕ್ತಿಗಳು ವೃದ್ಧಿಸಲಿ. ಇಷ್ಟಪ್ರದ ದೇವರನ್ನು ಸಂತೋಷಗೊಳಿಸು. ಆಧ್ಯಾತ್ಮಿಕಾದಿ ಅನ್ನವನ್ನು ಒದಗಿಸು.

ಅನ್ವಯ :- ಹೇ ಸೋಮ (ವಿಷ್ಣುಂ) ಆಪ್ಯಾಯಸ್ವ. ವಿಶ್ವತಃ ತೇ ವೃಷ್ಣ್ಯಂ ಸಮೇತು. (ತ್ವಂ) ವಾಜಸ್ಯ ಸಂಗಥೇ ಭವ.

''ಸೋಮ ಸೋಮರಸದಂತೆ ಪವಿತ್ರವೂ, ದೇವಪ್ರಿಯವೂ ಆದ, ಚಂದ್ರನಂತೆ ಬೆಳ್ಳಗಾದ, ಅಥವಾ ಚಂದ್ರಪುಷ್ಪ ಸಸ್ಯಗಳಿಂದ ನಿಷ್ಪನ್ನವಾದ ಹಸುವಿನ ಹಾಲಿನಲ್ಲಿ ತೇ ವೃಷ್ಣ್ಯಂ ಪೌಷ್ಟಿಕತೆಯ ಸಮಸ್ತ ಶಕ್ತಿಸಾಮರ್ಥ್ಯಗಳು ವಿಶ್ವತಃ ಎಲ್ಲೆಡೆಯಿಂದ ಬಂದು ಸಮೇತು ಒಂದುಗೂಡಲಿ. ಹೇ ಸೋಮ ಓ ಕ್ಷೀರದ ದೇವತೆಯೇ! ವೃಷ್ಣ್ಯಂ ಆಪ್ಯಾಯಸ್ವ ಅಭೀಷ್ಟವನ್ನು ವರ್ಷಣ ಮಾಡುವ ದೇವರನ್ನು ಬೆಳೆಸು. ಸುಖಪಡಿಸು. (ದೇವರನ್ನು ತೃಪ್ತಿಪಡಿಸುವ ಮುಖಾಂತರ) ವಾಜಸ್ಯ ಅನ್ನದ ಭೌತಿಕ ಹಾಗೂ ಆಧ್ಯಾತ್ಮಿಕ ಆಹಾರದ ಸಂಗಥೇ ಸಂಪ್ರಾಪ್ತಿಗಾಗಿ ಭವ ಕಾರಣನಾಗು.''

೨. [೧೮]ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।
ಸುರಭಿ ನೋ ಮುಖಾ ಕರತ್ ಪ್ರ ಣ ಆಯೂಂಷಿ ತಾರಿಷತ್ ॥★॥
(ಋ.೪-೩೯-೬)

---

ಇತ್ಯತಃ ಪಯಸಿ ಸೋಮಶಬ್ದಸ್ಯ ಲಕ್ಷಿತಲಕ್ಷಣಾ । ವೃಷ್ಣ್ಯಂ ಭಾವವ್ಯುತ್ಪತ್ತ್ಯಾ ಬಲಮ್, ಕರ್ತೃವ್ಯುತ್ಪತ್ತ್ಯಾ ಅಭೀಷ್ಟವರ್ಷಿತಾ ಇತ್ಯುಭಯಂ ಅರ್ಥಃ ।

೧೮ ಬ್ರ.ವ್ಯಾಖ್ಯಾ- ನನು ಮಂತ್ರೇಽತ್ರ ಅಶ್ವಃ ಶ್ರೂಯತೇ । ದಧಿಕ್ರಾವಾದೀನಾಂ ಅಶ್ವವಚನತ್ವಾತ್ । ಸತ್ಯಮ್ । ರೂಢ್ಯಾ । ಈಷದ್ಯೋಗೇನಾಪಿ । ಮಹಾಯೋಗಸ್ತು ಮಹತೋ ದೇವಸ್ಯೈವ । ಅನುಸೃತ್ಯಾಪಿ ಯಾಸ್ಕಂ ದೇವಪರತಾಂ ಸಾಧಯಾಮಃ । ಸಹ್ಯಾಹ 'ದಧತ್ ಕ್ರಾಮತಿ, ದಧತ್ ಕ್ರಂದತಿ' ಇತಿ । ಬಲಿಂ ದಧತ್ ವಿಶ್ವಂ ಕ್ರಾಮತಿ, ಪದಾನಿ ದಧತ್ ವೇದಂ ಕ್ರಂದತಿ ಉಚ್ಚಾರಯತಿ । 'ವಾಮನಶ್ಚೈವ ಸಂಪ್ರೋಕ್ತಃ ಪದದೇವತಾ' ಇತಿ ಐತರೇಯಭಾಷ್ಯಂ। ಆಶು ವಾತೀತಿ ವಾ 'ಅಶೂ ವ್ಯಾಪ್ತೌ' ಇತ್ಯತೋ ವಾ ಅಶ್ವಶಬ್ದಃ । ಭಾಷ್ಯೋಕ್ತಾರ್ಥೇಷು 'ನಿಗಮವಾಕ್ಪಟವೇ' 'ದಧಿಮಿಶ್ರಾನ್ನಕವಲಮ್' 'ವಾಮನೋ ಬುದ್ಧಿದಾತಾ ಚ' 'ತರತಿ ಸಕಲದುಃಖಾತ್ ವಾಮನಮ್' 'ವಾಮನಸ್ತಾರಕೋಽಭಾಭ್ಯಾಂ' ಇತಿ ಮಾನಾನಿ ।

ಅಭಿಪ್ರಾಯ ಮೊಸರಿನಲ್ಲಿ ನಿಯಾಮಕನಾಗಿರುವ ಅನ್ನ, ಅಮೃತಗಳನ್ನು ಉಣಿಸಿ ನಮ್ಮ ಮುಖವನ್ನು, ಬುದ್ಧಿಜ್ಞಾನಗಳನ್ನು ನೀಡಿ ನಮ್ಮ ಮಾತನ್ನು ಸುರಭಿಗೊಳಿಸಲಿ. ಅವನೇ ಉತ್ತಮ ಆಯುಷ್ಯವನ್ನು ನೀಡಿ ಜನ್ಮಗಳನ್ನು ದಾಟಿಸಿ ಮುಕ್ತಿಯನ್ನು ಕೊಡಲಿ.

ಅನ್ವಯ :- **ದಧಿಕ್ರಾವ್ಣಃ (ದಧತ್) (ಕ್ರಾಮತಿ). ದಧಿಕ್ರಾವ್ಣಃ (ದಧತ್) (ಕ್ರಂದತಿ). ಜಿಷ್ಣೋಃ ಅಶ್ವಸ್ಯ ವಾಜಿನಃ ದಧಿಕ್ರಾವ್ಣಃ ಅಕಾರಿಷಂ. ನಃ ಮುಖಾ ಸುರಭಿಕರತ್. ಅಥವಾ ನಃ ಮುಖಾ ನಃ ಆಯೂಂಷಿ ಪ್ರತಾರಿಷತ್. ಅಥವಾ ನಃ ಆಯೂಂಷಿ ಪ್ರತಾರಿಷತ್. ಅಥವಾ ನಃ ಆಯೂಂಷಿ ಪ್ರತಾರಿಷತ್.**

''**ದಧಿಕ್ರಾವ್ಣಃ**- (ತನಗೆ ಅಂದು ಅಯೋಗ್ಯವಾದ ಇಂದ್ರಪದವಿಯನ್ನು ಆಕ್ರಮಿಸಲು ಹೊರಟ ಬಲಿಯನ್ನು) (**ದಧತ್**) ತಡೆಗಟ್ಟಿ (ಮೂರು ಪಾದ ಭೂಮಿಯ ದಾನವನ್ನು ಬೇಡಿ ವಿಶ್ವವನ್ನೇ) (**ಕ್ರಾಮತಿ**) ಆಕ್ರಮಿಸಿದ,

**ದಧಿಕ್ರಾವ್ಣಃ** (ವೇದಗಳ ಪದಗಳನ್ನು) (**ದಧತ್**) ನಿಲ್ಲಿಸಿ ನಿಲ್ಲಿಸಿ (**ಕ್ರಂದತಿ**) ಉಚ್ಚರಿಸುವ (ಅಂದರೆ- ಪದಪಾಠದ ನಿಯಾಮಕನಾದ) **ಜಿಷ್ಣೋಃ** ಬಲಿಯನ್ನು ಗೆಲ್ಲುವ **ಅಶ್ವಸ್ಯ** ವೇಗದಿಂದ ಎಲ್ಲಡೆ ಹರಡಿ ವ್ಯಾಪಿಸಿದ **ವಾಜಿನಃ** ದಧಿಮಿಶ್ರ ಅನ್ನದ ಸ್ವಾಮಿಯಾದ **ದಧಿಕ್ರಾವ್ಣಃ** ಮೊಸರಿನಲ್ಲಿ ಸನ್ನಿಹಿತನಾದ ವಾಮನದೇವರ ಸೇವೆ, ಪೂಜೆ, ಸ್ಮರಣೆಗಳನ್ನು **ಅಕಾರಿಷಂ** ಮಾಡಿದೆನು.

ಆ ಭಗವಾನ್ ವಾಮನನು **ನಃ ಮುಖಾ** ನಮ್ಮ ಮುಖಗಳನ್ನು **ಸುರಭಿಕರತ್** (ದಧಿಮಿಶ್ರಾನ್ನ ಮೊದಲಾದುದನ್ನು ಮತ್ತು ಪೀಯೂಷವನ್ನು ದಯಪಾಲಿಸಿ) ಪರಿಮಳಗೊಳಿಸಲಿ.

ಅಥವಾ **ನಃ ಮುಖಾ** ನಮ್ಮ ಮುಖಗಳನ್ನು ಅಂದರೆ ವಾಣಿಯನ್ನು (ಬುದ್ಧಿಜ್ಞಾನಗಳ ಪ್ರದಾನದಿಂದ) ಸುಂದರಗೊಳಿಸಲಿ. **ನಃ ಆಯೂಂಷಿ ಪ್ರತಾರಿಷತ್** ನಮಗೆ ಆಯುಸ್ಸನ್ನು ಹೆಚ್ಚಾಗಿ ನೀಡಲಿ. ಅಥವಾ **ನಃ ಆಯೂಂಷಿ** ನಮ್ಮ ಜನ್ಮಗಳನ್ನು **ಪ್ರತಾರಿಷತ್** ಚೆನ್ನಾಗಿ ನಡೆಸುವಂತೆ ಮಾಡಿ ಕೊನೆಗಾಣಿಸಲಿ. ಅಥವಾ **ನಃ ಆಯೂಂಷಿ** ನಮ್ಮ ಜನ್ಮಗಳನ್ನು **ಪ್ರತಾರಿಷತ್** ದಾಟಿಸಿ ಮುಕ್ತಿಗೆ ಸೇರಿಸಲಿ.''

೩. [೧೯]**ಘೃತಂ ಮಿಮಿಕ್ಷಿರೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ**

---

೧೯ ಬ್ರ.ವ್ಯಾಖ್ಯಾಃ- 'ಯೋನಿಷ್ಟ ಇಂದ್ರ ನಿಷದೇಽಕಾರಿ' ಇತ್ಯಾದೌ ಇವ ಯೋನಿಶಬ್ದಃ

ಧಾಮ । ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥ (ಋ.೨-೩-೧೧)

ಅಭಿಪ್ರಾಯ ಅಧಿಕ ಘೃತವಿರುವ ಕ್ಷೀರಸಾಗರ ದೇವನೇ! ಅವನು ತುಪ್ಪದಲ್ಲಿರುವ. ಭಕ್ತಿಯಿಂದ ಸಮರ್ಪಿಸಿದ ಹವಿಸ್ಸನ್ನು ಸ್ವೀಕರಿಸುವಿ. ಪ್ರತಿ ಆಹುತಿಗೆ ದೇವತೆಗಳನ್ನು ಸಂತೋಷಗೊಳಿಸುವಿ.

ಅನ್ವಯ :- ಘೃತಂ ಅಸ್ಯ ಯೋನಿಃ. ಶ್ರಿತಃ ಘೃತೇ ಘೃತಂ ಮಿಮಿಕ್ಷೇ. ಅಸ್ಯ ಧಾಮ ಘೃತಂ. ವೃಷಭ ! ಸ್ವಾಹಾಕೃತಂ ಹವ್ಯಂ ವಕ್ಷಿ ಅನುಷ್ವಧಂ ಮಾದಯಸ್ವ ಆವಹ.

''ಘೃತಂ ಅಧಿಕ ಘೃತವಿರುವ ಹಾಲುಗಡಲು ಅಸ್ಯ ಈ ದೇವನ ಯೋನಿಃ ಮನೆ. ಶ್ರಿತಃ (ಶ್ರಿಯಂ ತನೋತಿ) ಸಿರಿಯನ್ನು ಹೆಚ್ಚಿಸುವ ದೇವರು ಘೃತೇ ತುಪ್ಪದಲ್ಲಿ ಇರುವ. ಅದಕ್ಕೆ ನಿಯಾಮಕ. ಇಂಥ ದೇವನಿಗೆ ವಿಪುಲವಾಗಿ ಕೊಟ್ಟು ತೃಪ್ತಿಪಡಿಸುವಷ್ಟು ನನಗೆಲ್ಲಿದೆ ತುಪ್ಪ? ಆದುದರಿಂದ ನಾನು ಘೃತಂ ಮಿಮಿಕ್ಷೇ ಕೇವಲ ತುಪ್ಪವನ್ನು ಸಿಂಚನ ಮಾಡುವೆ. ಅಷ್ಟರಿಂದ ಅವನು ಭಕ್ತನಾದ ನನ್ನ ಮೇಲೆ ಪುಷ್ಟನಾಗಲಿ. ಅಸ್ಯ ಧಾಮ ಆತನ ತೇಜಸ್ಸು ಘೃತಂ ಉದ್ದೀಪ್ತವಾದುದು. ವೃಷಭ ಬಯಸಿದ್ದನ್ನು ವರ್ಷಿಸುವ (ಕರುಣಿಸುವ) ಹೇ ಭಗವನ್! ಸ್ವಾಹಾಕೃತಂ ಹವ್ಯಂ ಪೂಜ್ಯ ಬುದ್ಧಿಯಿಂದ ಸಮರ್ಪಿಸಿದ ಹವಿಸ್ಸನ್ನು ಅಲ್ಪವಾಗಿದ್ದರೂ ವಕ್ಷಿ- ಸ್ವೀಕರಿಸುವಿ. ಅನುಷ್ವಧಂ ಪ್ರತಿಯೊಂದು ಆಹುತಿಗೆ ಮಾದಯಸ್ವ- ಸಂತೋಷಗೊಳ್ಳು. ಆವಹ ನಮಗೂ ಸಂತಸವನ್ನು ತಾ.''

೪. [20]ಮಧುವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ

---

ಸ್ಥಾನಾರ್ಥಃ । ಘೃತದೇವಸ್ಯ ಶ್ರೀಕರಸ್ಯ ಘೃತಂ ಸ್ಥಾನಮ್ । ಯದ್ವಾ 'ದಿವ್ಯಪಯೋಘೃತಾದಿಕಂ' ಕ್ಷೀರಸಾಗರಂ ಆಧಿಕ್ಯಾತ್ ಘೃತಮಿತ್ಯುಚ್ಯತೇ । ತದಸ್ಯ ಸ್ಥಾನಮ್ । 'ಮಿಹಸೇಚನೇ'। ಘೃತಸ್ಥಂ ದೇವಂ ಮಂತ್ರೋಽಯಮುಪಶ್ಲೋಕಯತಿ । ಸ ಏವ ಶ್ರಿಯಂ ತನೋತೀತಿ ಶ್ರಿತಃ ಅಪಿ । 'ಘೃ ಕ್ಷರಣದೀಪ್ತ್ಯೋಃ' ಇತ್ಯತಃ ಘೃತಂ ದೀಪ್ತಮ್ । ಧಾಮ ತೇಜಃ । ಸ್ವಾಹಾ ಪೂಜ್ಯಾರ್ಥೋಽಪಿ । ಸು ಪೂಜನಶಬ್ದ್ಯೋಃ ಆಹಾ ಆಹ್ವಾನಂ ಸ್ವಾಹಾ । ಪೂಜನಮಿತಿ ಯಾವತ್ । ಸ್ವಧಾ ಸ್ವಧಾ ಅನುಷ್ವಧಂ ಪ್ರತ್ಯಾಹುತಿ । ಮಾದಯಸ್ವ ಸ್ವಾರ್ಥೇ ಣಿಚ್ ।

೨೦ ಬ್ರ.ವ್ಯಾಖ್ಯಾ- ಋತಂ ವಿಷ್ಣುಂ ಆತ್ಮನಃ ಇಚ್ಛತಿ ಸ್ವೀಯಸರ್ವಸ್ವದಾನೇನ ಇತಿ ವಿಷ್ಣುಕಾಮೋ ಭಕ್ತಃ ಋತಾಯನ್ । ''ಸುಪ ಆತ್ಮನಃ ಕ್ಯಚ್'' (೩-೧-೮) ಇತಿ ಕ್ಯಚ್। ''ನ ಛಂದಸ್ಯಪುತ್ರಸ್ಯ'' (೭-೪-೩೫) ಇತಿ ನಿಷೇಧಾತ್ ''ಕ್ಯಚಿ ಚ'' (೭-೪-೩೩) ಇತಿ

ಸಂತ್ವೋಷಧೀಃ। ಮಧು ನಕ್ತಮುತೋಷಸೋ ಮಧುಮತ್ ಪಾರ್ಥಿವಂ ರಜಃ। ಮಧು ದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾಗ್‌ಂ ಅಸ್ತು ಸೂರ್ಯಃ। ಮಾಧ್ವೀರ್ಗಾವೋ ಭವಂತು ನಃ ॥ (ಋ.೧-೯೦-೬/೭/೮)

ಅನ್ವಯ ಃ- ಋತಾಯತೇ ವಾತಾಃ ಸಿಂಧವಃ ಮಧು ಕ್ಷರಂತಿ. ಓಷಧೀಃ ನಃ ಮಾಧ್ವೀಃ ಸಂತು. ನಕ್ತಂ ಉತ ಉಷಸಃ ಮಧು (ದದತು ಅಥವಾ ಭವಂತು). ಪಾರ್ಥಿವಂ ರಜಃ ಮಧುಮತ್ (ಭವತು.) ನಃ ಪಿತಾ ದ್ಯೌಃ ಮಧು ಅಸ್ತು. ವನಸ್ಪತಿಃ ನಃ ಮಧುಮಾನ್ ಅಸ್ತು. ಸೂರ್ಯಃ ಮಧುಮಾನ್ ಅಸ್ತು. ಗಾವಃ ನಃ ಮಾಧ್ವೀಃ ಭವಂತು.

ನಮ್ಮ ತುಂಬ ಪ್ರೀತಿಯವರಿಗೆ ನಾವು ತೀರ ಮೆಚ್ಚಿನ ಪದಾರ್ಥವನ್ನು ಕೊಡುತ್ತೇವೆ. ಸುಖ ನಮಗೆ ತೀರ ಮೆಚ್ಚಿನದು. ಸಿಹಿಯೇ ಸುಖದ ಸಂಕೇತ. ಸಿಹಿ ಮಧುವೇ ಸುಖದ ಹಿರಿಯ ಸಂಕೇತ.

ಕಾರಣ, ದೇವರನ್ನು ಮಿಗಿಲಾಗಿ ಪ್ರೀತಿಸುವವನು ದೇವರಿಗೆ ತನ್ನ ಸುಖವನ್ನು ಅರ್ಪಿಸುವನು. ಮಧು ಸಮರ್ಪಣೆ ಇದಕ್ಕೆ ಪ್ರತೀಕ. ಹೀಗೆ ದೇವರನ್ನು ಪ್ರೀತಿಸಿದವನಿಗೆ ಗಾಳಿ, ಕಡಲು, ಓಷಧಿ-ವನಸ್ಪತಿಗಳು, ಹಗಲು-ರಾತ್ರಿ, ಭೂಮಿಯ ಕಣ, ಸ್ವರ್ಗದ ದೇವತೆಗಳು, ಸೂರ್ಯ, ಗೋವುಗಳು (ಇದಕ್ಕೆ ಅನೇಕ ಅರ್ಥ) ಇಂಥ ಜಗವೆಲ್ಲ ಸುಖದಾಯಕ. ಈ ತತ್ತ್ವ ಈ ಮಂತ್ರದಲ್ಲಿ ಅಡಗಿದೆ.

''ಋತಾಯತೇ ಋತ-ಜ್ಞಾನರೂಪನಾದ, ಏಕಪ್ರಕಾರನಾಗಿರುವ, ವೇದವೇದ್ಯನಾದ. ಋತ ಎಂದರೆ ಧರ್ಮ. ಧರ್ಮನಿಯಾಮಕ, ಧರ್ಮಾಂತರ್ಯಾಮಿ ಯಾದುದರಿಂದ ದೇವರೂ ಋತ. ದೇವರನ್ನು ಪರಿಪರಿಯಿಂದ ಹಂಬಲಿಸಿ ಪ್ರೀತಿಸುವ ಭಕ್ತನಿಗೆ ಮತ್ತು ಧರ್ಮವನ್ನು ಇಚ್ಛಿಸುವವನಿಗೆ ವಾತಾಃ ಗಾಳಿ, ಸಿಂಧವಃ ಕಡಲು, ಮಧು ಕ್ಷರಂತಿ ಸುಖವನ್ನು ಸುರಿಯುತ್ತದೆ. ನಃ ಓಷಧೀಃ ಮಾಧ್ವೀಃ ಸಂತು ನಮಗೆ ಓಷಧಿಗಳು ಆನಂದಪ್ರದವಾಗಲಿ. ನಕ್ತಂ ಉತ ಉಷಸಃ ಮಧು ರಾತ್ರಿ ಮತ್ತು ಹಗಲುಗಳು ನಮಗೆ ಸಂತಸದಾಯಕವಾಗಲಿ. ಪಾರ್ಥಿವಂ ರಜಃ ಮಧುಮತ್ ಭೂಮಿಯ ಪ್ರತಿಯೊಂದು ಕಣ ನಮಗೆ ಆನಂದವನ್ನು

---

ಈತ್ವಂ ನ। ಛಾಂದಸತ್ವಾತ್ ದೀರ್ಘಸ್ತು ಭವತ್ಯೇವ। ''ಮಧ್ವಿತ್ಯಾನಂದ ಉದ್ದಿಷ್ಟಃ'' ಇತ್ಯುಕ್ತೇಃ ಮಧುಶಬ್ದಸ್ಯ ಸುಖಂ ವಾಽರ್ಥಃ। ''ಸುಖದಾ ಸರ್ವಭೂತಾನಾಂ ಪೃಥಿವೀ ಮಧುವದುಚ್ಯತೇ'' ಇತಿ ಬೃಹದ್ಭಾಷ್ಯಾತ್ ಸುಖಪ್ರದಂ ಇತಿ ವಾಽರ್ಥಃ। ''ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ''।

ಕೊಡಲಿ. ನಃ ಪಿತಾ ನಮ್ಮನ್ನು ಪಾಲಿಸುವ, ದ್ಯೌಃ ಅಮರಲೋಕ (ಅಮರರು) ಮಧು ಅಸ್ತು ಸುಖಪ್ರದವಾಗಲಿ. ವನಸ್ಪತಿಃ ನಃ ಮಧುಮಾನ್ ವನಸ್ಪತಿಯು ನಮಗೆ ತೃಪ್ತಿಯನ್ನು ನೀಡಲಿ. ಸೂರ್ಯಃ ಮಧುಮಾನ್ ಅಸ್ತು ಸೂರ್ಯನು ಸಂತಸ ಸುರಿಯಲಿ. ನಃ ಗಾವಃ ಮಾಧ್ವೀಃ ಭವಂತು ಹಸುಗಳು ನಮಗೆ ಆನಂದಪ್ರದವಾಗಲಿ.''

೪. ಓಂ [೨೧]ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತುನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಂ ಅದಾಭ್ಯಃ ॥ (ಋ.೯-೮೫-೬)

೨೧ ಬ್ರ.ವ್ಯಾಖ್ಯಾ- ದಿವ್ಯಾಯ ಜನ್ಮನೇ- ದಿವ್ಯಜನ್ಮವತೇ ಇತಿ ಯಾವತ್ । ಜಾಯತೇ ಇತಿ ಜನ್ಮಾ । ಜನಧಾತೋಃ ಕರ್ತರಿ ಮನಿನ್ । ವಿಷ್ಣುನಾಮಾನಂ ಮಂತ್ರೋಽಯಂ ಉಪಶ್ಲೋಕಯತಿ । ''ವಾಸುದೇವಾತ್ । ಸತ್ತಾ ತ್ವಿಕ್ರಿಯಾಯಾಂ ಸ ಬಭೂವ ತಸ್ಮಾತ್ ಸ ವಿಷ್ಣುನಾಮ್ನೈವ ನಿರಂತರೋಽಪಿ'' । ಇತಿ (೩-೨೦) ತಾತ್ಪರ್ಯನಿರ್ಣಯಾತ್ ಸ್ವಸ್ಮಾದೇವ ಸ್ವಸ್ಯ ಜನ್ಮ ದಿವ್ಯಮ್ । ಹವೀತುಃ ಆಹ್ವಾನಮ್ । ಶೋಭನಂ ಸರ್ವೋತ್ಕೃಷ್ಟಂ ಆಹ್ವಾನಂ ಯೇನ ತತ್ । ಸುಹವೀತು ನಾಮ ಯಸ್ಯ ಸಃ ''ವಿಷ್ಣುನಾಮೋದಿತೋ ಯೋಽರ್ಥಃತದ್ವ್ಯಾಖ್ಯಾಽನ್ಯದ್ವಚೋಽಖಿಲಮ್''।''ಕಿಮನ್ಯಾಧ್ಯಯನಾದ್ಭವೇತ್'' ಇತ್ಯಾದೇಃ ವಿಷ್ಣುನಾಮ ಸುಹವೀತು ಸರ್ವೋತ್ಕೃಷ್ಟಮಾಹ್ವಾನಮ್ । ವಿಷ್ಣುರೇವ ಹಿ ಮಿತ್ರಮ್ । ಮಿನೋತಿ ಉತ್ಪಾದಯತಿ, ತ್ರಾತಿ, ರಕ್ಷತಿ ಇತಿ ಮಿತ್ರಮ್ । ''ವಿಷ್ಣುನಾಮಾ ಶ್ರಿಯಮಾಪ ಸೃಷ್ಟಯೇ । ಸುಷಾವ ಸೈವಾಂಡಮ್'' ಇತಿ (೩-೨೩) ತಾತ್ಪರ್ಯ-ನಿರ್ಣಯೇನ ''ಬ್ರಹ್ಮವಿಷ್ಣ್ವೀಶರೂಪಾಣಿ ತ್ರೀಣಿ ವಿಷ್ಣೋಃ'' ಇತಿ ಭಾಗವತ-ತಾತ್ಪರ್ಯಾನುಸಾರೇಣ ಚ ಸಿದ್ಧಮಿದಮ್ । ''ಮಾನಂ ಜ್ಞಾನಂ ಲಯಶ್ಚೈವ ಮರ್ಯಾದಾ ಚೈವ ಕಥ್ಯತೇ । ಉತ್ಪಾದನಂ ಚ'' । ಇತಿ ಬೃಹದ್ಭಾಷ್ಯೋಕ್ತೇಃ । ವಿಷ್ಣುಶಬ್ದೇ ಷಣಕಾರೌ । ''ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ'' । ಇತ್ಯುಪನಿಷದರ್ಥಮಾಹ । ತತ್ರ ಣಾರ್ಥಂ ಬಲಂ ವಾಯುಶಬ್ದ ಆಹ । ವಂ ಬಂ ಬಲಮ್ । ತಥಾ ಚ ಣಃ ಬಲರೂಪಃ ವಾಯುಶಬ್ದಾರ್ಥೋಽಪಿ ಸ ಏವ । ಷಕಾರಾರ್ಥಂ ಪ್ರಾಣಶಬ್ದಿತಂ ಪ್ರಣೇತೃತ್ವಂ ವರುಣಶಬ್ದ ಆಹ । ಪ್ರ- ಪ್ರಕೃಷ್ಟಾನ್ ವರಾನ್ ರಮಾಬ್ರಹ್ಮಾದೀನ್ ಪ್ರ- ಪ್ರಕರ್ಷೇಣ ವರಂ ಯಥಾ ಸ್ಯಾತ್ ತಥಾ ಪ್ರ ಪ್ರಕರ್ಷಂ ಉ ಉತ್ ಉತ್ಕರ್ಷಂ ನಯತಿ ರಮಾಂ ನಿತ್ಯಮ್, ಬ್ರಹ್ಮಾದೀನ್ ಕ್ರಮಶಃ । ಸ ಏವ ಪ್ರಾಣಃ ವರುಣಶ್ಚ । ಷಕಾರಾರ್ಥಂ ಆತ್ಮತ್ವಂ ದೇಶತೋ ವ್ಯಾಪ್ತತ್ವಂ ಕಾಲತೋ ನಿತ್ಯತ್ವಂ ಗುಣೈಃ ಪೂರ್ಣತ್ವಂ ಚ ಬೃಹಸ್ಪತಿಶಬ್ದಃ ಆಹ । ಬೃಹನ್ ವ್ಯಾಪ್ತಃ ನಿತ್ಯಃ ಪೂರ್ಣಶ್ಚ । ಆತ್ಮತ್ವಂ ನಾಮ ಸ್ವಾಮಿತ್ವಮಪಿ ತದಾಹ ಪತಿಶಬ್ದಃ ।

ಅನ್ವಯ :- ದಿವ್ಯಾಯ ಜನ್ಮನೇ ಸ್ವಾದುಃ ಪವಸ್ವ. ಸುಹವೀತುನಾಮ್ನೇ ಇಂದ್ರಾಯ ಸ್ವಾದುಃ ಪವಸ್ವ. ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾನ್ ಅದಾಭ್ಯಃ ಸ್ವಾದುಃ ಪವಸ್ವ.

''ದಿವ್ಯಾಯ ಜನ್ಮನೇ (ತನ್ನ ವಾಸುದೇವ ರೂಪದಿಂದ ತಾನೇ ವಿಷ್ಣುವಾಗಿ ಜನಿಸಿರುವ ಕಾರಣ) ಅಲೌಕಿಕವಾಗಿ, ದಿವ್ಯವಾಗಿ ಹುಟ್ಟಿದ ವಿಷ್ಣುವಿಗೆ, ಸ್ವಾದು ಪವಸ್ವ (ಸೋಮರಸವು, ಪ್ರಸ್ತುತ) ಸಕ್ಕರೆಯು ಸವಿಯಾಗಿ ರಸ ಸುರಿಸಲಿ. ಇಂದ್ರಾಯ ಅವನೇ ಎಲ್ಲರೊಡೆಯ. ಸುಹವೀತು ನಾಮ್ನೇ ಸರ್ವೋತ್ತಮ ನಾಮಧಾರಿ. ಮಿತ್ರಾಯ ವಿಶ್ವವನ್ನು ಹೆತ್ತು ರಕ್ಷಿಸುವವ. ವರುಣಾಯ ಉನ್ನತರಿಗೂ ಉನ್ ನಾಯಕನಾದವ. ವಾಯವೇ ಅತುಲ ಬಲಶಾಲಿಯಾದವ. ಬೃಹಸ್ಪತಯೇ ದೇಶ ಕಾಲ ಗುಣಗಳಿಂದ ಬೃಹತ್ ಆದವ, ಹಾಗೂ ಎಲ್ಲರೊಡೆಯನಾದವ. ಈತನಿಗೆ ಮಧುಮಾನ್ ಸವಿಯಾದ, ಅದಾಭ್ಯಃ (ಹಿಂಸಿತವಾಗದ) ಕೊಳೆಯಿಂದ ದೂಷಿತವಾಗದ ನಮ್ಮ ಮನದ ಸಿಹಿ ರಸವು ಹರಿದು ತೃಪ್ತಿಪಡಿಸಲಿ.''

೫. ಓಂ [೨೨]ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವಂಹಸಃ ॥ (ಋ.೧೦-೯೭-೧೫)

ಅಭಿಪ್ರಾಯ ಹಣ್ಣು ಕೊಡುವ ಕೊಡದಿರುವ, ಹೂ ಆಗುವ ಆಗದಿರುವ ಎಲ್ಲ ಓಷಧಿ ವನಸ್ಪತಿಗಳು ದೇವರಿಗೆ ಸಮರ್ಪಿತವಾದುದರಿಂದ ಸಂತುಷ್ಟರಾಗಿ ನಮ್ಮ ಪಾಪಗಳನ್ನು ಕಳೆಯಲಿ.

ಅನ್ವಯ :- ಯಾಃ ಫಲಿನೀಃ ಅಫಲಾಃ ಯಾಶ್ಚ ಪುಷ್ಪಿಣೀಃ ಅಪುಷ್ಪಾಃ ಬೃಹಸ್ಪತಿಃ ಪ್ರಸೂತಾಃ ನಃ ಅಂಹಸಃ ಮುಂಚಂತು.

''ಯಾಃ ಫಲಿನೀಃ ಹಣ್ಣು ಕೊಡುವ ಅಫಲಾಃ ಹಣ್ಣು ಕೊಡದಿರುವ (ಕಾಯಿ,ಬೀಜಗಳನ್ನು ಮಾತ್ರ ಕೊಡುವ) ಯಾಶ್ಚ ಪುಷ್ಪಿಣೀಃ ಹೂ ಬಿಡುವ

೨೨ ಬ್ರ.ವ್ಯಾಖ್ಯಾ- ಯೇಷಾಂ ನ ಸಂತಿ ಪುಷ್ಪಾಣಿ ಪ್ರಶಸ್ಯಾನ್ಯರ್ಚನೇ ಹರೇಃ । ಪಲ್ಲವಾನ್ಯಪಿ ತೇಷಾಂ ಸ್ಯುಃ ಶಸ್ತಾನ್ಯರ್ಚಾವಿದೌ ಹರೇಃ ॥ (ಪೂಜಾಕಲ್ಪಲತಾ)

ಯೋಗ್ಯೇ ಸ್ವೇಷಾಂ ಸ್ವಾಭಿಮನ್ಯಮಾನಾನಾಂ ವಾ ವಿನಿಯೋಗೇನ ದೇವತಾಸ್ತುಷ್ಯಂತಿ । 'ನಹ್ಯಚೇತನಕಂ ಕಿಂಚಿತ್ ಫಲದಂ ಸ್ಯಾತ್ ಕದಾಚನ । ಔಷಧಾದಿಷು ಚೈತಸ್ಮಾತ್ ದೇವಾ ಏವ ವರಪ್ರದಾಃ ॥ ಔಷಧಾದಿಸ್ಥಿತಾ ದೇವಾಃ ತೇಽಜ್ಞೇ ದೃಷ್ಟಫಲಪ್ರದಾಃ । ಜ್ಞಾನಿನ್ಯದೃಷ್ಟದಾಶ್ಚ ಸ್ಯುಃ ನಾದ್ಯೈವಂ ಕಿಂಚಿದಿಷ್ಯತೇ ॥ 'ಇತಿ ಛಾಂದೋಗ್ಯಭಾಷ್ಯೇ ।

**ಅಪುಷ್ಪಾಃ** ಹೂ ಬಿಡದಿರುವ (ಅರಳದ ಹೂಗಳನ್ನು ಅರ್ಥಾತ್ ಮೊಗ್ಗೆಗಳನ್ನು ಮಾತ್ರ ಬಿಡುವ) **ಬೃಹಸ್ಪತಿಃ ಪ್ರಸೂತಾಃ** ಬೃಹಸ್ಪತಿಯಿಂದ ಹುಟ್ಟಿದ ಎಲ್ಲ ಓಷಧಿ ದೇವತೆಗಳು (ಇದ್ದರೆ ಹಣ್ಣು, ಇಲ್ಲದಿದ್ದರೆ ಕಾಯಿ, ಬೀಜ, ಇದ್ದರೆ ಹೂ, ಇಲ್ಲದಿದ್ದರೇ ಮೊಗ್ಗೆ, ಎಲೆ, ಚಿಗುರು ಮುಂತಾದವನ್ನು ಭಗವಂತನ ಪೂಜೆಗೆ ಬಳಸುವದರಿಂದ) **ನಃ ಅಂಹಸಃ ಮುಂಚಂತು** ನಮ್ಮನ್ನು ಪಾಪದಿಂದ ಮುಕ್ತರನ್ನು ಮಾಡಲಿ.''

ಬಳಿಕ ಈ ಮಂತ್ರವನ್ನು ಪಠಿಸುತ್ತಾ ಹಾಲು, ಮೊಸರು, ತುಪ್ಪ, ಜೇನು, ಶರ್ಕರ, ಇವುಗಳ ಅಭಿಷೇಕಗಳನ್ನು ಮಾಡಬೇಕು.

ನೀರಿನ ಅಭಿಷೇಕದಿಂದ ಭಗವಂತ ಹತ್ತು ಅಪರಾಧಗಳನ್ನು ಕ್ಷಮಿಸುತ್ತಾನೆ.

ಕ್ಷೀರಾಭಿಷೇಕದಿಂದ ನೂರು ಅಪರಾಧಗಳನ್ನು ಕ್ಷಮಿಸುತ್ತಾನೆ.

ಮೊಸರಿನ ಅಭಿಷೇಕದಿಂದ ಸಾವಿರ ಕ್ಷಮಿಸುತ್ತಾನೆ.

ತುಪ್ಪದಿಂದ ಹತ್ತುಸಾವಿರ ಕ್ಷಮಿಸುತ್ತಾನೆ.

ಜೇನಿನಿಂದ ಲಕ್ಷ ಕ್ಷಮಿಸುತ್ತಾನೆ.

ಕಬ್ಬಿನಹಾಲಿನಿಂದ ಹತ್ತು ಲಕ್ಷ ಕ್ಷಮಿಸುತ್ತಾನೆ.

ತೆಂಗಿನ ನೀರಿನಿಂದ ಕೋಟಿ ಕ್ಷಮಿಸುತ್ತಾನೆ.

ಸುಗಂಧ ಸ್ವಾದೂದಕದಿಂದ ಅನಂತ ಅಪರಾಧಗಳನ್ನು ಕ್ಷಮಿಸುವ ಎಂದು ಶಾಸ್ತ್ರವಚನ.

ಪ್ರತಿಯೊಂದು ಅಭಿಷೇಕವಾದ ಮೇಲೆ ಶುದ್ಧೋದಕದಿಂದ ಅಭಿಷೇಕ ಮಾಡಿ, ವಸ್ತ್ರ ಆಭರಣ, ಯಜ್ಞೋಪವೀತ, ಆಸನ, ಗಂಧ, ಪುಷ್ಪ, ಧೂಪ, ದೀಪ, ಫಲ ನೈವೇದ್ಯ, ನಮಸ್ಕಾರಗಳೆಂಬ ಹತ್ತು ಉಪಚಾರಗಳನ್ನು ಸಮರ್ಪಿಸಬೇಕು.

ಇದರ ಜೊತೆಗೆ ಅನುಸಂಧಾನ. ಭಗವಂತನಿಗೆ ನಾವು ಎರೆಯುವ ಹಾಲು ಅಪರೂಪವಲ್ಲ. ನಾವು ಕೊಡುವ ಹಾಲಿಗಾಗಿ ಕಾದು ಕೂತಿರುವ ಎಂದು ತಿಳಿಯುವ ಅಗತ್ಯವಿಲ್ಲ. ಈ ಹಾಲು ಎರೆದು ನಾವು ಅವನಿಗೆ ಬಹಳ ದೊಡ್ಡ ಉಪಕಾರವನ್ನು ಮಾಡುತ್ತ ಇಲ್ಲ.

ಏಕೆಂದರೆ ಹಾಲುಗಡಲಿನಲ್ಲಿ ಎಂದೆಂದಿಗೂ ವಿಹರಿಸುವವನಾತ. ಮೇಲಾಗಿ ನಿತ್ಯದಲ್ಲೂ ಆಪ್ತಕಾಮ. ಆದರೂ ನಾವು ಸಲ್ಲಿಸುವ ಈ ಪದಾರ್ಥಗಳನ್ನು ಪರಮ ಸ್ನೇಹದಿಂದ ಸ್ವೀಕರಿಸುತ್ತಾನೆ. ಇದೇ ನಮ್ಮ ಮಹಾಭಾಗ್ಯವೆಂದು ತಿಳಿಯಬೇಕು.

ಅಲ್ಲದೇ ಹಸು ತಿನ್ನುವ ನಾನಾ ಬಗೆಯ ತೊಪ್ಪಲು ಹಾಗೂ ಕಾಳು ಕಡಿಗಳೆಲ್ಲಿ? ಅದರಿಂದ ನಿಷ್ಪನ್ನವಾಗುವ ಪೌಷ್ಟಿಕ ಹಾಲೆಲ್ಲಿ ? ಇದೆಷ್ಟು ಅದ್ಭುತ ! ಇದಕ್ಕೆಲ್ಲ ಪ್ರಾಣಪತಿ ಪರಮೇಶ್ವರನ ಕೃಪೆಯೇ ಕಾರಣವಲ್ಲವೇ ?

ಜೇನಿನ ಬಗೆಗೂ ಹೀಗೆಯೇ. ದುಂಬಿ ಕುಸುಮಪ್ರೇಮಿ. ಹೂವನ್ನು ಹಿಂಡುವದಿಲ್ಲ, ಕೆಡಿಸುವದಿಲ್ಲ, ಬಾಡಿಸುವದೂ ಇಲ್ಲ.

ಆದರೆ ಯಾರ ಕೈಗೂ ಸುಲಭವಾಗಿ ಸಿಗದಷ್ಟು ಸೂಕ್ಷ್ಮವಾಗಿರುವ ಮಕರಂದವನ್ನು ತನ್ನ ನಿರ್ಮಲ ಮುಖದಿಂದ ಹೊರಸೆಳೆಯುತ್ತದೆ. ಜೋಪಾನವಾಗಿ ತನ್ನ ಅಂಗದಲ್ಲಿಡುತ್ತದೆ. ಬಳಿಕ ತಾನು ಕಟ್ಟಿದ ಹುಟ್ಟಿನಲ್ಲಿ ಭದ್ರವಾಗಿ ಕಾದಿರಿಸುತ್ತದೆ.

ಇದು ಎಷ್ಟು ಆಶ್ಚರ್ಯ ! ಇದೆಲ್ಲ ದೇವರ ಲೀಲೆಯಲ್ಲವೇ ?

ಈ ಮೇಲೆ ಹೇಳಿದ ಅನುಸಂಧಾನಗಳನ್ನೆಲ್ಲ ಮಾಡುತ್ತಾ ದೇವರಿಗೆ ಅಭಿಷೇಕಗೈಯಬೇಕು. ಹಾಲಿನಲ್ಲಿ ಹಾಲಿನ ರೂಪದಿಂದ, ಮೊಸರಿನಲ್ಲಿ ಮೊಸರಿನ, ಜೇನಿನಲ್ಲಿ ಜೇನಿನ, ತುಪ್ಪದಲ್ಲಿ ತುಪ್ಪದ, ಹಣ್ಣಿನಲ್ಲಿ ಹಣ್ಣಿನ ರೂಪಗಳಿಂದಿರುವ ಭಗವಂತನು ನಾವು (ನಮ್ಮಂತರ್ಯಾಮಿ) ಆ ಆ ಪದಾರ್ಥಗಳನ್ನು ಅಭಿಷೇಕ ಮಾಡುತ್ತಿರುವಾಗ ಪ್ರತಿಮೆಯಲ್ಲಿರುವ ದೇವರಿಗೆ ಅಭಿಷೇಕವಾಗಿ ಸುರಿಯುತ್ತಾನೆ. ಇದು ಸ್ವಾಖ್ಯ ಕ್ಷೀರಾಭಿಷೇಕ.

## ಶುದ್ಧಾಭಿಷೇಕ

ಇದಾದ ಬಳಿಕ ಶುದ್ಧೋದಕಸ್ನಾನವನ್ನು ಕಲಶಜಲದಿಂದ ತುಂಬಿದ ಶಂಖದಿಂದಲೇ ಮಾಡಿಸಬೇಕು.

ಅಭಿಷೇಕಕಾಲದಲ್ಲಿ ಘಂಟಾನಾದವನ್ನು ತಾನು ಮಾಡಬೇಕು. ಅಥವಾ ಇನ್ನೊಬ್ಬರಿಂದ ಮಾಡಿಸಬೇಕು.

ಅಭಿಷೇಕಕಾಲದಲ್ಲಿ ಪುರುಷಸೂಕ್ತ (ಋ.೧೦.೯೦), ವಿಷ್ಣುಸೂಕ್ತ (ಋ.೧.೨೨.೧೬-೨೧), ಘರ್ಮಸೂಕ್ತ (ಋ.೧೦.೧೧೪), ಸಂಪೂರ್ಣ ಪವಮಾನ, ಸಾಧ್ಯವಿಲ್ಲದಾಗ 'ಪವಸ್ವೇ'ತಿ ವರ್ಗತ್ರಯ (''ಪವಸ್ವ ಸೋಮ ಮಂದಯನ್'' (ಋ.೯.೬೭.೧೬) ಎಂದಾರಂಭಿಸಿ ''ಕ್ಷೀರಂಸರ್ಪಿರ್ಮಧೂದಕಮ್'' (ಋ.೯.೬೭.೩೨) ಎಂಬ ಮಂತ್ರದ ವರೆಗಿನ ಹದಿನೇಳು ಮಂತ್ರಗಳು), 'ಯ ಇಂದೋಃ

ಪವಮಾನಸ್ಯ' ಎಂಬ (ಋ.೯.೧೧೪.೧-೪) ಒಂದುವರ್ಗ, ಸಮುದ್ರಸೂಕ್ತ (ಋ.೪.೫೮), 'ಜಿತಂ ತೇ' ಸ್ತೋತ್ರ, 'ಸುವರ್ಣಂ ಘರ್ಮ' ಎಂಬ ಅನುವಾಕ (ತೈತ್ತಿರೀಯಾರಣ್ಯಕ ಚಿತ್ಯುಪನಿಷದ್ಗತ), ಆತ್ಮಾಹರ್ಷಸೂಕ್ತ (ಋ.೧೦.೧೭೩), ವಿಶ್ವಕರ್ಮಸೂಕ್ತ (ಋ.೧೦.೮೧), ಅಣುಭಾಷ್ಯ, ನಾರಾಯಣವರ್ಮ, ಬ್ರಹ್ಮಸೂತ್ರಗಳು, ಅಷ್ಟಮಹಾಮಂತ್ರಗಳನ್ನು ಪಠಿಸಬೇಕು।

ಹೀಗೆ ಸ್ನಾನಕುಂಭದಿಂದ ಅಭಿಷೇಕ.

ಬಳಿಕ ಪೂರ್ಣಕುಂಭವನ್ನೇ ಎತ್ತಿ 'ಓಂ ಅಂ ಅಜಾಯ ನಮಃ' ಎಂದು ಮೊದಲು ಮಾಡಿ 'ಓಂ ಶಿಂಶುಮಾರಾಯ ನಮಃ' ಎನ್ನುವದರ ವರೆಗೆ ಎಲ್ಲ ಕಲಶದೇವತೆಗಳ ನಾಮವನ್ನುಚ್ಚರಿಸಿ ಅಭಿಷೇಕ ಮಾಡಬೇಕು.

ಕಲಶಗಳಲ್ಲಿರುವ ಅಜಾದಿ ಭಗವದ್ರೂಪಗಳು ಪ್ರತಿಮೆಯಲ್ಲಿರುವ ಬಿಂಬ-ರೂಪದೊಡನೆ ಐಕ್ಯವನ್ನು ಹೊಂದುತ್ತಿರುವರು ಎಂದು ಅನುಸಂಧಾನಿಸಬೇಕು.

ಈ ಹಿಂದೆ ತಿಳಿದಂತೆ ಚಿದ್ಘನ, ಆನಂದಮಯ, ಗುಣಮಯನಾದ ಭಗವಂತ ಪ್ರತಿಮೆಯಲ್ಲಿ ಇರುವ. ಆತನೇ ಅಭಿಷೇಕಜಲದಲ್ಲೂ ಇರುವ.

ಇಲ್ಲಿ ಸ್ವಲ್ಪ ಅನುಸಂಧಾನ.

ಮಹಾಪ್ರಳಯಕಾಲದ ಜಲವು ಅನಂತ ಅಪರಿಚ್ಛಿನ್ನ. ಅದಕ್ಕೆ ಒಡೆಯ ದೇವರು. ಸಹಸ್ರಕೋಟಿಯೋಜನವಿಸ್ತೀರ್ಣವಾದ ಆವರಣರೂಪವಾದ ಜಲತತ್ವಕ್ಕೆ ಒಡೆಯನೂ ದೇವರೇ. ಬ್ರಹ್ಮಾಂಡದ ಒಳಗಿರುವ ಘನೋದಕ ಮತ್ತು ಹದಿನಾಲ್ಕು ಲೋಕಗಳಲ್ಲಿರುವ ವಿಧ ವಿಧ ಜಲನಿಧಿಗಳಿಗೂ ದೇವರೇ ಒಡೆಯ.

ಇಂಥ ದೇವರಿಗೆ ಒಂದು ಕಲಶದ ನೀರಿನಿಂದ ಅಭಿಷೇಕ ಮಾಡುವುದು ವ್ಯರ್ಥವೇ ಸರಿ ಎಂದು ತೋರುತ್ತದೆ. ಆದರೂ ಭಕ್ತವತ್ಸಲನಾದ ಭಗವಂತನು ಭಕ್ತರು ಭಕ್ತಿಯಿಂದ ಅರ್ಪಿಸುವ ಜಲಾಭಿಷೇಕವನ್ನು ಪ್ರೀತಿಯಿಂದ ಸ್ವೀಕರಿಸಿ ಅನುಗ್ರಹಿಸುವ.

ಜಡಜಲದಲ್ಲೂ ಅದಕ್ಕಭಿಮಾನಿಗಳಾದ ಗಂಗಾದಿ ದೇವತೆಗಳಲ್ಲೂ ಬುಧ, ವರುಣ, ಮುಖ್ಯಪ್ರಾಣ, ರಮಾದೇವಿಯರಲ್ಲೂ ಜಲರೂಪದಿಂದ ಇರುವ ಭಗವಂತನು ಸ್ವಾಖ್ಯ ಚಿನ್ಮಯ ಜಲರೂಪದಿಂದ ಅನಂತಾನಂದರೂಪನಾದ, ಚಿನ್ಮಯನಾದ ಆಪ್ತಕಾಮನಾದ, ತನ್ನನ್ನು ತಾನೇ ಲೀಲಯಾ ಅಭಿಷೇಕ ಮಾಡಿಕೊಳ್ಳುತ್ತಾನೆ.

ನೀರು 'ಅಸ್ತಿ'ಯಾದುದು, ದ್ರವ್ಯವಾದುದು, ಜಲವಾದುದು ದೇವರಿಂದ. ಇದಕ್ಕೆ ಮೇಲಾಗಿ ನೀರಿನಲ್ಲಿಯ ರಸಾದಿ ಗುಣಗಳಿಗೆ ಕಾರಣನಾದವನೂ ದೇವರು.

ರಸಾದಿಗುಣಗಳು ನೀರಿನಲ್ಲಿಯ ಉಳಿದೆಲ್ಲ ಗುಣಗಳಿಗಿಂತ ಶ್ರೇಷ್ಠ ಗುಣ. ತೃಪ್ತಿ ಪಡಿಸುವ ಗುಣ. ಅಂತೆಯೇ ಅದನ್ನು ಸಾರಗುಣವೆನ್ನುವರು.

ರಸಾದಿ ಗುಣಗಳು ಶ್ರೇಷ್ಠ 'ಸಾರ' ವಾಗಿರುವದಕ್ಕೂ ದೇವರೇ ಮೂಲ.

ಇಂಥ ದೇವರು ತನ್ನ ಅಸಂಖ್ಯಗುಣಗಳಿಂದಾಗಿ ಅನಂತಾನಂದಮಯ. ಅಂತೆಯೇ ಆಪ್ತಕಾಮ. ಕಾರಣ, ನಮ್ಮಿಂದ ಅವನಿಗೇನೂ ಬೇಕಿಲ್ಲ. ಮಾತ್ರವಲ್ಲ, ಸಿರಿ, ವಿಧಿ ಮುಂತಾದ ಯಾರಿಂದಲೂ.

ಆದುದರಿಂದಲೇ ದೇವರಿಗೆ ಯಾವ ವ್ಯಕ್ತಿ ಹಾಗೂ ವಸ್ತುವಿನ ಬಗೆಗೂ ಆದರ ಇರುವ ಅಗತ್ಯ ಇಲ್ಲ.

ಆದರೂ ಕರುಣಾಮಯ ಶ್ರೀಹರಿಯು ನನ್ನನ್ನು ಮಧ್ಯಸ್ಥನನ್ನಾಗಿ ಮಾಡಿ ಅರ್ಥಾತ್ ಸಿರಿ, ವಿಧಿ, ವಾಯುಗಳ ಮುಖಾಂತರ ಸ್ವಾಧೀನ ಕರ್ತೃತ್ವವನ್ನು ನನಗೆ ನೀಡಿ ಅಭಿಷೇಕ, ಪೂಜಾದಿ ಕರ್ಮಗಳನ್ನು ನನ್ನಿಂದ ಮಾಡಿಸುತ್ತಲಿಪ್ಪ.

ನನಗೆ ಕಿಂಚಿತ್ತಾದರೂ ಸ್ವಾತಂತ್ರ್ಯವಿಲ್ಲದಿರುವಾಗ ತಾನೇ ನನ್ನಿಂದ ಕರ್ಮವನ್ನು ಮಾಡಿಸಿ ಫಲವನ್ನು ದಯಪಾಲಿಸಿದ ಆತ ದಯಾಘನನೇ ಸರಿ, ಇತ್ಯಾದಿಯಾಗಿ ಚಿಂತಿಸಬೇಕು.

ಬಳಿಕ ನಾರಾಯಣ ಮಂತ್ರವನ್ನು ಜಪಿಸುತ್ತಾ ಬಟ್ಟೆಯಿಂದ ಪ್ರತಿಮೆಯನ್ನು ಒರಿಸಬೇಕು.

**ಓಂ [೨೩]ಅಭಿ ವಸ್ತ್ರಾಸುವಸನಾನ್ಯರ್ಷಾಭಿ ಧೇನೂಃ ಸುದುಘಾಃ ಪೂಯಮಾನಃ ।**
**ಅಭಿ ಚಂದ್ರಾ ಭರ್ತವೇ ನೋ ಹಿರಣ್ಯಾಽಭ್ಯಶ್ವಾನ್ ರಥಿನೋ ದೇವ ಸೋಮ ॥**
**(ಋಗ್ವೇದ ೯-೯೭-೫೦)**

ಈ ಮಂತ್ರದಿಂದ ಸಂಪುಟದಲ್ಲಿ ವಸ್ತ್ರವನ್ನು ಹಾಸಿ ಶಾಲಿಗ್ರಾಮ, ಚಕ್ರಾಂಕಿತಗಳನ್ನು ಅಲ್ಲಿ ಇಡಬೇಕು.

೨೩ ಬ್ರ.ವ್ಯಾಖ್ಯಾ - ಭವತೇ ಮೇ ವಸ್ತ್ರದಿತ್ಸಾ । ನಾಸ್ತಿ ಮೇ ಆತ್ಮತಂತ್ರಂ ವಸ್ತ್ರಮ್ । ಅತೋ ಮೇ ದೇಹಿ, ಮಯಾ ದಾಪಯ ಸ್ವಯಮೇವ ಸ್ವೀಕುರು । ಮಯಿ ದಯಸ್ವ ಇತ್ಯಭಿಪ್ರೈತಿ ಅತ್ರ ಮಂತ್ರಸಂಗಮಃ । 'ನಾವಿಂದಂ ಯಜ್ಞಸಂಭಾರಾನ್ ಪುರುಷಾವಯವಾದೃತೇ' ಇತಿ ವಿರಿಂಚಿರ್ವಿಚಚಕ್ಷೇ ।

**ಅನ್ವಯ :- ಹೇ ದೇವ ಸೋಮ ! ಪೂಯಮಾನಃ ತ್ವಂ ಸುವಸನಾನಿ ವಸ್ತ್ರಾ ನಃ ಅಭಿ ಅರ್ಷ. ಸುದುಘಾಃ ಧೇನೂಃ ನಃ ಅಭಿ ಅರ್ಷ. ನಃ ಭರ್ತವೇ ಚಂದ್ರಾ ಹಿರಣ್ಯಾ ಅಭಿ ಅರ್ಷ. ರಥಿನಃ ಅಶ್ವಾನ್ ನಃ ಅಭಿ ಅರ್ಷ.**

''ದೇವ ಸೋಮ ಸೋಮ ದೇವನೇ! ಪೂಯಮಾನಃ ತ್ವಂ ಇಡಿಯ ಜಗತ್ತನ್ನೇ ಶುದ್ಧಗೊಳಿಸುವ ನೀನು ಸುವಸನಾನಿ ಚೆಲುವಾಗಿ ಮೈ ಮುಚ್ಚುವ, ವಸ್ತ್ರಾ ಬಟ್ಟೆಗಳನ್ನು, ನಃ ಅಭಿ ಅರ್ಷ ನಮಗೆ ದಯಪಾಲಿಸು. ಸುದುಘಾಃ ಉತ್ತಮ ಹಾಲನ್ನು ಕರೆವ, ಧೇನೂಃ ಹಸುಗಳನ್ನು, ನಃ ಅಭಿ ಅರ್ಷ ನಮಗೆ ಕೊಡು. ನಃ ಭರ್ತವೇ ನಮ್ಮನ್ನು ಪೋಷಿಸಲು (ತೊಡಗಿದ ಓ ದೇವ) ಚಂದ್ರಾ ಆಹ್ಲಾದ ಕೊಡುವ, ಹಿರಣ್ಯಾ ಚಿನ್ನಗಳನ್ನು, ನಃ ಅಭಿ ಅರ್ಷ ನಮಗೆ ನೀಡು. ರಥಿನಃ ಅಶ್ವಾನ್ ರಥಕ್ಕೆ ಕಟ್ಟಲು ಯೋಗ್ಯವಾದ ಕುದುರೆಗಳನ್ನು ರಥಿನಃ ರಥಿಗಳನ್ನು ನಃ ಅಭಿ ಅರ್ಷ ನಮಗೆ ಕರುಣಿಸು.''

(ವಸ್ತ್ರಗಳನ್ನರ್ಪಿಸುವ ಕಾಲದಲ್ಲಿ ಬೇಡುವದೇಕೆ ? ಉತ್ತರ :- ದೇವರನ್ನು ಬೇಡದೇ ಇದ್ದರೆ, ಅವನಿಗೆ ಅರ್ಪಿಸಲು ನಮಗೆಲ್ಲಿ ಸ್ವಂತ ಬಟ್ಟೆಗಳು?

ಬೇಡಿ, ಪಡೆದು ಅರ್ಪಿಸೋಣ. ನಾನು ನಿನಗೆ ಕೊಡುವದಕ್ಕಾಗಿ ನೀನು ನನಗೆ ಕೊಡು ಎಂದು ನಿಷ್ಕಾಮರ ಮಂತ್ರಾಭಿಪ್ರಾಯ.

ನನಗೆ ಬಟ್ಟೆ ಬೇಕು, ಅದಕ್ಕೆಂದೇ ನಾನು ನಿನಗೆ ಕೊಡುವೆ. ಎಂದು ಸಕಾಮರ ಮಂತ್ರಾಭಿಪ್ರಾಯ)

'ಓ ದೇವ ಅಲಂಕಾರ ಪೀಠವನ್ನು ಕುರಿತು ಆಗಮಿಸು' ಎಂದು ವಿಜ್ಞಾಪಿಸಬೇಕು.

ಪಾದುಕೆಗಳನ್ನು ನೀಡಿ ಛತ್ರಚಾಮರಾದಿ ವೈಭವಗಳಿಂದ ಬರುತ್ತಿರುವ ಭಗವಂತನ ಕೈಹಿಡಿದು ಕರೆತಂದು ಕೂಡಿಸಬೇಕು.

ಸ್ನಾನಾಂಗ ಪಾದ್ಯವನ್ನೂ, ಆಚಮನವನ್ನೂ ಅರ್ಪಿಸಬೇಕು.

ಓಂ [೨೪]ಯುವಂ ವಸ್ತ್ರಾಣಿ ಪೀವಸಾ ವಸಾಥೇ ಯುವೋರಚ್ಛಿದ್ರಾ ಮಂತವೋ ಹ

---

೨೪ ಬ್ರ.ವ್ಯಾಖ್ಯಾ :- ಮಂತವಃ ಮಂತ್ರಣಾನಿ । ಋತಂ ಸತ್ಯವಚನಮ್, ಪುಣ್ಯಮ್, ಪುಣ್ಯಸಾಧನಂ ಕರ್ಮ ಚ । ಅಸತ್ಯವಚನಂ ಪಾಪಂ ಪಾಪಸಾಧನಂ ಕರ್ಮ ಚ ಅನೃತಮ್ । ಅವಾತಿರತಂ ತಿರಸ್ಕರಿಣೀಂ ಅಪಸಾರಯತಂ ಇತಿ ಯಾವತ್ । ಸಚ ಸಮವಾಯೇ ।

**ಸರ್ಗಾಃ । ಅವಾತಿರತಮನೃತಾನಿ ವಿಶ್ವ ಋತೇನ ಮಿತ್ರಾವರುಣಾ ಸಚೇಥೇ ॥**
(ಋ.೧-೧೫೨-೧)

ಈ ಮಂತ್ರದಿಂದ ಎರಡು ಬಟ್ಟೆಗಳನ್ನು ಸಮರ್ಪಿಸಬೇಕು. ಕೂದಲುಗಳನ್ನು ಬಾಚಬೇಕು.

**ಅನ್ವಯ :- ಮಿತ್ರಾವರುಣಾ ! ಯುವಂ ಪೀವಸಾ ವಸ್ತ್ರಾಣಿ ವಸಾಥೇ ಮಂತವಃ ಸರ್ಗಾಃ ಅಚ್ಛಿದ್ರಾಃ. ವಿಶ್ವಾ ಅನೃತಾನಿ ಅವಾತಿರತಂ. ಋತೇನ ಸಚೇಥೆ**

''**ಮಿತ್ರಾವರುಣಾ** ಓ ಮಿತ್ರಾವರುಣರೇ, ವಿಶ್ವವನ್ನು (ಮಿ) ಹುಟ್ಟಿಸಿ (ತ್ರ) ಕಾಪಾಡುವ, ಕೊನೆಯಲ್ಲಿ (ವರ) ಪರಮಪದವಿಗೆ (ಉನ) ಉನ್ನಯನ ಮಾಡುವ ದೇವರೇ, **ಯುವಂ** ನೀವು, **ಪೀವಸಾ** ಪೀತವಾದ, **ವಸ್ತ್ರಾಣಿ** ಬಟ್ಟೆಗಳನ್ನು, **ವಸಾಥೇ** ಉಟ್ಟಿರುವಿರಿ.

(ಭಕ್ತನು ದೇವರನ್ನು ಅಡಿಯಿಂದ ಮುಡಿಯ ವರೆಗೆ ಕಂಡು ಬಣ್ಣಿಸುತ್ತಿರುವ. ಆದರೆ ಬಟ್ಟೆಯನ್ನು ಕಂಡು ಬಣ್ಣಿಸುವಾಗ ಆಚ್ಛಾದನೆಯ ನೆನಪಾಯಿತು. ದೇವರಿಗೆ ಜಗತ್ತಿನ ಜನರಿಂದ ತನ್ನನ್ನೇ ಮುಚ್ಚುವದು ಅಗತ್ಯವಾಗಿದೆ. 'ವಿವೃಣುತೇ ತನೂಂ ಸ್ವಾಂ' ಭಕ್ತರಿಗೆ ಮಾತ್ರ ನಿಜವನ್ನು ತೋರುವನು. ಆದರೆ ಮಾನವರು ಮಾತ್ರ ತಮ್ಮ ಕೊಳೆ ಕಪ್ಪುಗಳನ್ನು, ಪಾಪ ತಪ್ಪುಗಳನ್ನು ಸಮಾಜದಿಂದಲೂ ದೇವರಿಂದಲೂ ಮುಚ್ಚಬೇಕೆಂದು ಬಯಸುತ್ತಾರೆ. ಇದಕ್ಕೆ ತೀರ ಹೊರತಾಗಿ ಭಕ್ತನ ಬಯಕೆ.)

ಓ ದೇವ, **ಮಂತವಃ** ನಿನ್ನ ಮಂತ್ರಣಗಳು, ಕಿವಿಮಾತುಗಳು, ಉಪದೇಶಗಳು ಹಾಗೂ **ಸರ್ಗಾಃ** ನೀನು ನಿರ್ಮಿಸಿದ ಪದಾರ್ಥಗಳು ಇಡಿಯ ವಿಶ್ವ, **ಅಚ್ಛಿದ್ರಾಃ** ನಿರ್ದೋಷ, ಕೊಳಕು ಕೆಡಕು ಇಲ್ಲದಿರುವದಾಗಿವೆ.

(ನಿನ್ನ ಉಪದೇಶವನ್ನು ಕೇಳಿ ನಿನ್ನೀ ಸೃಷ್ಟಿಯನ್ನು ಕಂಡು ನಾನು ತಪ್ಪಾಗಿ ನಡೆಯಬಾರದಿತ್ತು. ಅಂದಿನಿಂದ ಇಂದಿನವರೆಗೆ ಎಣಿಕೆ ಮೀರಿದಷ್ಟು ಹುಸಿ ತಪ್ಪುಗಳನ್ನು ಮಾಡಿರುವೆ. ಪಾಪಗಳನ್ನು ಆಚರಿಸಿರುವೆ.)

**ವಿಶ್ವಾ ಅನೃತಾನಿ** ಆ ಎಲ್ಲ ನನ್ನ ಹುಸಿಗಳನ್ನು, ಪಾಪಗಳನ್ನು **ಅವಾತಿರತಂ** ಬಯಲಿಗೆಳೆ. ಸಾಕಿನ್ನು ಮುಚ್ಚಿಡುವದು ಪಾಪಗಳನ್ನು. ಇನ್ನು ಮುಂದೆ ಓ ದೇವ, ನನ್ನನ್ನು **ಋತೇನ ಸಚೇಥೇ** ಸತ್ಯಧರ್ಮಗಳ ಜತೆಗೆ ಗಂಟು ಹಾಕು, ನಂಟುತನ ಮಾಡಿಸು, ನಾನು ಅದನ್ನು ಬಿಡದಂತೆ ನೋಡಿಕೋ.''

## ವಿಭೂಷಣ

ಓಂ [219]ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ ಸೇದು ಹಿರಣ್ಯವರ್ಣಃ। ಹಿರಣ್ಯಯಾತ್ ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥ (ಋ.೨.೩೫.೧೦)

ಈ ಮಂತ್ರದಿಂದ ಅಡಿಯಿಂದ ಮುಡಿಯವರೆಗಿನ ಅಂಗಾಂಗಗಳಿಗೆ ಆಭರಣಗಳನ್ನು ತೊಡಿಸಬೇಕು.

ಅನ್ವಯ :- ಸಃ ಹಿರಣ್ಯರೂಪಃ. ಸಃ ಅಪಾಂ ನಪಾತ್. ಸಃ ಹಿರಣ್ಯಸಂದೃಕ್. ಸಃ ಇತ್ ಹಿರಣ್ಯವರ್ಣಃ. ಹಿರಣ್ಯಯಾತ್ ಯೋನೇಃ ಪರಿ (ಉಪರಿ) ನಿಷದ್ಯ ಹಿರಣ್ಯದಾಃ ಅಸ್ಮೈ ಅನ್ನಂ ದದತಿ.

''ಸಃ ಆ ದೇವರು, ಹಿರಣ್ಯರೂಪಃ ಹಿತ ರಮಣೀಯ ರೂಪ ಉಳ್ಳವ, ಲೋಕವಿಲಕ್ಷಣ ಆನಂದಮಯ. ಸಃ ಅವನು ಅಪಾಂ ನಪಾತ್ ನೀರಿನ ಮೊಮ್ಮಗ. (ನೀರಿನಿಂದ ಜನಿಸುದುದು ಪೃಥಿವೀ ಅರ್ಥಾತ್ ಪಾರ್ಥಿವ ದೇಹ. ಆ ದೇಹದಲ್ಲಿ ದೇವರು ಪ್ರಕಟನಾಗುವನು, ಪ್ರಪ್ರಥಮದಲ್ಲಿ ಅಪರೋಕ್ಷೀಕೃತನಾಗುವನು.)

ಹಿರಣ್ಯಸಂದೃಕ್ ಅಂತರ್ಯಾಮಿಯಾದ ಅವನ ಅಂತಃಸಂದರ್ಶನವೇ ಲೋಕಾತೀತ ಲೋಕವಿಲಕ್ಷಣ ಆನಂದವನ್ನು ದಯಪಾಲಿಸುವದು. ಸಃ ಇತ್ ಉ ಅವನೇ ಹಿರಣ್ಯವರ್ಣಃ ಬಂಗಾರದ ಬಣ್ಣದವ. ಹಿರಣ್ಯಯಾತ್ ಯೋನೇಃ ಪರಿ (ಉಪರಿ) ಹಿರಣ್ಮಯವಾದ ಪೀಠದ ಮೇಲೆ, ನಿಷದ್ಯ ಆಸೀನನಾಗಿ, ಅಸ್ಮೈ ಈ ಜೀವನಿಗೆ ಹಿರಣ್ಯದಾಃ ಲೋಕೋತ್ತರ ಸುಖವನ್ನು, ಚಿನ್ನವನ್ನೂ ನೀಡುವ (ಸಃ) ಆ ದೇವರು ಅಸ್ಮೈ ಆ ಜೀವನಿಗೆ ಅನ್ನಂ ಅನ್ನವನ್ನೂ ಜ್ಞಾನರಸಾನ್ನವನ್ನೂ, ದದತಿ ದಯಪಾಲಿಸುತ್ತಾನೆ.''

ಕಾಲ್ಬೆರಳುಗಳಿಗೆ ಉಂಗುರಗಳು, ಕಾಲಿಗೆ ಕಿರುಗೆಜ್ಜೆ,

ಸೊಂಟಕ್ಕೆ ಉಡಿದಾರ, ಝುಲಿರೆಂದು ಶಬ್ದಮಾಡುವ ಕಂಚಿ,

---

೨೫ ಬ್ರ.ವ್ಯಾಖ್ಯಾ''ಹಿತತ್ವಾತ್ ರಮಣೀಯತ್ವಾತ್ ಹಿರಣ್ಯಂ ವರ್ಣತೋಽಪಿ ಚ'' ಇತಿ ಹಿರಣ್ಯಶಬ್ದಾರ್ಥಃ । ''ವ್ಯಕ್ತತ್ವಾತ್ ಪಾರ್ಥಿವೇ ದೇಹೇ ಸೋಽಪಾಂ ನಪ್ತಾ ಜನಾರ್ದನಃ''। ಇತಿ 'ಅಪಾಂ ನಪಾತ್' ಶಬ್ದಾರ್ಥಶ್ಚ ಉಕ್ತಃ ಋಗ್ಭಾಷ್ಯೇ । ಹಿರುಕ್ ಸುಖಂ ಹಿರಣ್ಯಂ ಸ್ಯಾತ್ । ಇತ್ಯುಕ್ತಂ ಹಿರಣ್ಯಂ ವಿಲಕ್ಷಣಂ ಸುಖಂ ಸಂದೃಶಃ ಸಂದರ್ಶನಾತ್ ಯಸ್ಯ ಸಃ । ಸ ಇತ್ ಉ ಇತಿ ಛೇದಃ ।

ಕೈಬೆರಳುಗಳಿಗೆ ಉಂಗುರ, ಮಣಿಗಂಟಿಗೆ ಕಂಕಣ, ಅದರ ಹಿಂದೆ ಕಡಗ, ಸ್ವಲ್ಪ ಮೇಲೆ ನಾಗಮುರಿಗೆ, ಅದಕ್ಕೆ ಮೇಲೆ ತೋಳುಬಂದಿ ಇವುಗಳನ್ನು ಸಮರ್ಪಿಸಬೇಕು.

**ಅನೇಕರತ್ನಸಂಯುಕ್ತಾ ತುಲಸೀದಳಮಿಶ್ರಿತಾ ।**
**ವಿಷ್ಣುವಕ್ಷಃಸ್ಥಲೇ ಮಾಲಾ ವೈಯಂತೀತ್ಯುದಾಹೃತಾ ॥★॥**

ಎಂಬ ಮಂತ್ರದಿಂದ ಬಗೆ ಬಗೆಯ ರತ್ನಗಳಿಂದ ಶೋಭಿಸುವ ತುಲಸೀದಲ ಸಹಿತವಾದ ರಮಾದೇವಿಯಿಂದ ಅಭಿಮನ್ಯಮಾನವಾದ ವೈಜಯಂತೀ ಮಾಲೆಯನ್ನು ಸಮರ್ಪಿಸಬೇಕು.

**ದೇದೀಪ್ಯಮಾನಚಂದ್ರಾರ್ಕಕೋಟಿಕಾಂತಿಸಮಪ್ರಭಃ ।**
**ವಿಷ್ಣೋರ್ವಕ್ಷಃಸ್ಥಲೇ ಭಾಸ್ವತ್ಕೌಸ್ತುಭಃ ಸಮುದಾಹೃತಃ ॥★॥**

ಎಂಬ ಮಂತ್ರದಿಂದ ಬ್ರಹ್ಮದೇವರಿಂದ ಅಭಿಮನ್ಯಮಾನವಾದ ಕೋಟಿ-ಸೂರ್ಯಚಂದ್ರರ ಕಾಂತಿಯಂತೆ ಹೊಳೆಯುವ ಕೌಸ್ತುಭಮಣಿಯನ್ನು ಸಮರ್ಪಿಸಬೇಕು.

ಮೂಲಮಂತ್ರದಿಂದ ಶ್ರೀವತ್ಸ, ಚೂಡಾಮಣಿಗಳನ್ನು ಸಮರ್ಪಿಸಬೇಕು.

ಯಜ್ಞೋಪವೀತ, ಕಿವಿಗೆ ಮಕರಕುಂಡಲ, ತಲೆಗೆ ಕೀರಿಟ. ಶೇಷದೇವರಿಂದ ಅಭಿಮನ್ಯಮಾನವಾದ ಆಸನ, ಸೂರ್ಯಚಂದ್ರರಿಂದ ಅಭಿಮನ್ಯಮಾನವಾದ ಕನ್ನಡಿ ಇವೆಲ್ಲವನ್ನು ನಮ್ಮ ಹೃದಯ ಸಾಮ್ರಾಜ್ಯದ ಅಧಿದೈವನಿಗೆ ಭಕ್ತಿ ಶ್ರದ್ಧೆಗಳಿಂದ ಸಮರ್ಪಿಸಬೇಕು.

ಭಗವಂತನಿಗೆ ಭಗವಂತನೇ ಭೂಷಣನಾಗಿರುವ. ಅಂದರೆ ಕಾಲಿನ ಗೆಜ್ಜೆಯಿಂದ ತಲೆಯ ಕಿರೀಟದವರೆಗಿನ ಎಲ್ಲ ಆಭರಣಗಳ ರೂಪದಲ್ಲಿ ತಾನೇ ತನ್ನನ್ನು ಭೂಷಿಸಿರುವ.

ಇದರಂತೆ ಸಿರಿಯು ಶ್ರೀಹರಿಯನ್ನು ಒಡವೆಗಳಾಗಿ ಸಿಂಗರಿಸಿದ್ದಾಳೆ. ಈ ಎರಡು ಬಗೆಯ ಅಲಂಕಾರಗಳಿಗೆ ಹೊರತಾಗಿ ಜಡ ಆಭರಣಗಳೂ ದೇವರಿ-ಗುಂಟು. ಆ ಆಭರಣಗಳಿಗೆ ರಮಾ ಬ್ರಹ್ಮಾದಿದೇವತೆಗಳು ಅಭಿಮಾನಿ-ಗಳಾಗಿರುವರು.

ಇನಿತು ದೇವತಾಸಾರ್ವಭೌಮನಾದ ಸಿರಿಯರಸನಿಗೆ ನಮ್ಮ ಈ ಕಿರು ಅಲಂಕಾರಗಳನ್ನು ಅರ್ಪಿಸಿ ಮೆಚ್ಚಿಸಿ ನಾವು ತೃಪ್ತಿಪಡಬೇಕು.

## ಗಂಧ

'ಭೋ ಸ್ವಾಮಿನ್ ! ಭೋಗಸಿಂಹಾಸನಕ್ಕೆ ಬಾ' ಎಂದು ಪ್ರಾರ್ಥಿಸಿ ಕರೆತಂದು ಆಸನದಲ್ಲಿ ಕೂರಿಸಬೇಕು. ಆಮೇಲೆ ಅಗರು, ತುಲಸಿಕಾಷ್ಠ, ಕದಂಬ, ದೇವದಾರು, ಬಿಲ್ವ, ಅಗಸ್ತಿ, ಚಂದನ ಕುಂಕುಮ (ಅಂದರೆ ಕೇಶರ)ಗಳಿಂದ ನಿರ್ಮಿಸಿದ ಗಂಧವನ್ನು ತುಲಸೀದಲಸಹಿತವಾಗಿ ಶಂಖಕ್ಕೆ ಸ್ಪರ್ಶಮಾಡಿಸಿ ದೇವರಿಗೆ ಸಮರ್ಪಿಸಬೇಕು. ಆಗ

ಓಂ [೨೬]ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಂ ॥★॥

ಅನ್ವಯ :- ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ಸರ್ವಭೂತಾನಾಂ ಈಶ್ವರೀಂ ಇಹ ತಾಂ ಶ್ರಿಯಂ ಉಪ ಹ್ವಯೇ.

''ಗಂಧದ್ವಾರಾಂ (ಹೂ, ಹಣ್ಣು, ಎಲೆ ಮುಂತಾದ ಭೂಮಯ ಪದಾರ್ಥ-ಗಳಲ್ಲಿ ಪರಿಮಳವಿದೆ. ಅದು ಭೂಮಿಯ ಸ್ವಂತ ಗುಣವಲ್ಲ. ದೇವದತ್ತ ಗುಣ. ದೇವನಿಯಂತ್ರಿತ ಗುಣ. ದೇವರ ಪರಿಮಳವೇ ಭೂಮಿಯ ಪರಿಮಳಕ್ಕೆ ನಿಮಿತ್ತ.)

ದೇವರ ಪರಿಮಳದಂಥ ಪರಿಮಳ ಭೂಮಿಯಲ್ಲಿ ಬರಲು ಸಿರಿಯೇ ಮಧ್ಯದ ದ್ವಾರ. ಆದುದರಿಂದ ಅವಳು ಗಂಧದ್ವಾರಾ.

ಅಥವಾ, ನಮ್ಮ ಹೃದಯದಲ್ಲಿ ಪ್ರಕಟವಾಗಿ ಕಾಣುವ ದೇವರ ರೂಪವನ್ನು ಗಂಧವೆನ್ನುತ್ತಾರೆ. ಈ ದೇವರ ರೂಪ ಹೃದಯದಲ್ಲಿ ಪ್ರಕಟವಾಗಲು ರಮೆಯೇ ಮಧ್ಯದ ದ್ವಾರ.

ಅಥವಾ, ಅವಳ ದೇಹದ ಸರ್ವಾಂಗಗಳೂ ಪರಿಮಳಪೂರ್ಣ.

ಅಥವಾ, ಅವಳ ಮಂದಿರದ ಬಾಗಿಲು ಗಂಧಮಯ.

ದುರಾಧರ್ಷಾಂ ಅಬಲೆಯಾದರೂ ಯಾವ ದಾನವ, ಮಾನವ, ದೇವತೆಗಳಿಗೂ ಧರ್ಷಣೆ ಮಾಡಲು ಅಸಾಧ್ಯಳಾದವಳು. ನಿತ್ಯಪುಷ್ಟಾಂ (ನಿತ್ಯಂ

---

೨೬ ಬ್ರ.ವ್ಯಾಖ್ಯಾ- 'ಹೃದಿ ವ್ಯಕ್ತಂ ತು ಯದ್ರೂಪಂ ಹರೇರ್ಗಂಧಃ ಸ ಉಚ್ಯತೇ' । (ಭಾ.ತಾ. ೬-೧೦-೫) । 'ಪುಣ್ಯೋ ಗಂಧಃ ಪೃಥಿವ್ಯಾಂ ಚ' ಇತ್ಯುಕ್ತಸ್ಯ ವಿಷ್ಣುಗಂಧಸ್ಯ ಪೃಥಿವ್ಯಾಂ ಪ್ರತಿಷ್ಠಾಪನೇ ಇಯಂ ದ್ವಾರಮ್ ।

ಪುಷ್ಪಾ) ಅನಾದ್ಯನಂತಕಾಲದಲ್ಲಿ ಗುಣಪೂರ್ಣೆ. (ನಿತ್ಯೇನ ಪುಷ್ಪಾ) ನಿತ್ಯನಾದ ದೇವರಿಂದಾಗಿ ಪುಷ್ಪಳು. (ನಿತ್ಯಾಃ ಪುಷ್ಪಾಃ ಯಯಾ) ನಿತ್ಯರಾದ ಮುಕ್ತರನ್ನು ಪೋಷಿಸುವಳು. ಕರೀಷಿಣೀಂ ಇಡಿಯ ವಿಶ್ವದ ಹುಟ್ಟು, ಇರವು, ಅಳಿವುಗಳನ್ನು ಮಾಡುವ ಶೀಲೆ. ಸರ್ವಭೂತಾನಾಂ ಎಲ್ಲ ಜೀವರ ಎಲ್ಲ ಪದಾರ್ಥಗಳ, ಈಶ್ವರೀಂ ಒಡತಿ. ಇಹ ಗಂಧವನ್ನು ಸಮರ್ಪಿಸುವಾಗ, ಇಹ ಈ ಗಂಧದಲ್ಲಿ ತಾಂ ಶ್ರಿಯಂ ಆ ಸಿರಿಯನ್ನು ಉಪದೇವರಿಗೆ ಉಪಚಾರ ಸಮರ್ಪಣೆಗಾಗಿ ಹ್ವಯೇ ಬರಲು ಪ್ರಾರ್ಥಿಸುವೆ.''

ಶ್ರೀಖಂಡಂ ಚಂದನಂ ದಿವ್ಯಂ ನಾನಾಗಂಧಮನೋಹರಮ್ ।
ವಿಲೇಪನಂ ಸುರಶ್ರೇಷ್ಠ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥★॥

ಈ ಮಂತ್ರಗಳನ್ನನ್ನಬೇಕು. ಬಳಿಕ

### ತುಳಸೀ ಅರ್ಚನೆ

ತುಲಸೀದಲಗಳನ್ನು ಒಂದೊಂದಾಗಿ ಏರಿಸಬೇಕು. ತುಲಸಿ ಅರ್ಚನೆಗೆ ಮಹಾ ಫಲವನ್ನು ಹೇಳಿದ್ದಾರೆ. ಭಗವಂತನ ಸಾಮೀಪ್ಯವೇ ಇದರ ಮಹಾಫಲ.

ಅದರಲ್ಲೂ ಒಂದೊಂದು ನಾಮಗಳನ್ನು ಸ್ಮರಿಸುತ್ತ ತುಲಸೀ ಅರ್ಚನೆಯ ಫಲ ಹೇಳಲು ಅಳವಲ್ಲ. ಇಂಥ ಮಹತ್ತರವಾದ ಶ್ರೀಹರಿಪೂಜಾಸಾಧನವಾಗಿದೆ ಶ್ರೀತುಲಸಿ.

ತುಲಸೀ ಸಮರ್ಪಣೆಯಂತೆ ದೂರ್ವಾಂಕುರ, ಬಿಲ್ವ, ಶಮೀ, ಭೃಂಗಾರಕ, ಮಾಲತೀ, ಕುಶ ಮುಂತಾದವುಗಳ ಎಲೆಗಳನ್ನು ಸಮರ್ಪಿಸುವದು ಶಾಸ್ತ್ರಸಿದ್ಧ.

ಸರ್ವಯಜ್ಞಗಳಿಂದ ಲಭಿಸದ ಪುಣ್ಯವನ್ನು ದೂರ್ವಾಂಕುರಗಳಿಂದ ಪೂಜಿಸಿದರೆ ಭಗವಂತ ನೀಡುವ. ಕಾರಣ ದೂರ್ವಾಂಕುರಗಳನ್ನು ಏರಿಸಬೇಕು.

ಬಿಲ್ವಪತ್ರಸಮರ್ಪಿಸಿದವ ಮುಕ್ತಿಯಲ್ಲಿ ಪೂಜಿತನಾಗುವ. ಆದ್ದರಿಂದ ಬಿಲ್ವಪತ್ರವನ್ನು ಸಮರ್ಪಿಸಬೇಕು.

ತಪ್ಪಿಯಾದರೂ ಮಾನವ ಶಮೀಪತ್ರವನ್ನು ದೇವರಿಗರ್ಪಿಸಿದಲ್ಲಿ ಅವನ ಪ್ರಸಾದದಿಂದ ಪರಗತಿಯನ್ನು ಹೊಂದುವದರಲ್ಲಿ ಸಂದೇಹವಿಲ್ಲ.

ಭೃಂಗಾರಕದಿಂದ ಭಗವಂತನನ್ನರ್ಚಿಸಿದವ ಜರಾ ರೋಗಗಳಿಂದ ಮುಕ್ತನಾಗಿ ದೇವರನ್ನು ಹೊಂದುವ.

ತುಲಸೀಪುಷ್ಪಗಳನ್ನು ಸಮರ್ಪಿಸುವಾಗ ಮತ್ಸ್ಯಾದಿ ಹತ್ತು, ಕೇಶವಾದಿ ಇಪ್ಪತ್ನಾಲ್ಕು, ನಾರಾಯಣಾದಿ ನೂರು, ವಿಶ್ವಾದಿಸಹಸ್ರನಾಮಗಳನ್ನು ಬ್ರಹ್ಮಸೂತ್ರಗಳನ್ನು ಪಠಿಸಬೇಕು. ದೇವರಿಗೆ ಮಾಲಾಸಮರ್ಪಣೆಯಿಂದ ಅನ್ನಲಾಭವಾಗುವದು ನಿಶ್ಚಿತ.

ಇಲ್ಲಿ ಕೆಲ ಅನುಸಂಧಾನಗಳು.

ವಿಶ್ವದಲ್ಲಿ ಅನಂತ ಪದಾರ್ಥಗಳು. ಅದರ ಬಗೆಗಳೂ ಅನಂತ. ಅವುಗಳಿಗಿರುವ ಗಂಧವೂ ಅನಂತ. ಗಂಧದ ಜಾತಿಗಳೂ ಅನಂತ.

ಒಂದು ಹೂವಿನಂತೆ ಇನ್ನೊಂದಕ್ಕೆ ಪರಿಮಳವಿಲ್ಲ. ಅಗರು, ತುಲಸಿ, ಕದಂಬ, ಚಂದನ ಮುಂತಾದ ಕಟ್ಟಿಗೆಗಳಿಗೂ, ಸಂಪಿಗೆ, ಮಲ್ಲಿಗೆ, ಕೇದಿಗೆ, ಜಾಜಿ, ಕೇಶರ ಮುಂತಾದ ಹೂಗಳಿಗೂ ತನ್ನದೇ ಆದ ಅಸಾಧಾರಣ ಪರಿಮಳವಿದೆ.

ಈ ಪರಿಮಳವನ್ನು ನಾವು ಕೊಟ್ಟಿಲ್ಲ. ಅದು ಆಯಾ ಹೂಗಳ ಸ್ವಂತ ಆಸ್ತಿಯೂ ಅಲ್ಲ. ಇದಕ್ಕೆಲ್ಲ ದೇವರು ಸ್ವತಂತ್ರ ಕಾರಣ.

ಹೂಗಳಲ್ಲಿ ಚಿನ್ಮಯ ಹೂವಾಗಿ, ಅವುಗಳ ಪರಿಮಳಗಳಲ್ಲಿ ಚಿನ್ಮಯ-ಪರಿಮಳನಾಗಿ ಇದ್ದು ನಿಯಮಿಸುತ್ತಲಿರುವ.

ದೇವರಿಗೆ ಅನಂತ ಅನಂತ ಬಗೆಯ ಪರಿಮಳಗಳಿವೆ. ಆ ತನ್ನ ಅನಂತ ಪರಿಮಳಗಳಲ್ಲಿಯ ಒಂದೊಂದನ್ನು ಒಂದೊಂದು ಜಾತಿಯ ಹೂವಿನಲ್ಲಿರಿಸಿ, ತನ್ನ ಪರಿಮಳದಂಥ ಗಂಧವನ್ನು ಆ ಹೂವಿನ ಜಾತಿಗೇ ಕೊಟ್ಟು ಆ ಹೂವಿನ ಸ್ವಭಾವವನ್ನಾಗಿ ಮಾಡಿರುವ.

ಹೀಗಾಗಿ ಇಡಿಯ ವಿಶ್ವದಲ್ಲಿರುವ ಅನಂತ ಗಂಧಗಳ ಮೂಲ ಶ್ರೀಹರಿಯೇ. ಇಷ್ಟೇ ಏನು ? ವಿಶ್ವದಲ್ಲಿ ಎಲ್ಲೆಲ್ಲೂ ಕಾಣಸಿಗದ, ಸಿರಿವಿಧಿಗಳಿಗೂ ಗೋಚರವಾಗದ ಅನಂತಾನಂತಗಂಧರೂಪ 'ಸರ್ವಗಂಧಃ' 'ಪುಣ್ಯೋ ಗಂಧಃ' ಭಗವಂತ.

ಆದರೆ ದೇವರ ಈ ಯಾವ ಗಂಧವೂ ಹೂವಿನ ಗಂಧದಂತಲ್ಲ.

ಹೂವಿನ ಗಂಧ ಜಡ, ಚಿನ್ಮಯವಲ್ಲ.

ಬೀಜದಿಂದ ಹುಟ್ಟುವದು, ಅನಾದಿಯಲ್ಲ.

ಕೆಲಕಾಲದ ಬಳಿಕ ವಿಕಾರಗೊಳ್ಳುವದು, ಅವಿಕಾರಿಯಲ್ಲ.

ಮುಂದೆ ನಾಶವಾಗುವದು, ಅವಿನಾಶಿಯಲ್ಲ.

ಪಂಚಮಹಾಭೂತಗಳಿಂದ ಬಂದಿರುವದು, ಅಪ್ರಾಕೃತವಲ್ಲ.

ಕೊನೆಯದಾಗಿ ದೇವರಿಗಧೀನವಾದುದು, ಸ್ವತಂತ್ರವಲ್ಲ.

ಆದರೆ ದೇವರ ಗಂಧ ಚಿನ್ಮಯ, ಅನಾದಿ, ಅವಿಕಾರಿ, ಅವಿನಾಶಿ, ಅಪ್ರಾಕೃತ, ಸ್ವತಂತ್ರ.

ಇದಲ್ಲದೇ ಹೂವಿನ ಪರಿಮಳದ ಕುರಿತಾಗಿ ಒಂದು ಆಶ್ಚರ್ಯ.

ವಿಜ್ಞಾನ 'ಹೇಗೆ?' ಎನ್ನುವ ಪ್ರಶ್ನೆಯನ್ನು ಉತ್ತರಿಸಿದರೂ 'ಹೀಗೇಕೇ ?' ಹೀಗೇ ಏಕೆ?' ಎನ್ನುವ ಪ್ರಶ್ನೆಗಳಿಗೆ ಉತ್ತರಿಸುವದಿಲ್ಲ. ಆದುದರಿಂದ ಈ ಆಶ್ಚರ್ಯವನ್ನು ಇಲ್ಲವಾಗಿಸಲು ಸಾಧ್ಯವಿಲ್ಲ.

ಹೂವಿನಲ್ಲಿಯ ಪರಿಮಳ ಮಣ್ಣಿನಲ್ಲಿ, ನೀರಿನಲ್ಲಿ, ಬೇರಿನಲ್ಲಿ, ಮರದಲ್ಲಿ, ಕೊಂಬಿನಲ್ಲಿ, ಎಲೆಯಲ್ಲಿ, ಕಿಂ ಬಹುನಾ ಮೊಗ್ಗೆಯಲ್ಲೂ ಇಲ್ಲ. ಆದರೆ ಕೇವಲ ಹೂವಿನ ಆಸ್ತಿ, ಹೂವಿನ ಹಿರಿಮೆ.

ಗಿಡ, ಎಲೆ, ಮೊಗ್ಗೆಗಳಲ್ಲೆಲ್ಲೂ ಕಾಣದೇ ಹೂವಿನಲ್ಲಿ ಮಾತ್ರ ಆ ಪರಿಮಳ ಮನೆ ಮಾಡಿರುವದು ಆಶ್ಚರ್ಯ, ದೇವರ ಅಚಿಂತ್ಯ ಮಹಿಮೆ.

ಪ್ರಖರ ವಿಕಟ ಪ್ರಪಂಚದಲ್ಲಿ ಎಲ್ಲೆಲ್ಲೂ ತುಂಬಿರುವ ದೇವರ ನಗೆಯ ರಸವನ್ನು, ಮಂದಹಾಸವಿಲಾಸವನ್ನು ಹೊರಸೂಸಲು ಹೂವೇ ಮಾಧ್ಯಮವೆಂದು ತೋರುತ್ತದೆ. ಅಂತೆಯೇ 'ಪುಷ್ಪಹಾಸಃ' ಎಂದು ಕರೆದರೇ ?

## ಆಯುಧಗಳ ಪೂಜೆ

ಚಕ್ರಕ್ಕೆ ದುರ್ಗೆ ಅಭಿಮಾನಿದೇವತೆ. ಶಂಖಕ್ಕೆ ಶ್ರೀದೇವಿ, ಗದೆಗೆ ವಾಯು, ಪದ್ಮಕ್ಕೆ ಭೂದೇವಿ, ಖಡ್ಗಕ್ಕೆ ದುರ್ಗೆ, ಧನುಸ್ಸಿಗೆ ಸರಸ್ವತಿ, ಪಂಚಬಾಣಗಳಿಗೆ ಪಂಚ ಪ್ರಾಣರು ಎಂದು ಧೇನಿಸಿ ಆಯುಧಗಳನ್ನು (ಮನಸಾ) ಸಮರ್ಪಿಸಬೇಕು.

ಇದರ ಜೊತೆಗೆ ಕೌಸ್ತುಭಕ್ಕೆ ವಿರಿಂಚ, ವನಮಾಲೆಗೆ ಶ್ರೀದೇವಿ ಅಭಿಮಾನಿನೀ. ಶ್ರೀವತ್ಸದಲ್ಲಿ ಶ್ರೀದೇವಿ ಇರುವಳು. ಇವರೆಲ್ಲರೆನ್ನು ಪೂಜಿಸಬೇಕು.

ಆಭರಣಗಳ ಕುರಿತಾಗಿ ಹೇಳಿದಂತೆ ಆಯುಧಗಳ ಬಗೆಗೂ ತಿಳಿಯುವದು ಅಗತ್ಯ. ಭಗವಂತನೇ ಚಕ್ರಾದಿ ಆಯುಧಗಳಾಗಿರುವ. ಅವು ಚಿನ್ಮಯ ಆಯುಧಗಳು. ಈ ಆಯುಧಗಳಾಗಿರುವ ಭಗವಂತನೇ ಸ್ವತಂತ್ರನಾಗಿ ಶತ್ರುಗಳ

ಸಂಹಾರಾದಿಗಳನ್ನು ಮಾಡುವನು. ರಮೆಯೂ ಆಯುಧಗಳಾಗಿರುವಳು. ಅವೂ ಚಿನ್ಮಯ.

ಜಡ ಆಯುಧಗಳೂ ಇವೆ. ಅವುಗಳಲ್ಲಿ ಬೇರೆ ಬೇರೆ ಅಭಿಮಾನಿ ದೇವತೆಗಳಿರುವರು.

## ಆವರಣದೇವತಾ - ಪೂಜೆ

೧. ಮಧ್ಯದಲ್ಲಿರುವ ದೇವರ ಬಲದಲ್ಲಿ ಶ್ರೀದೇವಿ. ಎಡದಲ್ಲಿ ಭೂದೇವಿ.

ಶ್ರೀ ಭೂ ದೇವಿಯರೆಂಬ ಮೊದಲನೆಯ ಆವರಣದ ಹೊರಗಡೆ

| | | | | |
|---|---|---|---|---|
| ೨. | ಪೂರ್ವ | ಕ್ರುದ್ಧೋಲ್ಕ | ಆಗ್ನೇಯ | ಸಹಸ್ರೋಲ್ಕ |
| | ದಕ್ಷಿಣ | ಮಹೋಲ್ಕ | ನೈರ್ಋತ್ಯ | ಸಹಸ್ರೋಲ್ಕ |
| | ಪಶ್ಚಿಮ | ವೀರೋಲ್ಕ | ವಾಯವ್ಯ | ಸಹಸ್ರೋಲ್ಕ |
| | ಉತ್ತರ | ದ್ಯುಲ್ಕ | ಈಶಾನ್ಯ | ಸಹಸ್ರೋಲ್ಕ |

ಕೃದ್ಧೋಲ್ಕಾದಿ ಎರಡನೆಯ ಆವರಣದ ಹೊರಗಡೆ

| | | | | |
|---|---|---|---|---|
| ೩. | ಪೂರ್ವ | ವಾಸುದೇವ, | ಆಗ್ನೇಯ | ಮಾಯಾ |
| | ದಕ್ಷಿಣ | ಸಂಕರ್ಷಣ | ನೈರ್ಋತ್ಯ | ಜಯಾ |
| | ಪಶ್ಚಿಮ | ಪ್ರದ್ಯುಮ್ನ | ವಾಯವ್ಯ | ಕೃತಿ |
| | ಉತ್ತರ | ಅನಿರುದ್ಧ | ಈಶಾನ್ಯ | ಶಾಂತಿ |

ವಾಸುದೇವಾದಿ ಮೂರನೆಯ ಆವರಣದ ಹೊರಗಡೆ

| | | | | |
|---|---|---|---|---|
| ೪. | ಪೂರ್ವ | ಕೇಶವ<br>ನಾರಾಯಣ | ಆಗ್ನೇಯ | ಮಾಧವ |
| | ದಕ್ಷಿಣ | ಗೋವಿಂದ<br>ವಿಷ್ಣು | ನೈರ್ಋತ್ಯ | ಮಧುಸೂದನ |
| | ಪಶ್ಚಿಮ | ತ್ರಿವಿಕ್ರಮ<br>ವಾಮನ | ವಾಯವ್ಯ | ಶ್ರೀಧರ |
| | ಉತ್ತರ | ಹೃಷಿಕೇಶ<br>ಪದ್ಮನಾಭ | ಈಶಾನ್ಯ | ದಾಮೋದರ |

ಕೇಶವಾದಿ ನಾಲ್ಕನೆಯ ಆವರಣದ ಹೊರಗಡೆ

| | | | | |
|---|---|---|---|---|
| ೫. | ಪೂರ್ವ | ಮತ್ಸ್ಯ ಕೂರ್ಮ, | ಆಗ್ನೇಯ | ವರಾಹ |
| | ದಕ್ಷಿಣ | ನರಸಿಂಹ ವಾಮನ, | ನೈರ್ಋತ್ಯ | ಭಾರ್ಗವ |
| | ಪಶ್ಚಿಮ | ರಾಮ ಕೃಷ್ಣ, | ವಾಯವ್ಯ | ಬುದ್ಧ |
| | ಉತ್ತರ | ಕಲ್ಕಿ ವಿಶ್ವರೂಪ, | ಈಶಾನ್ಯ | ಅನಂತ |
| ಮತ್ಸ್ಯ ಕೂರ್ಮಾದಿ ಐದನೆಯ ಆವರಣದ ಹೊರಗಡೆ | | | | |
| ೬. | ಪೂರ್ವ | ಬ್ರಹ್ಮ, | ಆಗ್ನೇಯ | ಸರಸ್ವತೀ |
| | ದಕ್ಷಿಣ | ವಾಯು, | ನೈರ್ಋತ್ಯ | ಭಾರತೀ |
| | ಪಶ್ಚಿಮ | ಶೇಷ, | ವಾಯವ್ಯ | ವಾರುಣೀ |
| | ಉತ್ತರ | ರುದ್ರ | ಈಶಾನ್ಯ | ಪಾರ್ವತೀ |
| ಎದುರಿನಲ್ಲಿ ಗರುಡ ಸೌಪರ್ಣೀ. | | | | |

ಬ್ರಹ್ಮಾದಿ ಆರನೆಯ ಆವರಣದ ಹೊರಗಡೆ

| | |
|---|---|
| ೭ ಪೂರ್ವ | ಇಂದ್ರ, ಲಂ ಎಂಬ ಬೀಜಾಕ್ಷರದಿಂದ ಪ್ರತಿಪಾದ್ಯ. ಸ್ವರ್ಗಾಧಿಪತಿ. ಪೀತವರ್ಣ. ವಜ್ರಹಸ್ತ. ಐರಾವತ ವಾಹನ. ಶಚೀಸಹಿತ. ವಿಷ್ಣು ಪಾರ್ಷದನಾದ ಇವನಿಗೆ ನಮಸ್ಕಾರ. |
| ಆಗ್ನೇಯ | ಅಗ್ನಿ, ರಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ತೇಜೋಧಿಪತಿ. ರಕ್ತವರ್ಣ. ಶಕ್ತಿಹಸ್ತ. ಮೇಷವಾಹನ. ಸ್ವಾಹಾಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |
| ದಕ್ಷಿಣ | ಯಮ, ಯಂ ಎಂಬ ಬೀಜಾಕ್ಷರಪ್ರತಿಪಾದ್ಯ. ಪ್ರೇತಾಧಿಪತಿ. ಕೃಷ್ಣವರ್ಣ. ದಂಡಹಸ್ತ. ಮಹಿಷವಾಹನ. ಶಾಮಲಾಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |
| ನೈರ್ಋತ್ಯ | ನಿರ್ಋತಿ, ಕ್ಷಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ರಕ್ಷೋಧಿಪತಿ. ಧೂಮ್ರವರ್ಣ. ಖಡ್ಗಹಸ್ತ. ಪ್ರೇತವಾಹನ. ಕಾಲಿಕಾಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |

| | |
|---|---|
| ಪಶ್ಚಿಮ | ವರುಣ, ವಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ಜಲಾಧಿಪತಿ. ಶುಭ್ರವರ್ಣ. ಪಾಶಹಸ್ತ. ಮಕರವಾಹನ. ಗಂಗಾಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |
| ವಾಯವ್ಯ | ವಾಯು, ಯಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ಪ್ರಾಣಾಧಿಪತಿ. ಧೂಮ್ರವರ್ಣ. ಅಂಕುಶಹಸ್ತ. ಮೃಗವಾಹನ. ಮೋಹಿನೀಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |
| ಉತ್ತರ | ಸೋಮ, ಸಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ನಕ್ಷತ್ರಾಧಿಪತಿ. ಶುಕ್ಲವರ್ಣ. ಗದಾಹಸ್ತ. ಅಶ್ವವಾಹನ. ರೋಹಿಣೀಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |
| ಈಶಾನ್ಯ | ಈಶಾನ ಹಾಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ವಿದ್ಯಾಧಿಪತಿ. ಸ್ವಚ್ಛವರ್ಣ. ಶೂಲಹಸ್ತ. ವೃಷಭವಾಹನ. ಪಾರ್ವತೀಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ. |

ಇಂದ್ರ ಈಶಾನರ ಮಧ್ಯದಲ್ಲಿ ಅಥವಾ ಎದುರು ಮೇಲ್ಭಾಗದಲ್ಲಿ

ಬ್ರಹ್ಮ ಹ್ರೀಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ಸತ್ಯಾದಿ ಸರ್ವಲೋಕಾಧಿಪತಿ. ಪದ್ಮಹಸ್ತ. ಹಂಸವಾಹನ. ಸರಸ್ವತೀಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ.

ನಿರ್ಋತಿ ವರುಣರ ಮಧ್ಯದಲ್ಲಿ ಅಥವಾ ಎದುರು ಕೆಳಭಾಗದಲ್ಲಿ

ಶೇಷ ಶಂ ಎಂಬ ಬೀಜಾಕ್ಷರ ಪ್ರತಿಪಾದ್ಯ. ನಾಗಾಧಿಪತಿ. ಗೌರವರ್ಣ. ಚಕ್ರಹಸ್ತ. ಕೂರ್ಮವಾಹನ. ವಾರುಣೀಸಹಿತ. ಈ ವಿಷ್ಣುಪಾರ್ಷದನಿಗೆ ನಮಸ್ಕಾರ.

## ದೇವತಾ ಮಹಿಮೆ

ದೇವತೆಗಳ ಕುರಿತಾಗಿ ಕೆಲ ಮಹತ್ವದ ಅನುಸಂಧಾನಗಳು. ಶ್ರೀಮದಾನಂದ-ತೀರ್ಥಭಗವತ್ಪಾದಾಚಾರ್ಯರು ವಿಷ್ಣುವಿನ ಪಾರಮ್ಯವನ್ನು ಸಾರುವ ಅನುಪಮ ವೈಷ್ಣವಾಚಾರ್ಯರು.

ಆಚಾರ್ಯರು ಹೇಳಿದಂತಹ ವಿಷ್ಣುಪಾರಮ್ಯವನ್ನು ಯಾವ ಯಾವ ವೈಷ್ಣವ ಆಚಾರ್ಯರೂ ಹೇಳಿಲ್ಲವೆನ್ನುವುದು ಶಾಸ್ತ್ರಮಗ್ನಮತಿಗಳಿಗೆ ಗೊತ್ತು.

ಆದರೆ ಆಚಾರ್ಯರು ವಿಷ್ಣುವಿನ ಸರ್ವೋತ್ತಮತ್ವವನ್ನು ಸಾರುವ

ಭರದಲ್ಲಿಯೋ, ಭಾವೋದ್ವೇಗದಲ್ಲಿಯೋ ಬೇರೆ ಯಾವ ದೇವತೆಯನ್ನೂ ಕಡೆಗಣಿಸಲಿಲ್ಲ.

ತಮ್ಮ ಅನುಯಾಯಿಗಳಿಗೆ ಪರದೇವನ ಹಾಗೂ ದೇವತೆಗಳ ಕುರಿತಾಗಿ ಮಾಡಿದ ಉಪದೇಶಗಳಲ್ಲಿ ಕಾಣುವ ತೂಕ ಪರಮಾದ್ಭುತ.

ತೀರ ಸಣ್ಣ ಸಂಗತಿ, ಅತಿ ಕ್ಷುದ್ರ ಮಾತು ಎಂದು ನಮಗೆ ಅನಿಸಿದುದನ್ನೂ ಆಚಾರ್ಯಪಾದರು ವೇದಾಂತದ ತಾತ್ತ್ವಿಕ ಹಿನ್ನಲೆಯಲ್ಲಿ ಗಂಭೀರವಾಗಿ ವಿಮರ್ಶಿಸುತ್ತಾರೆ.

ಅದಕ್ಕೆ ತಕ್ಕುದಾದ ಪರಮ ಸಮಂಜಸ ನಿರ್ಣಯವನ್ನೂ ಕೊಡುತ್ತಾರೆ. ಯಾವ ದೇವತೆಗೂ, ಯಾವ ದೇವತೆಯ ಮಾಹಾತ್ಮ್ಯಕ್ಕೂ ತಿಲಮಾತ್ರವೂ, ಅಲ್ಲ, ಅಣುಮಾತ್ರವೂ ಅಪಾಯವಾಗದಂತೆ ಅವರ ಸ್ವರೂಪವನ್ನು ನಿರೂಪಿಸುತ್ತಾರೆ.

ಶ್ರೀಮದಾಚಾರ್ಯರು ಹೀಗೆ ನಿರೂಪಿಸದಿದ್ದಲ್ಲಿ ಯಾವ ದೇವತೆಯೂ ವೇದಪುರಾಣೇತಿಹಾಸಗಳ ಮೇಲುನೋಟವನ್ನೇ ಹಿಂಬಾಲಿಸಿ ಓದುವ ಮಾನವನ ದೃಷ್ಟಿಯಲ್ಲಿ ತನ್ನ ದೇವತ್ವವನ್ನು ಕಾದಿರಿಸಿಕೊಳ್ಳಲು ಸಾಧ್ಯವಿರುತ್ತಿರಲಿಲ್ಲ. ಆ ಮಟ್ಟಿಗೆ ವೇದಪುರಾಣೇತಿಹಾಸಗಳು ಸಂಕೀರ್ಣ, ಅಪೂರ್ಣ, ಪ್ರಕ್ಷಿಪ್ತ, ವ್ಯತ್ಯಸ್ತವಾಗಿ ಉಪಲಬ್ಧವಾಗಿವೆ ಎಂದಭಿಪ್ರಾಯ.

ಶ್ರೀಮದಾಚಾರ್ಯರು ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸಿ ಉಪದೇಶಿಸುವಲ್ಲಿ, ಎಷ್ಟು ಭಕ್ತಾನುಕಂಪೆಯನ್ನು ತೋರಿದ್ದಾರೆಯೋ ಹೆಚ್ಚು ಕಡಿಮೆ ಅಷ್ಟೇ ಮಟ್ಟದಲ್ಲಿ ಎಲ್ಲ ದೇವತೆಗಳ ತಾರತಮ್ಯವನ್ನು ಸಮರ್ಥಿಸಿ ಉಪದೇಶಿಸುವಲ್ಲೂ ಕಾರುಣ್ಯವನ್ನು ಹರಿಸಿದ್ದಾರೆ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಬಗೆಯ ತೂಕವನ್ನು ಯಾವ ಗ್ರಂಥಕಾರರಲ್ಲೂ ನಾವು ಕಾಣೆವು.

ಅಸಂಖ್ಯ ಜೀವರು ಅಪ್ಪಟ ನಾಸ್ತಿಕರು. ಆಸ್ತಿಕರಾದ ಭಕ್ತರಲ್ಲೂ ಕೆಲವರು ದೇವತೆಗಳನ್ನೇ ಪೂಜಿಸುತ್ತಾರೆ, ದೇವರನ್ನು ಕೈಬಿಡುತ್ತಾರೆ. ಇನ್ನು ಕೆಲವರು ದೇವರನ್ನೇ ಮೊರೆ ಹೋಗಿ ಎಲ್ಲ ದೇವತೆಗಳನ್ನೂ ತಮ್ಮ ಆರಾಧನೆಯ ಚೌಕಟ್ಟಿನ ಹೊರಗಡೆ ನೂಕುತ್ತಾರೆ. ಎರಡೂ ಮಹಾ ಅಪಾಯಕಾರಿ ಎಂದು ಶ್ರೀಮದಾ-ಚಾರ್ಯರ ಸಂದೇಶ.

ಮೊದಲನೆಯವರು ಸರ್ವೋತ್ತಮ ಭಗವಂತನನ್ನೇ ನಂಬದಿದ್ದ ಮೇಲೆ ಸದ್ಗತಿಯನ್ನು ಹೊಂದುವದು ತೀರ ಅಸಾಧ್ಯ.

ಎರಡನೆಯವರೂ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ. ಇದರ ಕಾರಣ. ದೇವತೆಗಳು ಭಕ್ತಿಯೋಗಿಗಳು. ವಿಷ್ಣುಭಕ್ತರಲ್ಲಿ ಸರ್ವೋತ್ತಮರು. ಅವರಿಗೆ ಪರಮಾಣುವಿನಿಂದಾರಂಭಿಸಿ ಬ್ರಹ್ಮಾಂಡ ಹಾಗೂ ಅದರಾಚೆ ಇರುವ ತಾವು ಅಭಿಮಾನಿಗಳಾಗಿರುವ ತತ್ತ್ವಗಳವರೆಗೆ ಯಾವುದೂ ಅವರಿಗೆ ಬೇಕಿಲ್ಲ.

ಆಸ್ತಿ-ಅಂತಸ್ತು, ಅಧಿಕಾರ, ಸೌಖ್ಯ, ಸೌಭಾಗ್ಯ, ಸಾಮರ್ಥ್ಯ, ಮಡದಿ, ಮಕ್ಕಳು ಅಷ್ಟೇ ಅಲ್ಲ ಮುಕ್ತಿಯೆಂಬ ಪರಮಪದವೂ, ಕಿಂ ಬಹುನಾ ಸ್ವಂತ ಅಸ್ತಿತ್ವವೂ ಅವರಿಗೆ ಬೇಕಿಲ್ಲ.

ಇದೆಲ್ಲವೂ ದೇವರಿಗಾಗಿ ಬೇಕು. ಇಲ್ಲದಿದ್ದರೆ ಯಾವುದೂ ಬೇಡ. ಅಂತೆಯೇ ಇವರನ್ನು 'ಏಕಾಂತಿಗಳು' ಎಂದು ಗುರುತಿಸುತ್ತಾರೆ.

ಇಂಥ ಪರಮಭಕ್ತಾಗ್ರೇಸರ ದೇವತೆಗಳ ಮೇಲೆ ಪರಮಾತ್ಮನ ಪ್ರಸಾದ, ಸ್ನೇಹ ಪ್ರೇಮವೂ ಪರತರವಾಗಿದೆ.

ದೇವರಿಗೆ ದೇವತೆಗಳ ಮೇಲಿರುವ ಈ ಸ್ನೇಹದ ಪರಾಕಾಷ್ಠೆಯನ್ನು 'ಯಸ್ತಾನ್ ದ್ವೇಷ್ಟಿ ಸ ತಂ ದ್ವೇಷ್ಟಿ ಯಸ್ತಾನನು ಸ ಚಾನು ತಮ್' ಎಂಬ ಒಂದೇ ಮಾತಿನಲ್ಲಿ ತಿಳಿಯಬಹುದು.

''ದೇವತೆಗಳನ್ನು ದ್ವೇಷಿಸುವವನು ಇಲ್ಲವೇ ಉಪೇಕ್ಷಿಸುವವನು ತನ್ನನ್ನು ದ್ವೇಷಿಸುವವ ಉಪೇಕ್ಷಿಸುವವ'' ಎಂದು ದೇವರು ಭಾವಿಸುತ್ತಾನೆ.

ಇದೇ ಮಹಾಭಾರತದ ಸಾರ. ಅಂದ ಮೇಲೆ ದೇವತಾದ್ವೇಷವೇ ವಿಷ್ಣುದ್ವೇಷವಾಯಿತು. ಅದರಿಂದ ಅಂಧತಾಮಿಸ್ರ ನಿಶ್ಚಿತ. ದೇವತಾ ಉಪೇಕ್ಷೆಯೇ ವಿಷ್ಣುವಿನ ಉಪೇಕ್ಷೆ, ಅವರಿಗೆ ನಿತ್ಯಸಂಸಾರವೂ ನಿಶ್ಚಯ.

ಈ ನಿಟ್ಟಿನಲ್ಲಿ ದೇವತೆಗಳಲ್ಲಿ ಭಕ್ತಿ ಶ್ರದ್ಧೆಗಳನ್ನು ಮಾಡುವದು ಮುಕ್ತಿಗೆ ಅನಿವಾರ್ಯ. ಕೆಲವರು ಶ್ರೀಮದಾಚಾರ್ಯರ ಆದೇಶದಂತೆ ದೇವರಲ್ಲಿ ಸರ್ವೋತ್ತಮವಾದ ಭಕ್ತಿಯನ್ನೂ ಉಳಿದವರಲ್ಲಿ ಕಡಿಮೆ ಭಕ್ತಿಯನ್ನೂ ಮಾಡುತ್ತಾರೆ.

ಆದರೆ ಅನೇಕರಿಗೆ ದೇವತೆಗಳ ಮಹಿಮೆಯೇ ತಿಳಿದಿಲ್ಲ. ಆಯಾ ದೇವತೆಗಳ ಮಹಿಮೆಯನ್ನೇ ತಿಳಿಯದೆ ಮೂಢ ಭಕ್ತಿಯನ್ನು ಮಾಡುತ್ತಾರೆ.

ಶ್ರೀಮದಾನಂದತೀರ್ಥರೇ ಅನೇಕ ಶಾಸ್ತ್ರಗಳ ಆಧಾರದಿಂದ ದೇವತೆಗಳ ಅದ್ಭುತ ಮಹಿಮೆಯನ್ನು ತಿಳಿಹೇಳಿದ್ದಾರೆ.

ಅದನ್ನು ಸ್ವಲ್ಪವಾದರೂ ತಿಳಿಸುವ ಪ್ರಯತ್ನ ಮಾಡುವ.

## ಆವರಣದೇವತಾ

ಭಗವಂತನ ಆವರಣದೇವತೆಗಳಲ್ಲಿ ದೇವರ ರೂಪಗಳೂ ಮತ್ತು ರಮಾ, ಬ್ರಹ್ಮ, ವಾಯು ಮುಂತಾದವರೂ ಸೇರಿರುವರು. ಆ ರಮಾ, ಬ್ರಹ್ಮ, ವಾಯ್ವಾದಿ ಒಬ್ಬೊಬ್ಬ ದೇವತೆಗಳ ಮಹಿಮೆ ಮಾನವರಿಗೆ ಸರ್ವಥಾ ಅಗೋಚರವಾಗಿದೆ.

ರಮಾಬ್ರಹ್ಮವಾಯ್ವಾದಿದೇವತೆಗಳಿಗೆ ಅನಂತ ಗುಣಗಳಿವೆ. ಅಪರಿಮಿತ ರೂಪಗಳು. ಅಸಂಖ್ಯಕ್ರಿಯೆಗಳು. ಅಪ್ರತಿಹತ ಶಕ್ತಿ. ಒಬ್ಬೊಬ್ಬ ದೇವತೆಯ ಮಹಿಮೆಯೂ ಅತ್ಯಗಾಧ. ತೀರ ಸಣ್ಣ ದೇವತೆಯೂ ಮಾನವರಿಗಿಂತ ಕೋಟಿ ಕೋಟಿ ಮಡಿ ಮಿಗಿಲಾದವನು. ದೇವತೆಯ ಯೋಗ್ಯತೆ, ಅದಕ್ಕೆ ತಕ್ಕ ಭಕ್ತಿ, ಜ್ಞಾನ, ಬಲ, ಆನಂದ, ಅಧಿಕಾರ, ಗುಣಗಳು, ಅಣಿಮಾದಿ ಶಕ್ತಿಗಳು ಮುಂತಾದವೆಲ್ಲ ಸಾಮಾನ್ಯರಿಗಿಂತಲೂ ಅತ್ಯಧಿಕ.

ಇನ್ನು ತತ್ತ್ವಾಭಿಮಾನಿಗಳ ಮಹಿಮೆಯಂತೂ ಮಾನವನ ಊಹೆಗೂ ಎಟುಕುವದಿಲ್ಲ. ಸಿರಿ, ವಿಧಿ, ವಾಯು, ಗರುಡ, ಶಿವ, ಇಂದ್ರ, ಕಾಮ ಮುಂತಾದ ದೇವತೆಗಳಂತೂ ಅನಂತ ಗುಣಮಂಡಿತರು.

ಬ್ರಹ್ಮಾಂಡ ಹಾಗೂ ಅದರ ಆವರಣಗಳಲ್ಲಿ ವ್ಯಾಪ್ತನಾದ ಭಗವಂತನ ಅನೇಕ ರೂಪಗಳ ಸಾಕ್ಷಾತ್ಕಾರ ಮಾಡಿಕೊಂಡವರವರು. ಭಗವಂತನ ಒಂದೊಂದು ರೂಪದಲ್ಲಿ ವೇದಾದ್ಯುಕ್ತ ಅನಂತಗುಣಗಳನ್ನು ಅಪರೋಕ್ಷೀಕರಿಸಿಕೊಂಡವರು. ಸರ್ವಾತ್ಮನಾ ಹರಿಭಕ್ತರವರು.

ತಮ್ಮಿಂದ ಅಭಿಮನ್ಯಮಾನವಾದ ತತ್ವಗಳಲ್ಲಿ ಹಾಗೂ ವಸ್ತುಗಳಲ್ಲಿ ಅವುಗಳ ಅಸಂಖ್ಯ ಭಾಗಗಳಲ್ಲಿ ಅಪರಿಮಿತ ರೂಪಗಳಿಂದ ದೇಹಸಹಿತರಾಗಿ ಸಾಂದ್ರರಾಗಿ ವ್ಯಾಪ್ತರಾಗಿದ್ದಾರೆ. ಆ ತತ್ವಗಳಿಗೂ, ವಸ್ತುಗಳಿಗೂ, ಭಾಗಗಳಿಗೂ ಸ್ವಾಮಿಯಾಗಿದ್ದಾರೆ. ಅವರು ವ್ಯಾಪಿಸಿ ಇಲ್ಲದಿರುವ ಒಂದು ಕಣವೂ ಇರಲು ಸಾಧ್ಯವಿಲ್ಲ. ಒಂದೊಂದು ಕಣ, ಅಣು, ಪರಮಾಣುಗಳಲ್ಲೂ ಅವರು ತಮ್ಮ ಸೂಕ್ಷ್ಮ, ಸೂಕ್ಷ್ಮತರ ರೂಪಗಳಿಂದ ಅತಿನಿಬಿಡವಾಗಿ ದೇವತೆಗಳು ವ್ಯಾಪಿಸಿರುವರು. ಸನ್ನಿಹಿತರಾಗಿರುವರು.

ಒಂದೊಂದು ತತ್ವಕ್ಕೂ ಅನಂತ ಅಂಶಗಳಿವೆ. ಕಾರಣ ಈ ದೇವತೆಗಳ ಸ್ವರೂಪದೇಹ, ಇಂದ್ರಿಯ, ಮನಸ್ಸುಗಳ ಅಂಶಗಳೂ ಅನಂತವಾಗಿರುವದು ಆವಶ್ಯಕ. ಈ ದೇವತೆಗಳ ಚೈತನ್ಯಸ್ವರೂಪವು ಅಣುರೂಪವಾಗಿದೆ. ಆದರೆ ಅವರ ತತ್ತ್ವಾತ್ಮಕ ಶರೀರವು ಬ್ರಹ್ಮಾಂಡವನ್ನೂ ಮೀರಿದೆ.

ಬ್ರಹ್ಮಾಂಡದಲ್ಲಿಯ ಎಲ್ಲ ಪದಾರ್ಥಗಳಲ್ಲಿ ಪ್ರಾಯಃ ಇಪ್ಪತ್ನಾಲ್ಕು ತತ್ವಗಳು ಸೇರಿಕೊಂಡಿವೆ. ಆ ಪದಾರ್ಥಗಳಲ್ಲಿ ಸೇರಿಕೊಂಡ ಆಯಾ ತತ್ತ್ವಗಳ ಆಯಾ ಅಂಶಗಳಲ್ಲಿ ನಡೆಯುವ ಕ್ರಿಯೆಗಳಿಂದ ಆ ಆ ಪದಾರ್ಥಗಳಲ್ಲಿ ಕ್ರಿಯೆಗಳನ್ನು ಮಾಡಿಸಬೇಕು.

ಮಣ್ಣಿನ ಒಂದು ಕಣದ ಹಾರಾಟಕ್ಕೂ ಆ ಕಣದಲ್ಲಿರುವ ಪೃಥಿವೀ ದೇವಿಯ ಅಂಶದ ಕ್ರಿಯೆಯೇ ಕಾರಣ. ಹೀಗೆ ಅನಂತಾಂಶಗಳಲ್ಲಿ ಆಗುವ ಅನಂತ ಕ್ರಿಯೆಗಳಿಗೆ ಈ ದೇವತೆಗಳು ನಿಮಿತ್ತರಾಗಿರುವರು.

ಇಷ್ಟೆಲ್ಲಕ್ಕೂ ಅಗತ್ಯವಾದುದು ಮಾನವಾದಿಗಳ ದೃಷ್ಟಿಯಲ್ಲಿ ಅಚಿಂತ್ಯವಾದ ಅದ್ಭುತ ಅಪ್ರತಿಹತ ಶಕ್ತಿ.

ಈ ಎಲ್ಲ ತತ್ತ್ವಗಳಿಗೆ ಈ ದೇವತೆಗಳೇ ಸ್ವಾಮಿ, ನಿಯಾಮಕರು, ಪ್ರೇರಕರು ಆಗಿರುವರು.

ಎಲ್ಲ ಸಂಸಾರಿಗಳಿಗೂ ಜಡ ದೇಹಗಳಿವೆ. ಈ ಜಡದೇಹಗಳು ಪೃಥಿವ್ಯಾದಿ ತತ್ತ್ವಗಳಿಂದ ನಿಷ್ಪನ್ನವಾಗಿರುವವು. ಅಲ್ಲದೇ ಎಲ್ಲ ಸಂಸಾರಿಗಳಿಗೆ ಮನಸ್ಸು ಹಾಗೂ ಇಂದ್ರಿಯಗಳಿವೆ.

ಈ ದೇಹಗಳಲ್ಲಿರುವ ಮನಸ್ಸು, ಇಂದ್ರಿಯ, ಪೃಥಿವ್ಯಾದಿಗಳಿಗೆಲ್ಲ ಈ ದೇವತೆಗಳು ನಿಯಾಮಕರು.

ಅರ್ಥಾತ್ ಈ ಬಗೆಯ ದೇಹ ಇಂದ್ರಿಯ ಮನಸ್ಸುಗಳನ್ನು ಹೊಂದಿದ ಎಲ್ಲ ಸಂಸಾರಿಗಳಿಗೂ ಈ ದೇವತೆಗಳು ನಿಯಾಮಕರು. ಹೀಗಾಗಿ ಅನಂತ ಜೀವನಿಯಾಮಕತ್ವವೆಂಬ ಮಹಾಮಹಿಮೆಯು ಸಿದ್ಧವಾಗುವದು.

ರಮೆಯಿಂದ ಆರಂಭಿಸಿ ಇಂದ್ರದೇವರ ವರೆಗಿನವರನ್ನು ಪೂರ್ವಪ್ರಸಿದ್ಧವರ್ಜ ಅನಂತ ವೇದಗಳು ಬಣ್ಣಿಸಿ ಬಣ್ಣಿಸಿ ಕೊಂಡಾಡುತ್ತವೆ. ಅನಂತಾನಂತ ಜೀವರಿಗೆ ನಿಯಾಮಕರೂ ಹೌದು.

ಈ ಎಲ್ಲ ದೇವತೆಗಳು ತಮಗೆ ಅಧೀನರಾದ, ತಮಗಿಂತಲೂ ಅಧಮರಾದ, ತಮಗೆ ಪ್ರತಿಬಿಂಬರಾದ ಜೀವರಿಗೆ ಸತ್ಕರ್ಮ, ಅಸತ್ಕರ್ಮಗಳಿಗೆ ಪ್ರೇರಕ-ರಾಗಿರುವರು.

ಸ್ವಯಂ ಈ ದೇವತೆಗಳು ಸ್ವತಂತ್ರನಾದ ಭಗವಂತನಿಂದ ಪ್ರೇರಿತರಾಗಿ ತಮ್ಮ ಅಧೀನರನ್ನು ಪ್ರೇರಿಸುತ್ತಾರೆ. ಇವರ ಪ್ರೇರಣೆಯಿಲ್ಲದೆ ಯಾವ ಜೀವನೂ ಯಾವ ಕರ್ಮವನ್ನೂ ಮಾಡುವಂತಿಲ್ಲ. ಆ ಜೀವರ ಅನಾದಿ ಯೋಗ್ಯತೆ, ಪ್ರಾಚೀನ ಕರ್ಮ, ಎಲ್ಲಕ್ಕೆ ಮೇಲಾಗಿ ಭಗವಂತನ ಸಂಕಲ್ಪ ಹಾಗೂ ಆಜ್ಞೆ ಅವುಗಳಿಗೆ ತಕ್ಕಂತೆ ಪರಮಾತ್ಮನ ಪೂಜಾರೂಪವಾಗಿ ಪುಣ್ಯಕರ್ಮಗಳನ್ನು ಮಾಡಿಸುತ್ತಾರೆ.

ಆದುದರಿಂದ ಸ್ವಾಧಮರಾದ ಅನಂತಾನಂತ ಜೀವರು ಮಾಡುವ ಅನಂತ ವಿಧವಾದ ಪುಣ್ಯಕರ್ಮಗಳಿಂದ ಬರುವ ಫಲವನ್ನು ಆ ಜೀವರಿಗಿಂತ ಅನೇಕ ಗುಣಾಧಿಕವಾಗಿ (ಅನೇಕ ಪಟ್ಟು ಹೆಚ್ಚು) ಹೊಂದುತ್ತಾರೆ. ಅಂದರೆ ಜೀವರು ಮಾಡುವ ಎಲ್ಲ ಶುಭಕರ್ಮಗಳಿಂದ ಒಂದು ಫಲ ಜೀವರಿಗೆ ಬರುವುದಾದರೆ ಜೀವರ ಶುಭಕರ್ಮಪ್ರೇರಕರಾದ ಈ ದೇವತೆಗಳಿಗೆ ಸಾವಿರ ಸಾವಿರ ಪಟ್ಟು ಹೆಚ್ಚು ಫಲವು ಆ ಎಲ್ಲ ಶುಭಕರ್ಮಗಳಿಂದ ದೊರೆಯುವದು.

ಆದರೆ ಪ್ರೇರ್ಯರಾದ ಆ ಯಾವ ಜೀವರ ದೋಷಲೇಪವೂ ಅತ್ಯಲ್ಪ ಪ್ರಮಾಣದಲ್ಲೂ ಆಗುವದಿಲ್ಲ.

ಅಲ್ಲದೇ, ದೇವತೆಗಳು ಜೀವರ ಅಶುಭಕರ್ಮಗಳಿಗೂ ಪ್ರೇರಕರು. ಆದರೆ ಭಗವಂತನ ಆಜ್ಞೆಯಿಂದ, ಭಗವಂತನ ಪೂಜಾರೂಪವಾಗಿ, ವೈಷಮ್ಯ ನೈರ್ಘೃಣ್ಯಗಳಿಲ್ಲದೇ, ಸ್ವಂತ ರಾಗದ್ವೇಷಗಳಿಗೆ ಒಳಪಡದೇ, ಕೇವಲ ಜೀವರ ಪೂರ್ವಕರ್ಮಾನುಸಾರವಾಗಿ ಜೀವರನ್ನು ಅಶುಭಕರ್ಮಗಳಲ್ಲಿ ಪ್ರೇರಿಸುವದರಿಂದ, ಅಲ್ಲದೇ ಶ್ರೀಹರಿಯ ಪರಮಪ್ರಿಯರಾದುದರಿಂದ, ಶ್ರೀಹರಿಯ ಅನುಗ್ರಹದಿಂದ ಜೀವರಿಂದ ಮಾಡಿಸಿದ ಪಾಪದ ಲೇಪವಾಗದಿರುವಂತೆ ಸ್ವಾತಂತ್ರ್ಯವಿದ್ದ ಕಾರಣವೂ ಈ ದೇವತೆಗಳಿಗೆ ಅವರು ಮಾಡಿಸಿದ ಪಾಪಕರ್ಮಗಳ ಫಲ ಸರ್ವಥಾ ತಾಕುವದಿಲ್ಲ.

ಈ ಕುರಿತಾಗಿ ಯಾರೂ ಹಗುರಾಗಿ ವಿಚಾರ ಮಾಡತಕ್ಕದ್ದಲ್ಲ. ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಅಮೋಘ ಶಾಸ್ತ್ರವನ್ನು ಅತ್ಯಂತ ಗಂಭೀರವಾಗಿ ಅಧ್ಯಯನ ಮಾಡಿ ಅರಗಿಸಿಕೊಂಡ ವಿದ್ವನ್ಮಣಿಗಳಲ್ಲಿ ಇದರ ಬಗೆಗೆ ಸಂಶಯಗಳನ್ನು ನಿವಾರಿಸಿಕೊಳ್ಳಬೇಕು.

ಈ ಪ್ರಮೇಯ ಸ್ವಲ್ಪ ಗಹನವಾದುದರಿಂದ ಹೆಚ್ಚು ವಿಸ್ತಾರವಾಗಿ ಬರೆದಿಲ್ಲ. ಶಾಸ್ತ್ರೀಯ ಎಲ್ಲ ಕಾರಣಗಳನ್ನು ಸಂಕ್ಷಿಪ್ತ ಮಾತಿನಲ್ಲಿ ಮೇಲೆ ನಿರೂಪಿಸಲಾಗಿದೆ.

ಈ ಎಲ್ಲ ದೇವತೆಗಳಿಗೆ ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಶ್ಯ, ಈಶಿತ್ವ, ವಶಿತ್ವ ಎಂಬ ಎಂಟು ಮಹಾ ಶಕ್ತಿಗಳು ಇವೆ. ಇವುಗಳಿಗೆ ಅಷ್ಟ ಐಶ್ವರ್ಯ, ಅಷ್ಟ ಸಿದ್ಧಿ ಎಂತಲೂ ಹೆಸರಿದೆ.

ಇದೆಲ್ಲ ಉಳಿದ ದೇವತೆಗಳ ಮಹಿಮೆಯಾದರೆ ಭಾರತೀ, ಸರಸ್ವತೀ, ವಾಯು, ಬ್ರಹ್ಮರ ಮಹಿಮೆ ಇದಕ್ಕಿಂತಲೂ ನೂರಾರು ಸಾವಿರಾರು ಪಟ್ಟು ಹೆಚ್ಚು.

ಇನ್ನು ಬ್ರಹ್ಮದೇವರು, ವಾಯುದೇವರು, (ಉಳಿದ ಋಜುಗಳು) (ಸರಸ್ವತೀ, ಭಾರತಿಯರಿಗೆ ಯಥಾಯೋಗ್ಯವಾಗಿ ಮಹಿಮೆಗಳನ್ನು ಅನ್ವಯಿಸಿಕೊಳ್ಳಬೇಕು.) ಅನಂತ ಭಗವದ್ರೂಪ ಸಾಕ್ಷಾತ್ಕಾರ ಉಳ್ಳವರು. ದೇವರ ಅನಂತ ಗುಣಗಳ ಅಪರೋಕ್ಷಜ್ಞಾನವಿರುವವರು. ಅವ್ಯಾಕೃತಾಕಾಶವ್ಯಾಪಿ ಭಗವದ್ರೂಪವನ್ನು ಸಾಕ್ಷಾತ್ಕರಿಸಿಕೊಂಡವರು. ಅನಂತ ವೇದೋಕ್ತ, ತದನುಕ್ತ, ಭಾರತೋಕ್ತ, ತದನುಕ್ತ ಸಂಪ್ರದಾಯಾಗತ ಅನಂತ ಗುಣೋಪಾಸಕರು.

ಸರ್ವಥಾ ನಿರ್ದೋಷರಾಗಿರುವರು. ಅನಾದಿಯಿಂದ ಅನಂತಕಾಲದವರೆಗೆ ಪಾಪವನ್ನು ಮಾಡದವರು. ಪಾಪಾವಿದ್ಧ ದೈತ್ಯಪೂಗಾವಿದ್ಧರು.

ಅವರಿಗೆ ಅಜ್ಞಾನ, ಸಂಶಯ, ಭ್ರಾಂತಿ, ಕಾಮ, ಕ್ರೋಧ, ಅತಿಮಾನ, ಅಹಂಕಾರ, ಮಮಕಾರ, ಇಚ್ಛಾಪ್ರತಿಹತಿ ಮುಂತಾದ ಯಾವ ದೋಷಗಳೂ ಇಲ್ಲ. ಎಲ್ಲ ಜೀವರ ಯೋಗ್ಯತೆಗೆ ನಿಯಾಮಕರು. ಜೀವಸ್ವರೂಪಕ್ಕೆ ಅಭಿಮಾನಿಗಳು. ಭಗವದನಂತರ ಸೃಷ್ಟ್ಯಾದಿ ಕರ್ತೃಗಳು. ದ್ವಾತ್ರಿಂಶಲ್ಲಕ್ಷಣೋ-ಪೇತರು. ಎಲ್ಲ ಜೀವರಿಗಿಂತಲೂ ಉತ್ತಮರು.

**ಶ್ರೀರಮಾದೇವಿಯ ಕುರಿತು ಎರಡು ಮಾತು.**

ರಮೆಯು ನಿತ್ಯಮುಕ್ತಳು. ಅಪ್ರತಿಮ ಭಕ್ತಳು. ಅನಂತ ಜ್ಞಾನಳು. ದೇವರಂತೆ ಎಲ್ಲ ದೇಶ ಕಾಲಗಳಲ್ಲಿ ವ್ಯಾಪ್ತಳು. ವಿಧಿ ವಾಯು ಮುಂತಾದ ಸಕಲದೇವತೆಗಳಿಗೆ ಅವರವರ ಪದವಿಯನ್ನು ತನ್ನ ಕಿರುನೋಟದಿಂದ ಕರುಣಿಸುವವಳು. ಭಗವಂತನನ್ನು ಬಿಟ್ಟು ಉಳಿದೆಲ್ಲ ಪದಾರ್ಥಗಳಿಗೆ ನಿಯಾಮಕಳು. ಅಭಿಮಾನಿನಿಯೂ. ಉತ್ಪಾದಕಳು. ದೇವರಂತೆ ಇಡಿಯ ವಿಶ್ವದ ಸೃಷ್ಟಿ, ಸ್ಥಿತಿ ಮೊದಲಾದ ಸಮಸ್ತ ಅವಸ್ಥೆಗಳಿಗೆ ಕಾರಣಳು, ಇತ್ಯಾದಿ ಇತ್ಯಾದಿ.

ಹೀಗೆ ಅವರವರ ಮಹಾಮಹಿಮೆಯನ್ನು ಸ್ಮರಿಸುತ್ತಲೇ

ಇಂಥೆಲ್ಲ ಮಹಾಮಹಿಮೋಪೇತರಾದ ರಮಾಬ್ರಹ್ಮವಾಯ್ವಾದಿ ದೇವತೆಗಳೆಲ್ಲರೂ ಭಗವದಧೀನರು. ಇವರು ಭಗವಂತನ ಅಧಿಷ್ಠಾನರು. ಭಗವಂತನಿಂದ ನಿಯಮಿಸಲ್ಪಡುವ ತಾರತಮ್ಯವುಳ್ಳವರು. ಭಗವಂತನಿಂದ ಪ್ರೇರ್ಯರು. ಅವನಿಂದ ನಿಯಮ್ಯರು.

ಇವರೆಲ್ಲರ ಹಿರಿದಾದ ಪದವಿ, ಮಿಗಿಲಾದ ಅಧಿಕಾರ, ಅದ್ಭುತ ಕರ್ತೃತ್ವ, ಅಸಾಧಾರಣ ನಿಯಾಮಕತ್ವ, ಸರ್ವಜೀವಪ್ರೇರಕತ್ವ, ನಿಸ್ಸೀಮ ಬಲ, ಅನಂತ ಶಕ್ತಿ, ಅಪಾರ ಭಕ್ತಿ, ಅಮಿತ ಜ್ಞಾನ, ಅಸಾಧಾರಣ ವಿರಕ್ತಿ, ಅಪ್ರತಿಹತ ಮಹಿಮೆ, ಅನಾದಿತ್ವ, ನಿತ್ಯತ್ವ, ಕಿಂ ಬಹುನಾ ಶ್ವಾಸ, ಚೈತನ್ಯ, ಅಸ್ತಿತ್ವ ಇವೆಲ್ಲವೂ ಭಗವದಧೀನ.

ದೇವರ ಕೃಪೆಯಿದ್ದರೆ ಇಷ್ಟೆಲ್ಲವೂ ಇದೆ. ದೇವರ ಕೃಪೆಯಿಲ್ಲದಿದ್ದರೆ ಏನೇನೂ ಇಲ್ಲ. ಸರ್ವಥಾ ಜ್ಞಾನಶಕ್ತಿಶೂನ್ಯರಾಗುವರು. ಒಂದೊಂದೂ ಕ್ರಿಯೆಯನ್ನು ಮಾಡಲು ಅಸಮರ್ಥರಾಗುವರು. ಪರಮದುಃಖಿಗಳಾಗುವರು. ಸ್ಪಂದಿಸಲೂ, ಶ್ವಾಸ ಬಿಡಲೂ ಅಶಕ್ತರಾಗುವರು.

ಆ ಭಗವಂತನ ಕೃಪಾಕಟಾಕ್ಷಲೇಶ ವೀಕ್ಷಣವು ತಪ್ಪಿದರೆ ಒಂದೇ ಕ್ಷಣದಲ್ಲಿ ವಿಧಿ, ವಾಯು ಮುಂತಾದವರೂ ಶ್ವಪಚನಿಗಿಂತಲೂ ಅತಿ ಕೀಳಾಗುವುದರಲ್ಲಿ ಏನೂ ಆಶ್ಚರ್ಯವಿಲ್ಲ.

ಅಷ್ಟೇ ಏನು ? ಅವರೆಲ್ಲರ ಅಸ್ತಿತ್ವವೂ ಬುಡಮೇಲಾಗುವದು ಸಾಧ್ಯ. ಶಶವಿಷಾಣದಂತೆ ಸ್ವರೂಪತಃ ಅಸತ್ಯರಾಗುವರು.

ಇತ್ಯಾದಿ ಮನಸ್ಸಿನಿಂದಲೂ ಅಚಿಂತ್ಯವಾದ, ಊಹಿಸಲು ಸಾಧ್ಯವಾಗದ ಮಹಾ ಅನರ್ಥಗಳು ಇಂಥ ಮಹಾಮಹಿಮ ದೇವತೆಗಳಿಗೂ ಆಗುತ್ತವೆ ಎಂದು ಕ್ಷಣಕ್ಷಣಕ್ಕೂ ಮರೆಯದೆ,

ಹಿಂದೆ ಹೇಳಿದ ದೇವತೆಗಳ ಅದ್ಭುತ ಮಹಾತ್ಮ್ಯವನ್ನೂ ಈಗ ತಿಳಿಸಿದ ಸರ್ವಥಾ ಸರ್ವಥಾ ಭಗವದಧೀನತ್ವವನ್ನೂ ನೆನೆಯುತ್ತ, ಅಂಥ ಅದ್ಭುತ ಮಹಾಮಹಿಮಾಶಾಲಿಗಳಾದ ಸರ್ವಜೀವೋತ್ತಮರಾದ ದೇವತಾಚೂಡಾ-ಮಣಿಗಳಾದ ಶ್ರೇಷ್ಠ ದೇವತೆಗಳು ಸುತ್ತಲು ದೇವರಿಗೆ ಅಭಿಮುಖವಾಗಿ ನಿಂತು, ಅಕುಂಠಿತ ಉತ್ಸಾಹದಿಂದ ಭರಿತರಾಗಿ, ಸತತ ಸೇವಾ ಸನ್ನದ್ಧರಾಗಿ, ಪರಮ ಭಕ್ತಿಯಿಂದ ಅವಿರತ ಭಗವಂತನ ಅನುಕಂಪ ಅಪಾಂಗಲೇಶವನ್ನು ಪ್ರಾರ್ಥಿಸುತ್ತ

ಸಂತತ, ಭಕ್ತಿಪುರಃಸರವಾಗಿ, ವಿನಯದಿಂದ, ಮನಸ್ಸಿನ ಪರಿಪೂರ್ಣವಾದ ಪ್ರಾವಣ್ಯದಿಂದ ಸಂಸೇವಿಸಲ್ಪಡುವ ಸುರಗುರುತಮನಾಥನಾದ ಸರ್ವೋತ್ತಮ, ಸಾರ್ವಭೌಮ ನಾರಾಯಣನ ಮಹಿಮೆ ಪರಮ ಪರಮ ನಿಸ್ಸೀಮ, ಅಚಿಂತ್ಯ, ಅದ್ಭುತವೆಂದು ಆವರಣದೇವತಾ ಸಹಿತನಾದ ದೇವರನ್ನು ಕ್ಷಣ ಕ್ಷಣಕ್ಕೂ ಗಾಢವಾಗಿ ಮನದಲ್ಲಿ ತಿಳಿದು, ಸ್ಮರಿಸಿ, ಧ್ಯಾನಿಸಿ, ಪೂಜಿಸಬೇಕು.

ಈರೀತಿ ಶ್ರೀಹರಿಯೇ ಸರ್ವೋತ್ತಮ, ಅವನೊಬ್ಬನೇ ಸರ್ವಥಾ ಪರನಿರಪೇಕ್ಷ. ಉಳಿದವರೆಲ್ಲರೂ ಹರಿಯ ಅಧೀನರು, ನಿಯಮ್ಯರು, ಕಿಂಕರರು, ದಾಸಾನುದಾಸರು ಎಂದು ತಿಳಿಯಬೇಕು.

ಈ ಎಲ್ಲ ತತ್ವಗಳನ್ನು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವಿಷ್ಣುವಿನಸರ್ವೋತ್ತಮತ್ವವನ್ನು ಅನಂತ ಶಾಸ್ತ್ರಗಳ, ಯುಕ್ತಿಗಳ, ಮಹಾನುಭಾವರ ಅನುಭವಗಳ ಆಧಾರದ ಮೇಲೆ ಸಂಶಯಾತೀತವಾಗಿ ಸಮರ್ಥಿಸಿದ್ದಾರೆ.

ಆದುದರಿಂದ ಶ್ರೀಹರಿಯನ್ನೇ ಸರ್ವೋತ್ತಮನೆಂದು ಪೂಜಿಸಬೇಕು. ಬೇರೆ ಯಾವ ದೇವತೆಗಳನ್ನೂ ಸ್ವತಂತ್ರವಾಗಿ ಪೂಜಿಸತಕ್ಕದ್ದಲ್ಲ.

ಅವರೆಲ್ಲರನ್ನು ಶ್ರೀಹರಿಯ ಪರಿವಾರದೇವತೆಗಳಾಗಿ ಪೂಜಿಸಬೇಕು. ಈ ಮುಖಾಂತರ ಶ್ರೀಮದಾಚಾರ್ಯರು ವೇದಗಳಲ್ಲಿ ಮೇಲ್ನೋಟಕ್ಕೆ ಕಾಣಸಿಗುವ ಅನೇಕ ದೇವತಾವಾದಕ್ಕೆ (Polytheism) ಹಾಗೂ ಉಪನಿಷತ್ತು ಮುಂತಾದ ವಾಙ್ಮಯಗಳಲ್ಲಿ ನಿರೂಪಿತವಾದ ಏಕಪರದೇವತಾವಾದಕ್ಕೆ (Monotheism) ಸಮಂಜಸ ಸ್ನೇಹದ ಸಮನ್ವಯವನ್ನು ಹಾಡಿ ಹಾಡಿ ಬಣ್ಣಿಸಿದ್ದಾರೆ.

ತಿಳಿವಿನ ಕಣ್ಣಿದ್ದವರಾದರೂ ತಿಳಿದು ವೇದವನ್ನು ದೂಷಿಸುವದು ಬಿಡಲಿ ಎಂದು ಸೂಚಿಸಿರುವೆ. ಪಾಶ್ಚಾತ್ಯರಿಗೆ ಗೊಂದಲಕ್ಕೀಡು ಮಾಡಿದ್ದೇ ಇದು.

ಈ ಆವರಣ ದೇವತೆಗಳಿಗೆ ಪ್ರತ್ಯೇಕವಾಗಿ ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ, ಸ್ನಾನ, ವಸ್ತ್ರ ವಿಭೂಷಣ, ಉಪವೀತ, ಆಸನ, ಗಂಧ ಪುಷ್ಪಾದಿಗಳನ್ನು ಸಮರ್ಪಿಸಬೇಕು. ಮುಂಬರುವ ಧೂಪದೀಪಾದಿಗಳನ್ನು ಮೂಲದೇವರೊಂದಿಗೆಯೇ ಅರ್ಪಿಸುವುದು.

ಅನಂತರ ವಜ್ರನಾಭ, ಹರೀಶ್ವರ, ಗಂಗಾತನಯ, ಶಂಖನಿಧೀಶ್ವರ, ಜಯ, ವಿಜಯ, ಧಾತಾ, ವಿಧಾತಾ, ಭದ್ರ ಸುಭದ್ರ, ಅಮೃತೇಶ್ವರ, ವಿರೂಪಾಕ್ಷರೆಂಬ

ಹನ್ನೆರಡು ಜನ ವಿಷ್ಣುವಿನ ದ್ವಾರಪಾಲಕರು. ಅವರನ್ನು 'ನಮಃ' ಎಂಬ ಶಬ್ದದಿಂದ ನಮಿಸಬೇಕು. ಅದೇ ಅವರ ಪೂಜೆ.

## ಧೂಪ-ದೀಪ

ಪೀಠಾವರಣ ದೇವತೆಗಳಿಗೆ ಹಾಗೂ ಮೂಲದೇವರಿಗೆ ಧೂಪವನ್ನು ತೋರಿಸುವುದು. ಧೂಪಕ್ಕೆ ದಶ ಅಂಗಗಳು. ಚಂದನ, ಅಗರು, ಕರ್ಪೂರ, ದೇವದಾರು, ಗುಗ್ಗುಲ, ಜಾಜೀಫಲ, ಶ್ರೀಫಲ, ಉಶೀರ, ಕೋಷ್ಠ, ಸಾಲನಿರ್ಯಾಸ ಎಂದು.

ಜೊತೆಗೆ ಆಕಳಿನ ತುಪ್ಪವನ್ನು ಸೇರಿಸಬೇಕು. ಧೂಪವನ್ನು ಕೈಯಲ್ಲಿ ಹಿಡಿದು ವ್ಯಜನದಿಂದ (ಬೀಸಣಿಕೆ) ಬೀಸಿ ಧೂಪವನ್ನು ಸಮರ್ಪಿಸಬೇಕು. ಹೊರತು ಕೈಗಳಿಂದ ಅಥವಾ ಬಟ್ಟೆಯಿಂದ ಗಾಳಿ ಹಾಕಿ ಅಥವಾ ಮುಖದಿಂದ ಊದಿ ಧೂಪವನ್ನು ದೇವರಿಗೆ ತೋರಿಸಬಾರದು.

ಧೂಪಸಮರ್ಪಣೆ ಮಾಡುವಾಗ ಘಂಟೆಯನ್ನು ಬಾರಿಸಲೇ ಬೇಕು. ಭಕ್ತಿಯಿಂದ ಕಣ್ಣಾರೆ ಭಗವಂತನನ್ನು ಕಂಡರೆ ಕುಲಕೋಟಿಯು ಉದ್ಧಾರ ವಾಗುವುದು. ಆ ಧೂಪದ ಪರಿಮಳವನ್ನು ನಾವು ಸೇವಿಸಿದರೂ ಅದಕ್ಕೆ ನಿರ್ಮಾಲ್ಯತ್ವ ದೋಷವಿಲ್ಲ.

ಏಕಾರತಿ ಎಂದರೆ ತುಪ್ಪಹಾಕಿದ ಮೂರು ಬತ್ತಿಗಳಿಗೆ ದೀಪವನ್ನು ಹಚ್ಚಿ ದೇವರಿಗೆ ತೋರಿಸುವದು. ಪಾದದಿಂದ ಮಸ್ತಕದವರೆಗೆ ಒಟ್ಟಾರೆ ಮೂರುವರೆ ಸಲ ತಿರುಗಿಸಿ, ದೀಪವನ್ನು ಶಾಂತಗೊಳಿಸಬೇಕು. ಅದು ಉಳಿದರೆ ರಾಕ್ಷಸರು ಅದನ್ನೆಳೆದು ಒಯ್ಯುವರು.

## ನೈವೇದ್ಯ

(ಏಕಾದಶೀ ದಿನ ಕೇವಲ ಹಣ್ಣು, ತೆಂಗು ಹಾಲು ಮುಂತಾದವುಗಳನ್ನೇ ನಿವೇದಿಸಬೇಕು. ಅನ್ನಾದಿಗಳ ನೈವೇದ್ಯವನ್ನು ಮಾಡಬಾರದು.)

ದೇವರ ಎದುರಿನಲ್ಲಿ ಭೂಮಿಯನ್ನು ಶೋಧಿಸಬೇಕು. ಗೋಮಯದಿಂದ ಉಪಲೇಪಿಸಬೇಕು. ನಾಲ್ಕು ಕೋಣದ ಮಂಡಲವನ್ನು ಮಾಡಬೇಕು. ಮೇಲೆ ಶ್ರೀಬೀಜವನ್ನು ಬರೆಯಬೇಕು.

ಅದರ ಮೇಲೆ ಮೂರುಪಾದದ ಪೀಠವನ್ನು ಇಡಬೇಕು. ಅದರ ಮೇಲೆ

ಬಾಳೆ ಎಲೆ. ಅದರಲ್ಲಿ ಸಾಧ್ಯವಿದ್ದರೆ ಸುವರ್ಣ ರಜತ ತಟ್ಟೆಯನ್ನು ಇಡಬೇಕು. ಮೊದಲು ಪಾತ್ರಾಭಿಘಾರ (ಎಲೆ ಅಥವಾ ತಟ್ಟೆಯಲ್ಲಿ ಸ್ವಲ್ಪ ತುಪ್ಪವನ್ನು ಹಾಕುವದು.)

ಮೊದಲು ಅನ್ನ, ಬಳಿಕ ಉಪ್ಪು, ವ್ಯಂಜನಾದಿಗಳು ನಂತರ ಲೇಹ್ಯ (ನೆಕ್ಕಲು ಯೋಗ್ಯವಾದದ್ದು) ಪೇಯ (ಕುಡಿಯಲು ಯೋಗ್ಯವಾದದ್ದು) ಚೋಷ್ಯ (ಹೀರಲು ಯೋಗ್ಯವಾದದ್ದು) ಖಾದ್ಯ (ತಿನ್ನಲು ಯೋಗ್ಯವಾದದ್ದು) ಹೀಗೆ ನಾಲ್ಕು ಬಗೆಯ ಭೋಜ್ಯಪದಾರ್ಥಗಳನ್ನು ಬಡಿಸಬೇಕು.

ಬಳಿಕ ಪರಮಾನ್ನ, ಹರಿದ್ರಾನ್ನ, ಚಿತ್ರಾನ್ನ, ಕೇವಲಾನ್ನ, ಗುಡೋದನ, ಮುದ್ಗಾನ್ನ ಎಂಬ ಆರು ಬಗೆಯ ಅನ್ನಗಳನ್ನು ಹಾಕಬೇಕು.

### ಅನ್ನಾದಿಗಳನ್ನು ಎಲೆಯಲ್ಲಿ ಬಡಿಸುವ ಕ್ರಮ

ಆಗ್ನೇಯದಲ್ಲಿ ಭಕ್ಷಗಳು, ಈಶಾನ್ಯದಲ್ಲಿ ಪಾಯಸ,
ನೈರ್ಋತ್ಯದಲ್ಲಿ ಲೇಹ್ಯ ಪೇಯಗಳು, ವಾಯವ್ಯದಲ್ಲಿ ಉಪಭೋಜನ
ಮಧ್ಯದಲ್ಲಿ ಅನ್ನ, ಅನ್ನ ಪರಮಾನ್ನಗಳ ಮಧ್ಯದಲ್ಲಿ ಘೃತಪಾತ್ರ
ಎಲೆಯ ಬಳಿಯಲ್ಲಿ ಪಾನೀಯ.

ಈ ಅನ್ನಾದಿ ಪದಾರ್ಥಗಳನ್ನು ಮಾಡಿದವರು ದೇವತೆಗಳು ಎಂದು ಸ್ಮರಿಸಬೇಕು. ಅನ್ನವನ್ನು ಸರಸ್ವತೀ, ಭಕ್ಷ್ಯವನ್ನು ವಾಯು, ಪಾಯಸವನ್ನು ಭಾರತೀ, ರಸವನ್ನು ಬ್ರಹ್ಮ, ಸೂಪವನ್ನು ಘೃತವನ್ನು ಮಹಾಲಕ್ಷ್ಮೀ, ಶಾಕಾದಿಗಳನ್ನು ಇಂದ್ರ ಶಚ್ಯಾದಿಗಳು ಮಾಡಿದ್ದಾರೆಂದು ಧ್ಯಾನಿಸಬೇಕು.

ನೈವೇದ್ಯಪ್ರೋಕ್ಷಣೆಗಾಗಿ ಮೀಸಲಿಟ್ಟ ನೀರನ್ನು ಕೈಯಲ್ಲಿ ತೆಗೆದುಕೊಂಡು ಜೊತೆಗೆ ತುಲಸೀದಲವನ್ನು ಸೇರಿಸಿ ಎಂಟು ಬಾರಿ ಮೂಲಮಂತ್ರದಿಂದ ಆ ನೀರನ್ನು ಅಭಿಮಂತ್ರಿಸಿ, ವಿಷ್ಣುಗಾಯತ್ರಿಯಿಂದ ಆ ಜಲಪ್ರೋಕ್ಷಣೆಯನ್ನು ಮಾಡಿ

**ಸೌವರ್ಣೈಃ ಸ್ಥಾಲಿವರ್ಯೈರ್ಮಣಿಗಣಖಚಿತೈಃ ಗೋಘೃತಾಕ್ತಾನ್ ಸುಪಕ್ವಾನ್**
**ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾನಪಿ ಪರಮಮಹಚ್ಚೋಷ್ಯಮನ್ನಂ ನಿಧಾಯ ।**
**ನಾನಾಶಾಕೈರುಪೇತಂ ದಧಿ ಮಧು ಸುಘೃತಂ ಕ್ಷೀರಪಾನೀಯಯುಕ್ತಂ**
**ತಾಂಬೂಲಂ ಚಾಪಿ ವಿಷ್ಣೋಃ ಪ್ರತಿದಿವಸಮಹಂ ಮಾನಸೇ ಚಿಂತಯಾಮಿ ॥★॥**

ಎಂಬ ಶ್ಲೋಕದಿಂದಲೂ ನಾರಾಯಣಮಂತ್ರದಿಂದಲೂ ನೈವೇದ್ಯವನ್ನು ಮುಟ್ಟಿ ಅಭಿಮಂತ್ರಿಸಬೇಕು.

ರನ್ನಮಣಿಗಳಿಂದ ಖಚಿತವಾದ ಚಿನ್ನದ ತಟ್ಟೆ, ಬಟ್ಟಲುಗಳು. ಅಲ್ಲಿ ಹಸುವಿನ ತುಪ್ಪದಲ್ಲಿ ಚಂದವಾಗಿ ಮಾಡಿದ ಭಕ್ಷ್ಯ, ಭೋಜ್ಯ, ಲೇಹ್ಯ (ನೆಕ್ಕಲು ಯೋಗ್ಯವಾದದ್ದು), ಚೋಷ್ಯ (ಹೀರಲು ಯೋಗ್ಯವಾದದ್ದು) ಈ ರೀತಿ ನಾನಾ ವಿಧ ಅತಿ ಉತ್ಕೃಷ್ಟವಾದ ಅನ್ನ, ಆಹಾರಗಳನ್ನು ಬಡಿಸುವದು. ನಾನಾ ಕಾಯಿಪಲ್ಯೆ ಹಾಗೂ ತೊಪ್ಪಲು ಪಲ್ಯೆಗಳನ್ನು ಬಡಿಸುವುದು. ಜೊತೆಗೆ ಮೊಸರು, ಜೇನು, ಉತ್ತಮ ತುಪ್ಪ, ಹಾಲು, ಕುಡಿಯುವ ನೀರು ಅಲ್ಲದೇ ತಾಂಬೂಲ ಇವೆಲ್ಲವನ್ನೂ ದೇವರಿಗೆ ಸಮರ್ಪಿಸುತ್ತಿದ್ದೇನೆ ಎಂದು ಮನಸ್ಸಿನಲ್ಲಿ ಚಿಂತಿಸಬೇಕು.

## ಮುದ್ರಾಪ್ರದರ್ಶನ

ನಾವು ಮಾಡಿದ ಅನ್ನವನ್ನು

ಅಮೃತಮಯ ಗೊಳಿಸುವದಕ್ಕಾಗಿ ಧೇನುಮುದ್ರೆಯನ್ನು,

ಸಂರಕ್ಷಣೆಗಾಗಿ ಚಕ್ರಮುದ್ರೆಯನ್ನು,

(ಇರಬಹುದಾದ) ವಿಷವನ್ನು ಪರಿಹರಿಸುವದಕ್ಕೆ ಗರುಡಮುದ್ರೆಯನ್ನು,

ಪವಿತ್ರಗೊಳಿಸುವದಕ್ಕಾಗಿ ಶಂಖಮುದ್ರೆಯನ್ನು,

ಅನ್ನದ ವಿಪುಲತ್ವಕ್ಕಾಗಿ ಮೇರುಮುದ್ರೆಯನ್ನು,

ಶೀತಲತ್ವಕ್ಕಾಗಿ ಚಂದ್ರಮುದ್ರೆಯನ್ನು,

ಆಯಾ ಮಂತ್ರಗಳನ್ನು ಪಠಿಸುತ್ತಾ ತೋರಿಸಬೇಕು.

## ಭೋಜನಮಂದಿರಕ್ಕೆ ಭಗವಂತನ ಸ್ವಾಗತ

**ದೇವದೇವಂ ರಮಾನಾಥಂ ಸರ್ವಾಂತರ್ಯಾಮಿಣಂ ಹರಿಮ್ ।**
**ಆನೀಯ ಪಾದುಕಾಭ್ಯಾಂ ಚ ಬೃಹಚ್ಛಾಲಾನಿವೇಶನಮ್ ॥★॥**

**ಕರಾವಲಂಬನಂ ದತ್ವಾ ಚಾಮರಾದಿಸುವೈಭವೈಃ ।**
**ಕದಲೀಕಪಿತ್ಥಜಂಬೀರನಾನಾಫಲವಿರಾಜಿತೇ ॥★॥**

**ಭ್ರಾಜನ್ಮಣಿಗಣಾಕೀರ್ಣಚತುಃಸ್ತಂಭಾತ್ಮಕೇ ಶುಭೇ ।**
**ಮಂಡಪೇ ಸ್ವರ್ಣರತ್ನಾಢ್ಯೇ ರಮ್ಯಸ್ಥಲಸುಭಾಸ್ವರೇ ॥★॥**

ವಜ್ರಸ್ಫಟಿಕವೈಢೂರ್ಯಷಟ್ಸೋಪಾನವಿರಾಜಿತೇ ।
ಉಪವೇಶ್ಯ ಪುರಃ ಪತ್ರಂ ಕದಲೀಸಂಜ್ಞಕಂ ಸ್ಮರೇತ್ ॥★॥

ಪ್ರದೀಪ್ಯ ದೀಪೌ ಪಾರ್ಶ್ವೇ ದ್ವೌ ಸ್ವರ್ಣಸ್ತಂಭೇ ಘೃತಾದಿಭಿಃ ।
ತಸ್ಯೋಪರಿ ಸ್ವರ್ಣಪಾತ್ರಂ ತತ್ರ ಸ್ಥೂಲಾಣುವಾಟಿಕಾಃ ॥★॥

ಸ್ಥೂಲೋದಪಾತ್ರಮಪಿ ಚ ತತ್ಸಮೀಪೇ ನ್ಯಸೇದ್ಬುಧಃ ।
ಕೇಶವಾದಿಚತುರ್ವಿಂಶದ್ ಬ್ರಾಹ್ಮಣಾಂಸ್ತು ಪ್ರಕಲ್ಪಯೇತ್ ॥★॥

ಕೇಶವಾದ್ಯಾಸ್ಸಾಕ್ಷಿಭೋಜ್ಯಾಸ್ತಥಾನಂತಾಸನಾದಿಕಾಃ ।
ಭೋಜನೀಯಂ ಸ್ವರ್ಣಪಾತ್ರೇ ಜೀವಾಂತರ್ಯಾಮಿಣಂ ಹರಿಮ್ ॥★॥

ಅನಂತಾಸನವೈಕುಂಠಶ್ವೇತದ್ವೀಪಹೃದಬ್ಜಗಾನ್ ।
ಪದ್ಮನಾಭವಿಕುಂಠಶ್ರೀನಾರಾಯಣಸುಪೂರುಷಾನ್ ॥★॥

ಆದಿತ್ಯಸಂಸ್ಥಸವಿತೃನಾಮಕೇನ ಸಹಾರ್ಚಯೇತ್॥ ಇತ್ಯನುಸಂದಧ್ಯಾತ್ ॥

ದೇವತೆಗಳಿಗೆ ದೇವನಾದ ರಮೆಗೂ ಅರಸನಾದ ಸರ್ವರಿಗೆ ಅಂತರ್ಯಾಮಿಯಾದ ಹರಿಯನ್ನು ನಮ್ಮ ಬಿಂಬರೂಪನನ್ನು ಕರೆ ತರಬೇಕು. ಎರಡು ಪಾದುಕೆಗಳನ್ನು ಅರ್ಪಿಸಿ, ದೇವರಿಗೆ ಕರಾವಲಂಬನವನ್ನು ಕೊಟ್ಟು, ಚಾಮರ, ವ್ಯಜನ, ಛತ್ರಗಳ ವೈಭವದೊಂದಿಗೆ ದೊಡ್ಡದಾದ ಕೋಣೆಗೆ ಕರೆ ತರಬೇಕು. ಬಾಳೆಹಣ್ಣು, ಕಪಿತ್ಥ, ಜಂಬೀರ ಮುಂತಾದ ನಾನಾ ಫಲಗಳನ್ನು ತೂಗು ಹಾಕಿದ ಹೊಳಪಿನ ಮಣಿಗಳಿಂದ ಕಂಗೊಳಿಸುವ ನಾಲ್ಕು ಸ್ತಂಭಗಳು. ಶುಭವಾದ ಚಿನ್ನರನ್ನಗಳಿಂದ ಸಂಪನ್ನವಾದ ಮಂಟಪ. ಹೊಳೆಯುವ ರಮ್ಯ ಸ್ಥಲ. ವಜ್ರ-ಸ್ಫಟಿಕವೈಢೂರ್ಯಗಳಿಂದ ಬೆಳಗುವ ಆರು ಸೋಪಾನಗಳು. ಅಂಥ ಮಂಟಪದಲ್ಲಿ ದೇವರನ್ನು ಕೂಡಿಸಬೇಕು. ಬಾಳೆಯ ಎಲೆಯನ್ನು ಹಾಕುವದು. ಎಡ ಬಲಗಳಲ್ಲಿ ಸ್ವರ್ಣಸ್ತಂಭದ ಎರಡು ತುಪ್ಪದ ದೀಪಗಳನ್ನು ಬೆಳಗುವದು. ಆ ಬಾಳೆಯ ಎಲೆಯ ಮೇಲೆ ಚಿನ್ನದ ಪಾತ್ರೆಯನ್ನು ಇಡುವುದು. ಜೊತೆಗೆ ದೊಡ್ಡ, ಚಿಕ್ಕ ಬಟ್ಟಲುಗಳನ್ನು ಇಡಬೇಕು. ಪಕ್ಕದಲ್ಲಿ ನೀರಿನ ದೊಡ್ಡ ಕಲಶವನ್ನು ಇಡಬೇಕು. ಕೇಶವನಿಂದ ಆರಂಭಿಸಿ ಕೃಷ್ಣನ ವರೆಗಿರುವ ಇಪ್ಪತ್ನಾಲ್ಕು ಭಗವಂತನ ರೂಪಗಳನ್ನು ಹಾಗೂ ಅನಂತಾಸನ, ಶ್ವೇತದ್ವೀಪ, ವೈಕುಂಠಗಳಲ್ಲಿರುವ ಭಗವಂತನ ಮೂರು ರೂಪಗಳನ್ನು ಅಲ್ಲದೇ ಜೀವಾಂತರ್ಯಾಮಿ ಭಗವಂತನನ್ನು ಜೊತೆಗೆ ಆದಿತ್ಯಾಂತರ್ಯಾಮಿ ಸವಿತೃನಾಮಕ ದೇವರನ್ನು ಹೀಗೆ ಒಟ್ಟು

ಭಗವಂತನ ಇಪ್ಪತ್ತೊಂಭತ್ತು ರೂಪಗಳನ್ನು ಸಾಕ್ಷಿಭೋಜ್ಯರನ್ನಾಗಿ ಭೋಜನಕ್ಕೆ ಕೂಡಿಸಬೇಕು.

ಬಳಿಕ ದೇವತೆಗಳಿಗೆ ಅಧಿದೇವನಾದ ರಮೆಯರಸ ಸರ್ವಾಂತರ್ಯಾಮಿ ಶ್ರೀಹರಿಯನ್ನು ಭೋಜನ ಮಂದಿರಕ್ಕೆ ಕರೆತರಬೇಕು.

ರತ್ನಖಚಿತ ಚಿನ್ನ ಪಾದುಕೆಗಳನ್ನು ಒಪ್ಪಿಸುವದು. ಸಿಂಹಾಸನದಲ್ಲಿ ಕುಳಿತ ಭಗವಂತನಿಗೆ ಮನಸ್ಸಿನಿಂದಲೇ ಕರಾವಲಂಬನವನ್ನು ಕೊಡಬೇಕು.

ದೇವತೆಗಳು ಭಗವಂತನಿಗೆ ಛತ್ರವನ್ನು ಹಿಡಿದು, ಚಾಮರವನ್ನು ಬೀಸಿ, ವ್ಯಜನದಿಂದ ಗಾಳಿ ಹಾಕುತ್ತಾ ಭಗವಂತನನ್ನು ಸೇವಿಸುತ್ತಿದ್ದಾರೆ.

ಮುಂಭಾಗದಲ್ಲಿ ದೇವದೇವನಿಗೆ ಜಯವಾಗಲಿ ! ಲಕ್ಷ್ಮೀನಾಥನಿಗೆ ಜಯವಾಗಲಿ ! ಸರ್ವಾಂತರ್ಯಾಮಿಯಾದ ಬಿಂಬನಿಗೆ ಜಯವಾಗಲಿ ! ಎಂದು ಜಯಘೋಷ ನಡೆಯುತ್ತಿದೆ.

ಸಾಲುಸಾಲಾಗಿ ದೀವಿಗೆಗಳನ್ನು ಕೈಯಲ್ಲಿ ಹಿಡಿದಿದ್ದಾರೆ. ಬದಿಯಲ್ಲಿ ರತ್ನಸ್ತಂಭಗಳು ದೇದೀಪ್ಯಮಾನವಾಗಿವೆ. ರತ್ನಗಂಬಳಿಯನ್ನು ಹಾಸಿದ್ದಾರೆ. ತಳಿರು ತೋರಣಗಳನ್ನು ಕಟ್ಟಿದ್ದಾರೆ.

ಸುಗಂಧ ಸುಮನದ ಪರಿಮಳ, ಧೂಪದ ಆಮೋದ ಎಲ್ಲೆಡೆ ಹರಡಿದೆ. ಸ್ವಲ್ಪ ದೂರದಲ್ಲಿ ಅಪ್ಸರೆಯರು ನೃತ್ಯಮಾಡುತ್ತಿದ್ದಾರೆ. ಅನಂತಾವತಾರಗಳ ವಿವಿಧ ಲೀಲೆಗಳನ್ನು ಹಾವಭಾವಗಳಿಂದ ತೋರಿಸುತ್ತಿದ್ದಾರೆ.

ಗಂಧರ್ವರು ಕೆಲವರು ಹಾಡುತ್ತಲಿದ್ದಾರೆ. ಇನ್ನು ಹಲವರು ಪಂಚವಾದ್ಯಗಳ ಧ್ವನಿಮಾಡುತ್ತ ಭಗವಂತನನ್ನು ಸೇವಿಸುತ್ತಲಿದ್ದಾರೆ.

ದೇವರನ್ನು ಭೋಜನಮಂದಿರಕ್ಕೆ ಕರೆ ತಂದದ್ದಾಯಿತು.

ಆ ಭೋಜನಮಂದಿರದಲ್ಲಿ ಚಿನ್ನದ ನೆಲ. ಸ್ಫಟಿಕದ ಗೋಡೆ, ವಜ್ರದ ಸ್ತಂಭ, ರತ್ನದ ಸೋಪಾನ, ವೈಡೂರ್ಯದ ವಾತಾಯನ, ಮಾಣಿಕ್ಯದ ಬಾಗಿಲು, ಹವಳದ ಹೊಸ್ತಿಲು, ದಿವ್ಯ ಸುವರ್ಣ ವೇದಿಕೆ, ವಿಶಾಲವಾದ ಪೀಠ.

ಸ್ತಂಭಗಳಿಗೆ ಕದಳೀಕಂಬವನ್ನು ಕಟ್ಟಿದ್ದಾರೆ. ಬಾಳೆ, ಕಪಿತ್ಥ, ಜಂಬೀರ, ಮಾವು, ದ್ರಾಕ್ಷೆ ಮುಂತಾದ ಹಣ್ಣುಗಳ ಗೊಂಚಲುಗಳನ್ನು ತೂಗುಹಾಕಿರುವರು.

ಸುತ್ತಲೂ ಹಚ್ಚು ಹಸಿರಿನ ಎಲೆಗಳ ತೋರಣ. ಘಮಘಮಿಸುವ ಪರಿಮಳದ ಹೂಗಳನ್ನು ನೆಲದಲ್ಲಿ ಚೆಲ್ಲಿ, ಮಾಲೆಗಳನ್ನು ಗೊಡೆಗಳಿಗೆ ಕಟ್ಟಿ, ಸ್ತಂಭಗಳಿಗೆ ತೂಗುಹಾಕಿದ್ದಾರೆ.

ನಾಲ್ಕು ಸ್ತಂಭಗಳ ಈ ಮಂಟಪ ಸುವರ್ಣಪೂರ್ಣ, ರತ್ನಾಢ್ಯ, ಪರಮರಮ್ಯ, ಸುಭಾಸ್ವರವಾಗಿದೆ.

ಮಧ್ಯದ ವೇದಿಕೆಯನ್ನು ಏರುವದಕ್ಕೆ ವಜ್ರ ಸ್ಫಟಿಕ ವೈಡೂರ್ಯಗಳಿಂದ ತುಂಬಿಕೊಂಡ ಆರು ಮೆಟ್ಟಲುಗಳು ಎಂದು ಚಿಂತಿಸಬೇಕು.

## ಸಾಕ್ಷಿಭೋಜ್ಯರು

ಆಮೇಲೆ, ನಮ್ಮ ಬಿಂಬಮೂರ್ತಿಯ ನೈವೇದ್ಯದ ಸಂದರ್ಭದಲ್ಲಿ ಸಾಕ್ಷಿಭೋಜನಕ್ಕಾಗಿ ಅನೇಕರನ್ನು ಆಮಂತ್ರಿಸುವದು ಅಗತ್ಯ.

ಜಗನ್ನಿಯಾಮಕ ಸರ್ವೇಶ ಸರ್ವೋತ್ತಮನಾದ ಭಗವಂತನ ಜೊತೆಗೆ ಸಾಕ್ಷಿಭೋಜನಕ್ಕಾಗಿ ಕೂಡಲು ಇನ್ನಾರೂ ಯೋಗ್ಯರಲ್ಲ.

ದೇವರಿಗೆ ಸಮಾನರೇ ದೇವರ ಪಂಕ್ತಿಯಲ್ಲಿ ಯೋಗ್ಯರು. ದೇವರೇ ದೇವರಿಗೆ ಸಮಾನನಲ್ಲವೇ ? ಆದ್ದರಿಂದ ದೇವರನ್ನೇ ದೇವರ ಪಂಕ್ತಿಯಲ್ಲಿ ಸಾಕ್ಷಿ-ಭೋಜನಕ್ಕಾಗಿ ಕೂಡಿಸಬೇಕು.

ಅದಕ್ಕೋಸ್ಕರ ಅನಂತಾಸನ, ಶ್ವೇತದ್ವೀಪ, ವೈಕುಂಠ, ಸರ್ವಜೀವರು ಮತ್ತು ಆದಿತ್ಯ ಇವರಲ್ಲಿ ಇರುವ ಪದ್ಮನಾಭ ನಾರಾಯಣ ವಿಕುಂಠ, ಪುರುಷನಾಮಕ ಬಿಂಬರೂಪ, ಸವಿತೃನಾರಾಯಣರಿಗೆ, ಇದಲ್ಲದೇ ಕೇಶವಾದಿ ಚತುರ್ವಿಂಶತಿ ರೂಪಗಳಿಗೆ ಆಮಂತ್ರಣವನ್ನು ಕಳಿಸಬೇಕು.

'ನನ್ನ ಬಿಂಬಮೂರ್ತಿಯ ನೈವೇದ್ಯದ ಕಾಲದಲ್ಲಿ ಅವನಿಗೆ ಸಮಾನರಾದ (ಅಭಿನ್ನರಾದ) ತಾವೆಲ್ಲರೂ ನಿತ್ಯತೃಪ್ತರಾಗಿದ್ದರೂ ಸಾಕ್ಷಿಭೋಜನಕ್ಕಾಗಿ ದಯಮಾಡಿರಿ' ಎಂದು.

ಈ ಎಲ್ಲ ಭಗವದ್ರೂಪಗಳು ನಾವು ಮಾಡುವ ಭಕ್ತ್ಯಾದರ ಪೂರ್ವಕವಾದ ಆಗ್ರಹದ ಪ್ರಾರ್ಥನೆಗೆ ಓಗೊಟ್ಟು ದಯಮಾಡಿಸುವರು.

## ಆಸನ-ಪಾತ್ರವಿನ್ಯಾಸಕ್ರಮ

ಆ ಎಲ್ಲ ದೇವತೆಗಳನ್ನು ಈ ಕ್ರಮದಲ್ಲಿ ಕೂಡಿಸುವದು.

ವೇದಿಕೆಯ ಮೇಲೆ ಪ್ರಧಾನವಾದ ಒಂದು ಆಸನ.

ಅದರ ಬಲ, ಎಡ ಬದಿಗಳಲ್ಲಿ (೧೨-೧೨) ಹನ್ನೆರಡು - ಹನ್ನೆರಡರಂತೆ ಇಪ್ಪತ್ನಾಲ್ಕು (೨೪) ಆಸನಗಳು. ಪ್ರಧಾನ ಆಸನದ ಎದುರಿನಲ್ಲಿ ಐದು ಆಸನಗಳು.

ಪ್ರಧಾನವಾದ ಆಸನದಲ್ಲಿ ನಾವು ಆವಾಹಿಸಿದ ದೇವರು ಆಸೀನನಾಗುವ.

ಅವನ ಬದಿಯಲ್ಲಿ ಶ್ರೀದೇವಿ ಭೂದೇವಿಯರು ಮಂಡಿಸುವರು.

ಬಲಬದಿಯ ಪಂಕ್ತಿಯಲ್ಲಿ ಕೇಶವಾದಿ ದಾಮೋದರಾಂತ.

ಎಡಬದಿಯ ಪಂಕ್ತಿಯಲ್ಲಿ ಸಂಕರ್ಷಣಾದಿ ಕೃಷ್ಣಾಂತ ದೇವತೆಗಳು ಕೂಡುವರು. ಈ ಎಲ್ಲ ಭಗವದ್ರೂಪಗಳು ನೃತ್ಯ, ಗೀತ, ವಾದ್ಯ, ಜಯಘೋಷ-ಗಳ ಮಧ್ಯದಲ್ಲಿ ಸೋಪಾನಗಳನ್ನು ಏರಿ ವೇದಿಕೆಯಲ್ಲಿ ವಿರಾಜಿಸುವರು.

ದೇವರ ಎದುರಿನಲ್ಲಿ ವಿಶಾಲವಾದ ಕುಡಿಬಾಳೆ ಎಲೆಯನ್ನು ಹಾಸಿರಬೇಕು. ಅದರ ಮೇಲೆ ಬಂಗಾರದ ದೊಡ್ಡ ತಟ್ಟೆ, ಅದರಲ್ಲಿ ದೊಡ್ಡ ಬಟ್ಟಲುಗಳು ಅನೇಕ, ಸಣ್ಣ ಬಟ್ಟಲುಗಳು ಅನೇಕ.

ಬಳಿಯಲ್ಲಿ ರತ್ನಖಚಿತವಾದ ಬಂಗಾರದ ನೀರಿನ ದೊಡ್ಡ ತಂಬಿಗೆ. ಅದರ ಹತ್ತಿರ ಉಪ(ಸಣ್ಣ)ಪಾತ್ರ.

ಎಡದಲ್ಲಿ ಹಾಗೂ ಬಲದಲ್ಲಿ ಸ್ವರ್ಣದ ದೀಪಸ್ತಂಭಗಳು. ಘಮಘಮಿಸುವ ತುಪ್ಪದ ದೀಪ.

ಇಷ್ಟೆಲ್ಲ ಸಿದ್ಧತೆ ಆದ ಬಳಿಕ ಅನ್ನ ಪರಮಾನ್ನ ಮುಂತಾದ ಪದಾರ್ಥಗಳನ್ನು ಶ್ರೀದೇವಿಯು ಒಂದು ರೂಪದಿಂದ ಬಡಿಸುವಳು.

ನಿತ್ಯತೃಪ್ತನಾದ ಶ್ರೀದೇವನಿಗೆ ಇದೊಂದು ಲೀಲೆ. ಶ್ರೀದೇವಿಗೆ ಇದೊಂದು ಸೇವೆ.

ಮುಖ್ಯಪ್ರಾಣದೇವರು ತಂಪನೆಯ ಸುಗಂಧಗಾಳಿಯನ್ನು ಬೀಸುತ್ತಲಿದ್ದಾರೆ. ಭಾರತೀ ಸರಸ್ವತಿಯರು ಲಗುಬಗೆಯಿಂದ ಭಗವಂತನ ಸೇವೆಯನ್ನು ಮಾಡುತ್ತಲಿದ್ದಾರೆ ಎಂದು ಚಿಂತಿಸಬೇಕು.

## ಅನ್ನಾದಿ ದೇವತೆಗಳು

ಹೀಗೆ ಭಗವಂತನ ಎಲೆಯಲ್ಲಿ ಬಡಿಸಿದ ನಾನಾ ಬಗೆಯ ಭೋಜನ ಪದಾರ್ಥಗಳಲ್ಲಿ ಬೇರೆ ಬೇರೆ ಅಭಿಮಾನಿ ದೇವತೆಗಳು ಹಾಗೂ ಭಗವಂತನ ನಾನಾರೂಪಗಳು ಇವೆ ಎಂದು ಚಿಂತಿಸಬೇಕು.

| | | |
|---|---|---|
| ಅನ್ನ | ಚಂದ್ರ | ಕೇಶವ |
| ಪರಮಾನ್ನ | ಭಾರತೀ | ನಾರಾಯಣ |
| ಭಕ್ಷ್ಯ | ಸೂರ್ಯ | ಮಾಧವ |
| ಘೃತ | ಲಕ್ಷ್ಮೀ | ಗೋವಿಂದ |
| ಕ್ಷೀರ | ವಾಣೀ | ವಿಷ್ಣು |
| ಮಂಡ | ಬ್ರಹ್ಮ | ಮಧುಸೂದನ |
| ಬೆಣ್ಣೆ | ವಾಯು | ತ್ರಿವಿಕ್ರಮ |
| ಮೊಸರು | ಸೋಮ-ವರುಣ | ವಾಮನ |
| ಸೂಪ | ಗರುಡ | ಶ್ರೀಧರ |
| ಸೊಪ್ಪುಪಲ್ಯೆ | ಮಿತ್ರ | ಹೃಷೀಕೇಶ |
| ಕಾಯಿಪಲ್ಯೆ | ಶೇಷ | ಪದ್ಮನಾಭ |
| ಹುಳಿದ್ರವ್ಯ | ಗಿರಿಜೆ | ದಾಮೋದರ |
| ಹುಳಿಯಲ್ಲದ ದ್ರವ್ಯ | ರುದ್ರ | ಸಂಕರ್ಷಣ |
| ಬೆಲ್ಲಸಕ್ಕರೆ | ಇಂದ್ರ | ವಾಸುದೇವ |
| ಬಾಡಿಸಿಕೊಳ್ಳುವ ಉಪಸ್ಕರ | ಬೃಹಸ್ಪತಿ | ಪ್ರದ್ಯುಮ್ನ |
| ಕಹಿದ್ರವ್ಯ | ಯಮ | ಅನಿರುದ್ಧ |
| ಸಾಸಿವೆ, ಕರ್ಪೂರ, ಇಂಗು, ಯಾಲಕ್ಕಿ | ಮನ್ಮಥ | ಪುರುಷೋತ್ತಮ |
| ಹಾಲು, ಎಣ್ಣೆ, ತುಪ್ಪ, ಪಕ್ವಪದಾರ್ಥ | ಜಯಂತ | ಅಧೋಕ್ಷಜ |
| ಸಂಡಿಗೆ ಇತ್ಯಾದಿ | ದಕ್ಷ | ನರಸಿಂಹ |
| ಉದ್ದಿನವಡೆ ಇತ್ಯಾದಿ | ಮನು | ಅಚ್ಯುತ |
| ಲವಣ | ನಿರ್ಋತಿ | ಜನಾರ್ದನ |
| ಫಲರಸ | ಆಹಂಕಾರಿಕ ಪ್ರಾಣ | ಉಪೇಂದ್ರ |

| | | |
|---|---|---|
| ತಾಂಬೂಲ | ಗಂಗಾ | ಶ್ರೀಹರಿ |
| ಸ್ವಾದೂದಕ | ಬುಧ | ಶ್ರೀಕೃಷ್ಣ |
| ಪಾಕಶುದ್ಧಿ | ಪುಷ್ಕರ | ಹಂಸ |
| ಸ್ವಾದುರಸ | ರತಿ | ವಿಶ್ವ |
| ಪಾತ್ರೆ | ಅಗ್ನಿ | ಭಾರ್ಗವ |
| ಕಾಷ್ಠ ಕುಳ್ಳಿ | ವಸಂತ | ವೃಷಭ |
| ಪಾಚಕ | ಮಹಾಲಕ್ಷ್ಮೀ | ವಿಶ್ವಂಭರ |
| ಭೋಜನವೇದಿಕೆಮಂಡಲ | ಭೂದೇವಿ | ವರಾಹ |
| ನೈವೇದ್ಯದ ತಟ್ಟೆ | ಗಣಪತಿ | ಸನತ್ಕುಮಾರ |
| ಜವನಿಕಾ | ವಿಶ್ವಕ್ಸೇನ | ಪುರುಷ |
| ತುಲಸೀ | ರಮಾ | ಕಪಿಲ |
| ತಟ್ಟೆ | ದುರ್ಗಾ | ಸತ್ಯ |
| ಪಾತ್ರರಕ್ಷಕ | ವಾರುಣೀ | ಆನಂದ |

ಹೀಗೆ ಅನೇಕ ಭಗವದ್ರೂಪಗಳ ಹಾಗೂ ಅಭಿಮಾನಿದೇವತೆಗಳ ಸಂಪೂರ್ಣ ಸನ್ನಿಧಾನ ಉಳ್ಳ ಅನ್ನಾದಿಪದಾರ್ಥಗಳನ್ನು ಭಗವಂತನಿಗೆ ಬಡಿಸಿದ್ದೇವೆ ಎಂದು ತಿಳಿಯಬೇಕು.

ಕೈಯಲ್ಲಿ ನೀರು ತೆಗೆದುಕೊಂಡು 'ಸತ್ಯಂ ತ್ವಾ ಋತೇನ ಪರಿಷಿಂಚಾಮಿ' ಎಂಬ ಮಂತ್ರದಿಂದ ಪರಿಷೇಚನ ಮಾಡುವದು.

''ಸುಧಾರಸವೆಂಬ ಆಪೋಷನವನ್ನು ಮಹಾಲಕ್ಷ್ಮೀ ನಿನ್ನ ಬಲಗೈಯಲ್ಲಿ ನೀಡುತ್ತಿರುವಳು ಸ್ವೀಕರಿಸು. ಸುರರೊಡೆಯ ! ಈ ಸುಧಾರಸವನ್ನು ಪಾನಮಾಡಿ ಯಥೇಷ್ಟವಾಗಿ ಭೋಜನಮಾಡು.'' ಎಂದು ನೆನೆಸಿ ''ಅಮೃತೋಪಸ್ತರಣಮಸಿ'' ಎಂಬ ಮಂತ್ರದಿಂದ ನೀರು ಬಿಡಬೇಕು.

ಬಳಿಕ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನನಾಮಕ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರಿಗೆ ಶಂಖದಿಂದ ಇಲ್ಲವೇ ಉದ್ಧರಣೆಯಿಂದ ನೀರು ಬಿಡಬೇಕು. ಇದೇ ಪಂಚ ಪ್ರಾಣಾಹುತಿ.

ಬಳಿಕ

೧) ಮಧುವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥ ಮಧು ನಕ್ತಮುತೋಷಸೋ ಮಧುಮತ್ ಪಾರ್ಥಿವಂ ರಜಃ । ಮಧು ದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ (ಋ.೧-೯೦-೬/೭/೮)

೨) ಯಾ ವಾಂ ಕಶಾ ಮಧುಮತ್ಯಶ್ವಿನಾ ಸೂನೃತಾವತೀ । ತಯಾ ಯಜ್ಞಂ ಮಿಮಿಕ್ಷತಮ್ ॥ (ಋ.೧.೨೨.೩)

ದೇವರು, ದೇವತೆಗಳು ನೇರವಾಗಿ ಅಥವಾ ಪರಂಪರಯಾ ಮುಟ್ಟಿದ ಎಲ್ಲ ಭಕ್ಷ್ಯ, ಭೋಜ್ಯಾದಿ ಪದಾರ್ಥಗಳು ದಿವ್ಯ ರಸಭರಿತವಾಗುತ್ತವೆ. ಆದುದರಿಂದ ದೇವರೇ ದೇವರಿಗಿಟ್ಟ ನೈವೇದ್ಯವನ್ನು ವೇದಗಳು ಸ್ತುತಿಸುವ ತಮ್ಮ ಕಶೆಯಿಂದ (ಚಾಬೂಕಿನಿಂದ) ಸ್ಪರ್ಶಿಸಿ ದಿವ್ಯರಸ ಸಂಪನ್ನವಾಗಿ ಮಾಡಲಿ.

ಋಗ್ಭಾಷ್ಯ :- ಕಶಯಾ ಸ್ಪೃಷ್ಟಿಮಾತ್ರೇಣ ಮಧುರಂ ಕುರುತೋಽಖಿಲಮ್ ।
ಅತೋ ಮಿಮಿಕ್ಷತಮಿತಿ ಸ್ಪರ್ಶೋ ಮೇಕ್ಷಣಮುಚ್ಯತೇ ॥★॥

ವೇದವಾಕ್ಯಸ್ತುತತ್ವೇನ ಕಶಾಸಾ ಸೂನೃತಾವತೀ।
ತಯೈವ ಘೃತಸೋಮಾದಿ ಸ್ಪೃಶತಂ ಯಾಜ್ಞಿಕಂ ವಸು ॥★॥

ಟೀಕಾ- ಅತ್ರ ಕಶಯಾ ಯಜ್ಞಸ್ಯ ಮೇಕ್ಷಣಂ ಪ್ರಾರ್ಥ್ಯತೇ । ತತ್ ಕಿಂ ನಿಮಿತ್ತಂ ಇತ್ಯತ ಆಹ- **ಕಶಯೇತಿ** ॥ ಕುರುತಃ ಅಶ್ವಿನೌ । ಇತಿ ಪ್ರಾರ್ಥಿತಂ ಇತಿ ಶೇಷಃ । ಮಿಮಿಕ್ಷತಂ ಇತ್ಯತ್ರ ಪ್ರಕೃತ್ಯರ್ಥಂ ಆಹ- **ಸ್ಪರ್ಶ ಇತಿ** ॥ ಸೂನೃತಾವತೀ ಇತ್ಯೇತತ್ ಕಶಾಯಾಂ ಯೋಜಯತಿ- **ವೇದೇತಿ** ॥ ಯಜ್ಞಸ್ಯ ಕ್ರಿಯಾರೂಪಸ್ಯ ಕಥಂ ಕಶಯಾ ಸ್ಪೃಷ್ಟಿಃ । ಕಥಂ ಚ ಮಧುರತ್ವಂ ಇತ್ಯಾಶಂಕಾಂ ಪರಿಹರನ್ ವ್ಯಾಖ್ಯಾತಿ- **ತಯೈವೇತಿ** ॥ ಹೇ ಅಶ್ವಿನೌ ಯಾ ವಾಂ ಯುವಯೋಃ ಸಂಬಂಧಿನೀ ಮಧುಮತೀ ಸ್ವಾದುಮತೀ ಸ್ವಾದುತ್ವಕಾರಿಣೀ ಸೂನೃತಾವತೀ ಸೂನೃತಾ ವೇದವಾಣೀ ತದ್ವತೀ ತತ್‌ಸ್ತುತಾ ಕಶಾ ಅಶ್ವಾದಿನೋದಿನೀ ತಯಾ ಅಸ್ಮದೀಯಂ ಯಜ್ಞಂ ಯಜ್ಞಸಂಬಂಧಿ ಘೃತಸೋಮಾದಿ-ವಸ್ತು ಮಿಮಿಕ್ಷತಂ ಸ್ಪೃಶತಮ್ ।

ಅನ್ವಯ :- ಹೇ ಅಶ್ವಿನೌ ! ಯಾ ವಾಂ ಮಧುಮತೀ ಸೂನೃತಾವತೀ ಕಶಾ ತಯಾ (ಅಸ್ಮದೀಯಂ) ಯಜ್ಞಂ ಮಿಮಿಕ್ಷತಮ್.

''ಹೇ ಅಶ್ವಿನೌ! ಹೇ ಅಶ್ವಿನಾಮಕ ಭಗವದ್ರೂಪಗಳೇ! ಯಾ ವಾಂ ಯಾವ ನಿಮ್ಮ ಮಧುಮತೀ ಸ್ವಾದುರುಚಿಯನ್ನು ತಂದುಕೊಡುವ ಸೂನೃತಾವತೀ ವೇದವಾಣಿಯಿಂದ ಸ್ತುತವಾದ ಕಶಾ ಕುದಿರೆ ಮುಂತಾದವುಗಳನ್ನು ಓಡುವಂತೆ ಪ್ರೇರಿಸುವ ಯಾವ ಚಾಬೂಕ ವಿದೆಯೋ? ತಯಾ ಆ ಚಾಬೂಕಿನಿಂದ (ಅಸ್ಮದೀಯಂ) ಯಜ್ಞಂ ನಮ್ಮ ಯಜ್ಞವನ್ನು ಅಂದರೆ ಯಜ್ಞದ ಘೃತಸೋಮಾದಿ ವಸ್ತುಗಳನ್ನು ಮಿಮಿಕ್ಷತಮ್ ಸ್ಪರ್ಶಿಸಿರಿ.

ಅಂದರೆ- ನಾವು ಮಾಡಿಟ್ಟ ಭಕ್ಷ್ಯಭೋಜ್ಯಾದಿಗಳನ್ನು ದೇವರು ಸ್ಪರ್ಶಿಸಿದರೆ ಅತ್ಯಂತ ರುಚಿಕರವಾಗುವುದು. ಆದುದರಿಂದ ದೇವರು ಸ್ಪರ್ಶಿಸಿ ಆ ನೈವೇದ್ಯದಲ್ಲಿ ರಸರುಚಿಗಳನ್ನು ಇಡಲಿ ಎಂದು ಪ್ರಾರ್ಥನೆ.''

**೩) ಯೇ ದೇವಾಸೋ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶ ಸ್ಥ । ಅಪ್ಸುಕ್ಷಿತೋ ಮಹಿನೈಕಾದಶ ಸ್ಥ ತೇ ದೇವಾಸೋ ಯಜ್ಞಮಿಮಂ ಜುಷಧ್ವಮ್ ॥** (ಋ.೧.೧೩೯.೧೧)

**ಅಭಿಪ್ರಾಯ** ಏಕಾದಶೇಂದ್ರಿಯಾಭಿಮಾನಿದೇವತೆಗಳು ತದಂತರ್ಯಾಮಿ ಮುಖ್ಯಪ್ರಾಣಾಂತರ್ಗತ ಶ್ರೀಮನ್ನಾರಾಯಣ ಸ್ವರ್ಗಸ್ಥ (ಊರ್ಧ್ವಲೋಕಸ್ಥ), ಪೃಥಿವೀಸ್ಥ, ಜಲಸ್ಥ, (ಅಧೋಲೋಕಸ್ಥ), ಅಂತರಿಕ್ಷಸ್ಥ ಜೀವರ ಇಂದ್ರಿಯಗಳಲ್ಲಿ ಇದ್ದು ಹನ್ನೊಂದು ರೂಪಗಳಿಂದ ಒಬ್ಬನೇ ಭೋಗಿಸುವನು.

**ಅನ್ವಯ :- ಹೇ ದೇವಾಸಃ ಯೇ ಯೂಯಂ ದಿವಿ ಏಕಾದಶ ಸ್ಥ, ಪೃಥಿವ್ಯಾಂ ಅಧಿ ಏಕಾದಶ ಸ್ಥ, ಅಪ್ಸುಕ್ಷಿತಃ ಏಕಾದಶ ಸ್ಥ ತೇ ದೇವಾಸಃ ಮಹಿನಾ ಇಮಂ ಯಜ್ಞಂ ಜುಷಧ್ವಮ್ ॥**

''ಹೇ ದೇವಾಸಃ ಹೇ ದೇವತೆಗಳೇ! ಯೇ (ಯೂಯಂ) ಯಾವ ನೀವು, ದಿವಿ ಏಕಾದಶ ಸ್ಥ ಸ್ವರ್ಗದಲ್ಲಿ ಏಕಾದಶಸಂಖ್ಯೆಯಲ್ಲಿ ಇರುವಿರೋ, ಪೃಥಿವ್ಯಾಂ ಅಧಿ ಏಕಾದಶ ಸ್ಥ ಪೃಥಿವಿಯಲ್ಲಿ ಏಕಾದಶಸಂಖ್ಯೆಯಲ್ಲಿ ಇರುವಿರೋ, ಅಪ್ಸುಕ್ಷಿತಃ ಏಕಾದಶ ಸ್ಥ ನೀರಿನಲ್ಲಿ (ಅಂದರೆ- ಪಾತಾಲಾದಿಗಳಲ್ಲಿ) ಅಥವಾ ಅಂತರಿಕ್ಷದಲ್ಲಿ ಏಕಾದಶಸಂಖ್ಯೆಯಲ್ಲಿ ಇರುವಿರೋ, ತೇ ದೇವಾಸಃ ಅಂಥ ನೀವು ಮಹಿನಾ- ನಿಮ್ಮ ಮಹಿಮೆಯಿಂದ; ಸಾಮರ್ಥ್ಯದಿಂದ, ಇಮಂ ಯಜ್ಞಂ ನಾನು ಸಮರ್ಪಿಸುವ ಈ ಯಜ್ಞವನ್ನು, ಜುಷಧ್ವಂ ಭೋಗಿಸಿರಿ, ಸ್ವೀಕರಿಸಿರಿ.''

**೪) ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತುನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಂ ಅದಾಭ್ಯಃ ॥** (ಋ.೯-೮೫-೬)

**ಅನ್ವಯ ಃ- ದಿವ್ಯಾಯ ಜನ್ಮನೇ ಸ್ವಾದುಃ ಪವಸ್ವ. ಸುಹವೀತುನಾಮ್ನೇ ಇಂದ್ರಾಯ ಸ್ವಾದುಃ ಪವಸ್ವ. ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾನ್ ಅದಾಭ್ಯಃ ಸ್ವಾದುಃ ಪವಸ್ವ.**

''ದಿವ್ಯಾಯ ಜನ್ಮನೇ (ತನ್ನ ವಾಸುದೇವ ರೂಪದಿಂದ ತಾನೇ ವಿಷ್ಣುವಾಗಿ ಜನಿಸಿರುವ ಕಾರಣ) ಅಲೌಕಿಕವಾಗಿ, ದಿವ್ಯವಾಗಿ ಹುಟ್ಟಿದ ವಿಷ್ಣುವಿಗೆ, **ಸ್ವಾದು ಪವಸ್ವ** (ಸೋಮರಸವು, ಪ್ರಸ್ತುತ) ಸಕ್ಕರೆಯು ಸವಿಯಾಗಿ ರಸ ಸುರಿಸಲಿ. **ಇಂದ್ರಾಯ** ಅವನೇ ಎಲ್ಲರೊಡೆಯ. **ಸುಹವೀತು ನಾಮ್ನೇ** ಸರ್ವೋತ್ತಮ ನಾಮಧಾರಿ. **ಮಿತ್ರಾಯ** ವಿಶ್ವವನ್ನು ಹೆತ್ತು ರಕ್ಷಿಸುವವ. **ವರುಣಾಯ** ಉನ್ನತರಿಗೂ ಉನ್ ನಾಯಕನಾದವ. **ವಾಯವೇ** ಅತುಲ ಬಲಶಾಲಿಯಾದವ. **ಬೃಹಸ್ಪತಯೇ** ದೇಶ ಕಾಲ ಗುಣಗಳಿಂದ ಬೃಹತ್ ಆದವ, ಹಾಗೂ ಎಲ್ಲರೊಡೆಯನಾದವ. ಈತನಿಗೆ **ಮಧುಮಾನ್** ಸವಿಯಾದ, **ಅದಾಭ್ಯಃ** (ಹಿಂಸಿತವಾಗದ) ಕೊಳೆಯಿಂದ ದೂಷಿತವಾಗದ ನಮ್ಮ ಮನದ ಸಿಹಿ ರಸವು ಹರಿದು ತೃಪ್ತಿಪಡಿಸಲಿ.''

೫) [೨೭]**ಭೋಜಂ ತ್ವಾಮಿಂದ್ರ ವಯಂ ಹುವೇಮ ದದಿಷ್ಟ್ವಮಿಂದ್ರಾಪಾಪಾಂಸಿ ವಾಜಾನ್ । ಅವಿಡ್ಢೀಂದ್ರ ಚಿತ್ರಯಾ ನ ಊತೀ ಕೃಧಿ ವೃಷನ್ನಿಂದ್ರ ವಸ್ಯಸೋ ನಃ ॥**
(ಋ.೨-೧೭-೮)

**ಅನ್ವಯ ಃ- ಹೇ ಇಂದ್ರ! ಭೋಜಂ ತ್ವಾಂ ವಯಂ ಹುವೇಮ. ತ್ವಂ ವಾಜಾನ್ ದದಿಃ. ಅಪಾಂಸಿ ದದಿಃ. ಹೇ ಇಂದ್ರ! ಚಿತ್ರಯಾ ಊತಿ ನಃ ಅವಿಡ್ಢಿ. ವೃಷನ್ ಇಂದ್ರ! ನಃ ವಸ್ಯಸಃ ಕೃಧಿ.**

''**ಹೇ ಇಂದ್ರ** ನಮ್ಮ ಇಷ್ಟವನ್ನು ಹರಿಸುವ ಓ ದೇವರೇ, **ಭೋಜಂ** ಎಲ್ಲವನ್ನು ಭೋಗಿಸುವ, ಭಕ್ತರಿಗೆ ಭೋಗಮಾಡಿಸುವ, ಎಲ್ಲ ಜೀವರನ್ನು ಉಣಿಸುವ, ಸ್ವಯಂ ಭೋಜನಕ್ರಿಯೆಯಿಂದ ಅಭಿನ್ನನಾದ, **ತ್ವಾಂ** ನಿನ್ನನ್ನು, **ವಯಂ** ನಾವು, **ಹುವೇಮ** ನಾವರ್ಪಿಸುವ ನೈವೇದ್ಯವನ್ನು ಸ್ವೀಕರಿಸಲು ಕರೆಯುತ್ತೇವೆ. **ತ್ವಂ**

೨೭ ಬ್ರ.ವ್ಯಾಖ್ಯಾಃ- ಭುಂಕ್ತೇ ಭೋಜಯತಿ ಚ ಇತಿ ಭೋಜಃ । ಸ್ವಯಂ ಭೋಗ-ಕ್ರಿಯಾದ್ಯಭಿನ್ನತ್ವಾಚ್ಚ । ಇದಂ ರಾತೀತಿ ಇಂ ಇಷ್ಟಂ ದ್ರವತೀತಿ ವಾ ಇಂದ್ರಃ । ಅಪಾಂಸಿ ಕರ್ಮಾಣಿ । ತಸ್ಮಿನ್ನಪೋ ಮಾತರಿಶ್ವಾ ದಧಾತಿ ಇತಿವತ್ । ಕರ್ಮಾಪಸಂ ಇತಿ ಋಗ್ಭಾಷ್ಯೇ । ಅವಿಡ್ಢಿ ಅವತೇಃ ವೈದಿಕಮ್ । ಊತೀ ಊತ್ಯಾ । ಅವತಿ ಏಭಿರಿತಿ ಕರಣೇ ಕ್ತಿಃ । ಅವನಸ್ಯ ಸಾಧನೈಃ ಮಾರ್ಗೈರಿತ್ಯರ್ಥಃ । ವಸ್ಯಸಃ ವಸೀಯಸಃ । ವಸಿನಾಂ ಶ್ರೇಯಸಃ ।

ನೀನೇ, ವಾಜಾನ್ ಅನ್ನ ಆಹಾರಾದಿಗಳನ್ನು, ದದಿಃ ಕೊಟ್ಟಿರುವಿ. ಅಪಾಂಸಿ ಪೂಜೆ, ನಿವೇದನ ಮುಂತಾದ ಕರ್ಮಗಳನ್ನು, ದದಿಃ ಮಾಡಿಸುವಿ. ಹೇ ಇಂದ್ರ - ಸಮರ್ಥ ಜಗದೊಡೆಯನೇ!, ಚಿತ್ರಯಾ ಊತಿ ಮಾನವರಿಗೂ, ದೇವತೆಗಳಿಗೂ, ದೇವೋತ್ತಮರಿಗೂ ತಿಳಿಯಲಾಗದಷ್ಟು ವಿಚಿತ್ರವಾದ ರೀತಿಗಳಿಂದ ರಕ್ಷಣೆಯ ಸಾಧನ-ವಿಧಾನಗಳಿಂದ, ನಃ ನಮ್ಮನ್ನು, ಅವಿಡ್ಢಿ ರಕ್ಷಿಸು. ಹೇ ವೃಷನ್ ಇಂದ್ರ ಬಯಸಿದ್ದನ್ನು ವರ್ಷಿಸುವ ದೇವರೇ! ನಃ ನಮ್ಮನ್ನು, ವಸ್ಯಸಃ ಕೃಧಿ ಉತ್ತಮವಾಗಿ ಬಾಳಿದವರನ್ನಾಗಿ ಮಾಡು.

ಎಲ್ಲರೂ ಬದುಕುವರು. ಅದಕ್ಕೆ ಉಸಿರು ಮಾತ್ರ ಬೇಕು. ಅದಕ್ಕೆ ವಿವೇಕ, ಉಪಕಾರ, ಸಹನೆ, ಭಕ್ತಿ, ಜ್ಞಾನ ಮುಂತಾದವುಗಳು ಬೇಕಿಲ್ಲ. ಆದರೆ ಬಾಳಿನ ಉತ್ತಮಿಕೆಗೆ ಇದೆಲ್ಲ ಅಗತ್ಯ. ಅದನ್ನು ಕರುಣಿಸು. (ಔಚಿತ್ಯ ತುಂಬ ಅದ್ಭುತವಾಗಿದೆ. ವಿಸ್ತಾರಕ್ಕೆ ಅವಕಾಶವಿಲ್ಲ.)''

೬) [೨೮]ಭೋಜಮಶ್ವಾ ಸುಷ್ಠುವಾಹೋ ವಹಂತಿ ಸುವೃದ್ರಥೋ ವರ್ತತೇ

---

೨೮ ಬ್ರ.ವ್ಯಾಖ್ಯಾ- ಭುಜ್ಯತೇ ಭುಂಕ್ತೇ ಚ ಇತಿ ಭೋಜಃ ಭೋಜ್ಯಮನ್ನಾದಿಕಂ ಭೋಕ್ತಾ ಈಶ್ವರೋ ವಾ । ಸುಷ್ಠುವಾಹಃ ಸುಷ್ಠು ಪರಮಪ್ರೀತ್ಯಾ ವಹಂತಿ ಪ್ರಾಪಯಂತಿ ಪ್ರಾರ್ಪಯಂತಿ ಚ ಇತಿ । ವಹ ಪ್ರಾಪಣೇ, ಪ್ರಾರ್ಪಣೇ ಇತ್ಯಪಿ ವಕ್ತವ್ಯಮ್ । ಭೋಜಂ ಅನ್ನಂ ವಿಷ್ಣುಂ ವಹಂತಿ । ಭೋಜಂ ಭೋಕ್ತಾರಂ ವಿಷ್ಣುಂ ಭಕ್ತಗೃಹಂ ವಹಂತಿ। ದಕ್ಷೇ ಇನಃ ಯಸ್ಯಾಃ ಸಾ ರಮಾ । ಸರ್ವಸಮರ್ಥಾ ಇತ್ಯಪಿ । ಷಷ್ಠ್ಯಾಃ ಆಧೀನ್ಯಮರ್ಥಃ । ಸು ಸುಖೇನ ವೃದ್ಧಂ ಪೂರ್ಣಂ ಇತಿ ಸುವೃಧ್ । ಸುವೃಧೇವ ಸುವೃತ್ । ಯದ್ವಾ ಸು ಶೋಭನೈಃ ನಿಯಮ್ಯೈಃ ಸುಷ್ಠು ಚ ವರ್ತತೇ ಇತಿ ಭೌತಿಕಾಧ್ಯಾತ್ಮಿಕಾದಿನಿಯಮ್ಯೈಃ ನಿಯತಂ ವರ್ತತೇ ಇತಿ ವಿಶ್ವಂ ಸುವೃತ್ । ರಥೋ ದೇಹಃ । ರಃ ರಮಣೀಯಾ ಈಶ್ವರಸ್ಯ ಪರಮಪ್ರಿಯತಯಾ ನಿತ್ಯಮುಕ್ತತಯಾ ಸರ್ವೇಶ್ವರತಯಾ ದೇಶಕಾಲವ್ಯಾಪ್ತಿಗುಣಪೂರ್ಣತ್ವಾದಿಭಿಶ್ಚ ಥಃ ಸ್ಥಿತಿಃ ರಥಃ । ಸಾ ಸ್ಥಿತಿರಪಿ ದೇವಭೋಗ್ಯಾ । ರಂ ರಮಣೀಯಂ ಥಂ ಅನ್ನಂ ''ಅತ್ಯನ್ನಶ್ಚಾತಿಥಿಃ ಪ್ರೋಕ್ತಃ'' ಇತಿ ಕಾಠಕಭಾಷ್ಯಾತ್ । ''ಅವ್ಯಕ್ತಮಾತ್ಮನೋಽನ್ನಂ ಚ ಮಹದಾದಿ ವಿನಾಶಿ ಚ'' ಇತಿ ಭಾಗವತತಾತ್ಪರ್ಯಾತ್ (೨-೬-೧೭) ವರ್ತತೇ ಸಾರ್ವಕಾಲಿಕೋ ಲಟ್ । ತವ ಇತ್ಯಧ್ಯಾಹಾರಃ। ಷಷ್ಠೀ ಆಧೀನ್ಯೇ ಅರ್ಪಿತತ್ವೇ ಭೋಗ್ಯತ್ವೇ ಚ। ಭರೇಷು ''ಪ್ರಭೃಥೇ ಹವಿರ್ಭಿಃ'' ಇತ್ಯತ್ರೇವ ಭರಃ ಸಮರ್ಪಣಮ್ । ನಿಮಿತ್ತೇ ಸಪ್ತಮೀ । ಬಹುವಚನಂ ಸಮರ್ಪಣಸ್ಯ ಬಹುವಾರತಾಂ ಸೂಚಯತಿ । ನ ಹಿ ಸಕೃದೇವ ಸಮರ್ಪಣಮ್ । ಅಹಂಕಾರಮಮಕಾರಾದಯಃ ನಿವೇದನಶತ್ರವಃ । ಜೇತಾ ಅಂತರ್ಣೀತಣಿಜಪಿ ।

ದಕ್ಷಿಣಾಯಾಃ । ಭೋಜಂ ದೇವಾಸೋಽವತಾ ಭರೇಷು ಭೋಜಃ ಶತ್ರೂನ್ತ್ಸಮನೀಕೇಷು ಜೇತಾ ॥ (ಋ.೧೦-೧೦೭-೧೧)

ಅನ್ವಯ :- ಸುಷ್ಮುವಾಹಃ ಅಶ್ವಾಃ ಭೋಜಂ ವಹಂತಿ. ದಕ್ಷಿಣಾಯಾಃ ಸುವೃತ್ ರಥಃ ದಕ್ಷಿಣಾಯಾಃ ಸುವೃತ್ ರಥಃ ವರ್ತತೇ. ದೇವಾಸಃ ! ಸಮನಿಕೇಷು ಶತ್ರೂನ್ ಜೇತಾ ಭರೇಷು ಭೋಜಂ ಅವತ. ಅಥವಾ ದೇವಾಸಃ ! ಭರೇಷು ಭೋಜಂ ಅವತ. ಭೋಜಂ ಅವತ.

''ಸುಷ್ಮುವಾಹಃ ಪರಮಪ್ರೀತಿಯಿಂದ ಒಯ್ದು ಅರ್ಪಿಸುವ, ಅಶ್ವಾಃ ವೇಗದಿಂದ ಅರ್ಚನೆಗಾಗಿ ದೇವರತ್ತ ಧಾವಿಸುವ ದೇವತೆಗಳು, ಭೋಜಂ ನಿನ್ನ ಭೋಗ್ಯ ನೈವೇದ್ಯವನ್ನು, ವಹಂತಿ ತರುತ್ತಾರೆ, ಅಥವಾ ಭಕ್ತಿಯಿಂದ ನಿನ್ನನ್ನು ಹೊರುವ ದೇವತೆಗಳು ಸರ್ವಭೋಜಿಯಾದ ನಿನ್ನನ್ನು ನನ್ನ ಮನೆಗೆ ಕರೆತರುತ್ತಾರೆ. ದಕ್ಷಿಣಾಯಾಃ ಸರ್ವಸಮರ್ಥಳಾದ ದಕ್ಷಿಣಾ ಎಂಬ ಹೆಸರಿನ ರಮೆಯ, ಸುವೃತ್ ಅತಿವಿಪುಲ ಸುಖಪೂರ್ಣವಾದ, ರಥಃ (ದೇಹವು) ಸ್ವರೂಪವು, ಹಾಗೂ ಅವಳ ರಮ್ಯ ಇರುವಿಕೆಯು ಅಥವಾ, ದಕ್ಷಿಣಾಯಾಃ ಆ ರಮೆಯ ಅಧೀನವಾಗಿ ಆಸ್ತಿಯಾಗಿರುವ, ಸುವೃತ್ ನಿಯತಿ ನಿಯಮಗಳಿಂದ ಸುಬದ್ಧವಾಗಿ ಇರುವ, ರಥಃ ರಮಣೀಯವಾದ ಇಡಿಯ ವಿಶ್ವವೆಂಬ ಅನ್ನವು, ವರ್ತತೇ ಹಿಂದೆ ಇಂದು ಮುಂದೆ ಎಂದೆಂದಿಗೂ ನಿನ್ನಧೀನವಾಗಿ ನಿನಗರ್ಪಿತವಾಗಿ ನಿನ್ನ ಭೋಗ್ಯವಾಗಿ ಇದೆ. ಹೇ ದೇವಾಸಃ ಓ ದೇವತೆಗಳೇ, ಸಮನಿಕೇಷು ಯುದ್ಧಗಳಲ್ಲಿ, ಶತ್ರೂನ್ ಶತ್ರುಗಳನ್ನು, ಜೇತಾ ಗೆಲ್ಲುವ ನೀವು, ಭರೇಷು ದೇವರಿಗರ್ಪಿಸುವದಕ್ಕಾಗಿ, ಭೋಜಂ ಭೋಗ್ಯವನ್ನು, ಅವತ ಕಾಪಾಡಿರಿ.

ಅನ್ನ ಮುಂತಾದುದು ದೇವರ ನೈವೇದ್ಯ. ಆದರೆ ಅದು ಹಾಳಾಗಿ, ಕೊಳೆಯಾಗಿ ಕೀಳಾಗಿ ಹೋಗದಂತೆ ಕಾಪಾಡಬೇಕು. ಅದನ್ನು ಹಾಳು, ಕೊಳೆ, ಕೀಳು ಮಾಡುವವರೇ ಶತ್ರುಗಳು.

ಆ ಶತ್ರುಗಳೇ ನಮ್ಮ ಮನದ ದುರ್ವೃತ್ತಿಗಳು. 'ನಾನೇ ಸ್ವತಂತ್ರ' ಎಂಬ ಅಸ್ಮಿತೆ, 'ನನ್ನದೀ ಅನ್ನ' ಎಂಬ ಮಮತೆ, 'ನಾನು ಅರ್ಪಿಸಿದಾಗ ದೇವರ ಹೊಟ್ಟೆ ತುಂಬುವದು' ಎಂಬ ಸೊಕ್ಕು. 'ದೇವರಿಗೆ ಹಸಿವಾಗಿದೆ' ಎಂಬ ಭ್ರಾಂತಿ,

---

ಭರೇಷು ಕ್ರಿಯಮಾಣೇಷು ಸತ್ಸು । ಭರೇಷು ನಿವೇದ್ಯೇಷು ಅನ್ನಾದಿಷು । ಭರೇಷು ಕೃತೇಷು ಸತ್ಸು । ಅವ ರಕ್ಷಣೇ ದಾನೇ ಪ್ರವೇಶೇ ಯಾಚನೇ ಅವಾಪ್ತೌ ।

'ನೈವೇದ್ಯ ಮಾಡಿ ದೇವರಿಗೆ ಉಪಕಾರ ಮಾಡುತ್ತಿರುವೆ' ಎಂಬ ಮದ, 'ಈ ಉಪಕಾರಕ್ಕಾಗಿ ದೇವರು ನನ್ನಾಳಿನಂತೆ ನನ್ನೆಲ್ಲ ಕೆಲಸಗಳನ್ನು ಮಾಡಬೇಕೆಂಬ' ದೌರ್ಜನ್ಯ ಇತ್ಯಾದಿ ಭಾವಗಳೇ ಶತ್ರುಗಳು.

ಈ ಶತ್ರುಗಳು ನೈವೇದ್ಯವನ್ನು ಸ್ಪರ್ಶಿಸಿದರೆ ಸಾಕು, ದೇವರು ಅದನ್ನು ಸ್ವೀಕರಿಸುವದಿಲ್ಲ. ಕಾರಣ, ಈ ನಮ್ಮ ಭಾವಶತ್ರುಗಳನ್ನು ದೇವತೆಗಳೇ ಗೆಲ್ಲಬೇಕು. ನಮಗೆ ಬಲ ನೀಡಿ ಗೆಲ್ಲಿಸಲೂ ಬೇಕು. ಅಲ್ಲದೇ ಓ ದೇವತೆಗಳೇ ನೀವೇ ಭರೇಷು ನೈವೇದ್ಯಮಾಡುವಾಗ, ಅವತ ಸಮರ್ಪಿಸಿರಿ. ನೀವೇ ಭರೇಷು ನೈವೇದ್ಯವಾದ ಬಳಿಕ, ಭೋಜಂ ಭೋಗ್ಯವನ್ನು, ಅವತ ದೇವರಿಂದ ಯಾಚಿಸಿ ಪಡೆದು ಭೋಗಿಸಿರಿ. ನಂತರ ನಮಗೆ ಭೋಜಂ ಅವತ ನೈವೇದ್ಯವನ್ನು ದಯಪಾಲಿಸಿರಿ.''

೭) ಓಂ ಸ್ತವಿಷ್ಯಾಮಿ ತ್ವಾಮಹಂ ವಿಶ್ವಸ್ಯಾಮೃತ ಭೋಜನ । ಅಗ್ನೇ ತ್ರಾತಾರಮಮೃತಂ ಮಿಯೇಧ್ಯ ಯಜಿಷ್ಠಂ ಹವ್ಯವಾಹನ ॥ (ಋ.೧-೪೪-೫)

ಅನ್ವಯ :- ವಿಶ್ವಸ್ಯ ಭೋಜನ ! ಅಮೃತ ! ಅಮೃತಭೋಜನ ! ಮಿಯೇಧ್ಯ! ಹವ್ಯವಾಹನ ಅಗ್ನೇ! ಅಮೃತಂ ತ್ರಾತಾರಂ ಅಥವಾ ಅಮೃತಂ ತ್ರಾತಾರಂ ಯಜಿಷ್ಠ ತ್ವಾಂ ಅಹಂ ಸ್ತವಿಷ್ಯಾಮಿ.

''ವಿಶ್ವಸ್ಯ ಇಡಿಯ ಪ್ರಪಂಚಕ್ಕೆ, ಭೋಜನ ಹೊಟ್ಟೆಗೆ ಹಾಕುವ ಓ ಕರುಣಾಮಯ, ಮಾತ್ರವಲ್ಲ, ಅಮೃತ ಸರ್ವಥಾ ಸಾವಿಲ್ಲದ, ಓ ನಿತ್ಯ, ಶಾಶ್ವತ ದೇವ! ಅಂತೆಯೇ ಅಮೃತಭೋಜನ ಮುಕ್ತರಿಗೂ ಭೋಗ ಮಾಡಿಸುವ ಓ ದೊರೆ, ಮಿಯೇಧ್ಯ ಓ ಯಜ್ಞನಿಯಾಮಕನೇ, ಹವ್ಯವಾಹನ ನಿವೇದಿಸಲು ಯೋಗ್ಯವಾದುದನ್ನು ಎಂಥದನ್ನೇ ಕೊಟ್ಟರೂ ಪ್ರೀತಿಯಿಂದ ಸ್ವೀಕರಿಸುವ, ಅರ್ಪಿಸಿದ ಹವಿಸ್ಸನ್ನು ಆ ಆ ದೇವತೆಗಳಿಗೆ ದಯಪಾಲಿಸುವ, ಅಗ್ನೇ ಓ ದೇವನೇ, ಅಮೃತಂ ತ್ರಾತಾರಂ ಮುಕ್ತರನ್ನೆಲ್ಲ ಕಾಪಾಡುವ, ಅಥವಾ, ಅಮೃತಂ ಸಾವಿರದ ತ್ರಾತಾರಂ ಎಲ್ಲರನ್ನು ಕಾಪಾಡುವ ಯಜಿಷ್ಠ ಯಜ್ಞಗಳಿಂದ ಪೂಜಿತರಾಗುವ ದೇವತೆಗಳಲ್ಲಿ ಸರ್ವೋತ್ತಮನಾದ, ತ್ವಾಂ ನಿನ್ನನ್ನು, ಅಹಂ ನಾನು, ಸ್ತವಿಷ್ಯಾಮಿ ಅನಂತಕಾಲದವರೆಗೆ ಸ್ತುತಿಸುವೆ.''

ಮುಂತಾದ ಮಂತ್ರಗಳನ್ನು ಪಠಿಸಬೇಕು.

## ನೈವೇದ್ಯ ಸ್ವೀಕಾರ ಪ್ರಾರ್ಥನೆ

ನಂತರ ಭಗವಂತನಿಗೆ ಪ್ರಾರ್ಥಿಸುವುದು.

**ಅದ್ಯ ತಿಷ್ಠತಿ ಯತ್ಕಿಂಚಿತ್ ಕಲ್ಪಿತಂ ಚಾಪರಂ ಗೃಹೇ ।**
**ಪಕ್ವಮನ್ನಂ ಸಪಾನೀಯಂ ಸರ್ವೋಪಸ್ಕರಸಂಯುತಮ್ ॥★॥**

''ಓ ದೇವ, ಇಂದು ನನ್ನ ಮನೆಯಲ್ಲಿ ಮಾಡಿದ ಅನ್ನ, ಉಪಸ್ಕರ, ಪಾನೀಯ, ಇವೆಲ್ಲವೂ ನಿನಗೆ ಸಮರ್ಪಿತ.''

**ಯಥಾಕಾಲಂ ಮನುಷ್ಯಾದ್ಯೈಃ ಭೋಕ್ಷ್ಯಮಾಣಂ ಶರೀರಿಭಿಃ ।**
**ತತ್ಸರ್ವಂ ವಿಷ್ಣುಪೂಜಾಸ್ತು ಪ್ರೀಯತಾಂ ಮೇ ಜನಾರ್ದನಃ ॥★॥**

''ಆ ಆ ಕಾಲದಲ್ಲಿ (ಋತುಗಳಲ್ಲಿ) ಮನುಷ್ಯ, ನಾನಾವಿಧವಾದ ಪ್ರಾಣಿ, ಪಶು, ಸರೀಸೃಪ, ಪಕ್ಷಿ, ಕ್ರಿಮಿ, ಕೀಟ, ಜಲಚರ, ಋಷಿ, ಗಂಧರ್ವ, ದೇವ, ದೇವೋತ್ತಮ ಇವರೆಲ್ಲರು ಉಣ್ಣುವ, ಭೋಗಿಸುವ ಪದಾರ್ಥವೆಲ್ಲ ನಿನಗೆ ಸಮರ್ಪಣೆ. ನೀನು ಸುಪ್ರೀತನಾಗು.''

**ಶ್ರೀನಿವಾಸ ನಮಸ್ತುಭ್ಯಂ ಮಹಾನೈವೇದ್ಯಮುತ್ತಮಮ್ ।**
**ನಿತ್ಯತೃಪ್ತ ಗೃಹಾಣೇದಂ ಕೃಪಯಾ ಭಕ್ತವತ್ಸಲ ॥★॥**

''ಓ ಸಿರಿಯೊಡೆಯ! ನೀನು ನಿತ್ಯತೃಪ್ತ, ಆಪ್ತಕಾಮ, ಅನಂತಾನಂದ ಸಂದೋಹರೂಪ, ಪರನಿರಪೇಕ್ಷ, ಆದರೆ ಭಕ್ತವತ್ಸಲನೂ ಹೌದು. ಕಾರಣ ನಾನು ಇಟ್ಟ (ನನ್ನಿಂದ ಮಾಡಿಸಿ ಇಡಿಸಿದ) ನಿನ್ನದೇ ಆದ ಈ ಮಹಾನೈವೇದ್ಯವನ್ನು ನೀನು ಸ್ವೀಕರಿಸು.''

**ಭಗವನ್ ಶ್ರೀಪತೇ ನ್ಯಸ್ತಂ ನೈವೇದ್ಯಂ ತ್ವತ್ಪುರೋ ಮಯಾ ।**
**ಕಪಿಲಾತ್ಮಕದಿವ್ಯೇನ ಚಕ್ಷುಷಾ ತ್ವವಲೋಕಯ ॥★॥**

''ಓ ಭಗವನ್, ನಿನ್ನೆದುರು ನೈವೇದ್ಯವನ್ನು ಇಟ್ಟಿರುವೆ. ಅದನ್ನು ಕಪಿಲ-ರೂಪವಾದ ನಿನ್ನ ದಿವ್ಯ ಕಣ್ಣುಗಳಿಂದ ಅವಲೋಕಿಸು.''

**ನೃಸಿಂಹಾತ್ಮಕದಿವ್ಯೇನ ದಿವ್ಯಘ್ರಾಣೇಂದ್ರಿಯೇಣ ವೈ ।**
**ತದ್ವಸ್ತುನಿಷ್ಠಂ ಗಂಧಂ ಚ ದಿವ್ಯಮಾಘ್ರಾಯ ಚಿನ್ಮಯ ॥★॥**

''ಆ ಪದಾರ್ಥಗಳಲ್ಲಿರುವ ದಿವ್ಯಗಂಧವನ್ನು ನರಸಿಂಹರೂಪವಾದ ಅಪ್ರಾಕೃತ ನಿನ್ನ ಘ್ರಾಣೇಂದ್ರಿಯದಿಂದ ಆಘ್ರಾಣಿಸು.''

**ಭೃಗುರಾಮಸ್ವರೂಪೇಣ ದಿವ್ಯವಾಗಿಂದ್ರಿಯೇಣ ವೈ ।**
**ಸಾಂತ್ವಯ ಶ್ಲಕ್ಷ್ಣಯಾ ವಾಚಾ ಭಕ್ತಂ ಮಾಮನುಕಂಪಯ ॥★॥**

''ಪರಶುರಾಮರೂಪವಾದ ವಾಗಿಂದ್ರಿಯದಿಂದ ನನ್ನನ್ನು ಮೃದುಲ ಮಾತುಗಳಿಂದ ಸಾಂತ್ವನಗೊಳಿಸು. ನನ್ನಲ್ಲಿ ದಯ ತೋರು.''

**ಕೃತ್ವಾ ಪವಿತ್ರಂ ಪೂತಂ ಚ ತತ್ತತ್ಸ್ವಾದುರಸೈರ್ಯುತಮ್ ।**
**ಮಹಾಕೂರ್ಮಸ್ವರೂಪೇಣ ದಿವ್ಯಜಿಹ್ವೇಂದ್ರಿಯೇಣ ವೈ ॥★॥**

**ಆಸ್ವಾದಯ ಸ್ವಾದು ರಮ್ಯಂ ಭುಂಕ್ಷ್ವ ದೇವ ರಮಾಪತೇ ।**
**ಅಗಣಯ್ಯಾಪರಾಧಾನ್ ಮೇ ಪ್ರಸಾದಂ ಕುರು ಕೇಶವ ॥★॥**

''ನಾನು, ನನ್ನ ಮಡದಿ ಮುಂತಾದವರು ಮಾಡಿದ ಅಡಿಗೆಯನ್ನು ಪವಿತ್ರಗೊಳಿಸು. ಆಯಾ ಪದಾರ್ಥಗಳಿಗೆ ಯೋಗ್ಯವಾದ ಅಪ್ರಾಕೃತ ಸ್ವಾದುರಸದಿಂದ ಭೋಜ್ಯಪದಾರ್ಥಗಳನ್ನು ತುಂಬು. ಬಳಿಕ ನಿನ್ನ ಕೂರ್ಮ-ರೂಪಾತ್ಮಕವಾದ ನಾಲಿಗೆಯಿಂದ ಚಪ್ಪರಿಸಿ ಆಸ್ವಾದಿಸು. ಎಣಿಕೆ ಇಲ್ಲದ ಎನ್ನಪರಾಧಗಳನ್ನು ಕ್ಷಮಿಸು.''

**ಸಿದ್ಧಮೇವಾನ್ನವಸ್ತ್ರಾದ್ಯಂ ವಿಷ್ಣೋಸ್ಸ್ವಾತಂತ್ರ್ಯತಸ್ಸದಾ ।**
**ಸ್ವಾರ್ಥಂ ಸಮರ್ಪಯೇದ್ವಿಷ್ಣೌ ಯಥಾ ಪ್ರಾಣೇ ಸುರಾಃ ಪುರಾ ॥★॥**

''ಸ್ವಾತಂತ್ರ್ಯೇಣ ಸರ್ವಸ್ವಾಮಿಯಾದುದರಿಂದ ಎಲ್ಲ ಅನ್ನವಸ್ತ್ರಆಭರಣ ಜಲಗಂಧಪುಷ್ಪಾದಿಗಳು ವಿಷ್ಣುವಿನದೇ. ಆದರೂ ಅದು ನಮಗೆ ಅನಂತ ಮಡಿಯಾಗಿ ಸಿಗಲಿ ಎಂಬ ಅಪೇಕ್ಷೆಯಿಂದ ದೇವತೆಗಳು ವಾಯುದೇವರಿಗೆ ಸಮರ್ಪಣೆ ಮಾಡುವಂತೆ ನಾವು ನಿನಗೆ ಸಮರ್ಪಿಸುತ್ತಿದ್ದೇವೆ.''

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥★॥**

''ನಾನು ಸಮರ್ಪಿಸುವ ಅನ್ನಭಕ್ಷ್ಯಭೋಜ್ಯಾದಿಗಳು ರಸ, ಗುಣ, ಪರಿಮಾಣಗಳಲ್ಲಿ ಅತ್ಯಂತ ಕ್ಷುದ್ರವಾಗಿದ್ದರೂ ''ಎಲೆ, ಹೂ, ಹಣ್ಣು, ಜಲ

## ನೈವೇದ್ಯ ಸ್ವೀಕಾರ ಪ್ರಾರ್ಥನೆ

ನಂತರ ಭಗವಂತನಿಗೆ ಪ್ರಾರ್ಥಿಸುವುದು.

**ಅದ್ಯ ತಿಷ್ಠತಿ ಯತ್ಕಿಂಚಿತ್ ಕಲ್ಪಿತಂ ಚಾಪರಂ ಗೃಹೇ ।**
**ಪಕ್ವಮನ್ನಂ ಸಪಾನೀಯಂ ಸರ್ವೋಪಸ್ಕರಸಂಯುತಮ್ ॥★॥**

''ಓ ದೇವ, ಇಂದು ನನ್ನ ಮನೆಯಲ್ಲಿ ಮಾಡಿದ ಅನ್ನ, ಉಪಸ್ಕರ, ಪಾನೀಯ, ಇವೆಲ್ಲವೂ ನಿನಗೆ ಸಮರ್ಪಿತ.''

**ಯಥಾಕಾಲಂ ಮನುಷ್ಯಾದ್ಯೈಃ ಭೋಕ್ಷ್ಯಮಾಣಂ ಶರೀರಿಭಿಃ ।**
**ತತ್ಸರ್ವಂ ವಿಷ್ಣುಪೂಜಾಸ್ತು ಪ್ರೀಯತಾಂ ಮೇ ಜನಾರ್ದನಃ ॥★॥**

''ಆ ಆ ಕಾಲದಲ್ಲಿ (ಋತುಗಳಲ್ಲಿ) ಮನುಷ್ಯ, ನಾನಾವಿಧವಾದ ಪ್ರಾಣಿ, ಪಶು, ಸರೀಸೃಪ, ಪಕ್ಷಿ, ಕ್ರಿಮಿ, ಕೀಟ, ಜಲಚರ, ಋಷಿ, ಗಂಧರ್ವ, ದೇವ, ದೇವೋತ್ತಮ ಇವರೆಲ್ಲರು ಉಣ್ಣುವ, ಭೋಗಿಸುವ ಪದಾರ್ಥವೆಲ್ಲ ನಿನಗೆ ಸಮರ್ಪಣೆ. ನೀನು ಸುಪ್ರೀತನಾಗು.''

**ಶ್ರೀನಿವಾಸ ನಮಸ್ತುಭ್ಯಂ ಮಹಾನೈವೇದ್ಯಮುತ್ತಮಮ್ ।**
**ನಿತ್ಯತೃಪ್ತ ಗೃಹಾಣೇದಂ ಕೃಪಯಾ ಭಕ್ತವತ್ಸಲ ॥★॥**

''ಓ ಸಿರಿಯೊಡೆಯ! ನೀನು ನಿತ್ಯತೃಪ್ತ, ಆಪ್ತಕಾಮ, ಅನಂತಾನಂದ ಸಂದೋಹರೂಪ, ಪರನಿರಪೇಕ್ಷ, ಆದರೆ ಭಕ್ತವತ್ಸಲನೂ ಹೌದು. ಕಾರಣ ನಾನು ಇಟ್ಟ (ನನ್ನಿಂದ ಮಾಡಿಸಿ ಇಡಿಸಿದ) ನಿನ್ನದೇ ಆದ ಈ ಮಹಾನೈವೇದ್ಯವನ್ನು ನೀನು ಸ್ವೀಕರಿಸು.''

**ಭಗವನ್ ಶ್ರೀಪತೇ ನ್ಯಸ್ತಂ ನೈವೇದ್ಯಂ ತ್ವತ್ಪುರೋ ಮಯಾ ।**
**ಕಪಿಲಾತ್ಮಕದಿವ್ಯೇನ ಚಕ್ಷುಷಾ ತ್ವವಲೋಕಯ ॥★॥**

''ಓ ಭಗವನ್, ನಿನ್ನೆದುರು ನೈವೇದ್ಯವನ್ನು ಇಟ್ಟಿರುವೆ. ಅದನ್ನು ಕಪಿಲ-ರೂಪವಾದ ನಿನ್ನ ದಿವ್ಯ ಕಣ್ಣುಗಳಿಂದ ಅವಲೋಕಿಸು.''

**ನೃಸಿಂಹಾತ್ಮಕದಿವ್ಯೇನ ದಿವ್ಯಘ್ರಾಣೇಂದ್ರಿಯೇಣ ವೈ ।**
**ತದ್ವಸ್ತುನಿಷ್ಠಂ ಗಂಧಂ ಚ ದಿವ್ಯಮಾಘ್ರಾಯ ಚಿನ್ಮಯ ॥★॥**

''ಆ ಪದಾರ್ಥಗಳಲ್ಲಿರುವ ದಿವ್ಯಗಂಧವನ್ನು ನರಸಿಂಹರೂಪವಾದ ಅಪ್ರಾಕೃತ ನಿನ್ನ ಘ್ರಾಣೇಂದ್ರಿಯದಿಂದ ಆಘ್ರಾಣಿಸು.''

**ಭೃಗುರಾಮಸ್ವರೂಪೇಣ ದಿವ್ಯವಾಗಿಂದ್ರಿಯೇಣ ವೈ ।**
**ಸಾಂತ್ವಯ ಶ್ಲಕ್ಷ್ಣಯಾ ವಾಚಾ ಭಕ್ತಂ ಮಾಮನುಕಂಪಯ ॥★॥**

''ಪರಶುರಾಮರೂಪವಾದ ವಾಗಿಂದ್ರಿಯದಿಂದ ನನ್ನನ್ನು ಮೃದುಲ ಮಾತುಗಳಿಂದ ಸಾಂತ್ವನಗೊಳಿಸು. ನನ್ನಲ್ಲಿ ದಯ ತೋರು.''

**ಕೃತ್ವಾ ಪವಿತ್ರಂ ಪೂತಂ ಚ ತತ್ತತ್ಸ್ವಾದುರಸೈರ್ಯುತಮ್ ।**
**ಮಹಾಕೂರ್ಮಸ್ವರೂಪೇಣ ದಿವ್ಯಜಿಹ್ವೇಂದ್ರಿಯೇಣ ವೈ ॥★॥**

**ಆಸ್ವಾದಯ ಸ್ವಾದು ರಮ್ಯಂ ಭುಂಕ್ಷ್ವ ದೇವ ರಮಾಪತೇ ।**
**ಅಗಣಯ್ಯಾಪರಾಧಾನ್ ಮೇ ಪ್ರಸಾದಂ ಕುರು ಕೇಶವ ॥★॥**

''ನಾನು, ನನ್ನ ಮಡದಿ ಮುಂತಾದವರು ಮಾಡಿದ ಅಡಿಗೆಯನ್ನು ಪವಿತ್ರಗೊಳಿಸು. ಆಯಾ ಪದಾರ್ಥಗಳಿಗೆ ಯೋಗ್ಯವಾದ ಅಪ್ರಾಕೃತ ಸ್ವಾದುರಸದಿಂದ ಭೋಜ್ಯಪದಾರ್ಥಗಳನ್ನು ತುಂಬು. ಬಳಿಕ ನಿನ್ನ ಕೂರ್ಮ-ರೂಪಾತ್ಮಕವಾದ ನಾಲಿಗೆಯಿಂದ ಚಪ್ಪರಿಸಿ ಆಸ್ವಾದಿಸು. ಎಣಿಕೆ ಇಲ್ಲದ ಎನ್ನಪರಾಧಗಳನ್ನು ಕ್ಷಮಿಸು.''

**ಸಿದ್ಧಮೇವಾನ್ನವಸ್ತ್ರಾದ್ಯಂ ವಿಷ್ಣೋಸ್ಸ್ವಾತಂತ್ರ್ಯತಸ್ಸದಾ ।**
**ಸ್ವಾರ್ಥಂ ಸಮರ್ಪಯೇದ್ವಿಷ್ಣೌ ಯಥಾ ಪ್ರಾಣೇ ಸುರಾಃ ಪುರಾ ॥★॥**

''ಸ್ವಾತಂತ್ರ್ಯೇಣ ಸರ್ವಸ್ವಾಮಿಯಾದುದರಿಂದ ಎಲ್ಲ ಅನ್ನವಸ್ತ್ರಆಭರಣ ಜಲಗಂಧಪುಷ್ಪಾದಿಗಳು ವಿಷ್ಣುವಿನದೇ. ಆದರೂ ಅದು ನಮಗೆ ಅನಂತ ಮಡಿಯಾಗಿ ಸಿಗಲಿ ಎಂಬ ಅಪೇಕ್ಷೆಯಿಂದ ದೇವತೆಗಳು ವಾಯುದೇವರಿಗೆ ಸಮರ್ಪಣೆ ಮಾಡುವಂತೆ ನಾವು ನಿನಗೆ ಸಮರ್ಪಿಸುತ್ತಿದ್ದೇವೆ.''

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥★॥**

''ನಾನು ಸಮರ್ಪಿಸುವ ಅನ್ನಭಕ್ಷ್ಯಭೋಜ್ಯಾದಿಗಳು ರಸ, ಗುಣ, ಪರಿಮಾಣಗಳಲ್ಲಿ ಅತ್ಯಂತ ಕ್ಷುದ್ರವಾಗಿದ್ದರೂ ''ಎಲೆ, ಹೂ, ಹಣ್ಣು, ಜಲ

ಇವುಗಳನ್ನೂ ಭಕ್ತಿಯಿಂದ ಸಮರ್ಪಿಸಿದ್ದಾದರೆ ಅವಶ್ಯವಾಗಿ ನಾನು ಸ್ವೀಕರಿಸುವೆ.'' ಎಂಬ ನಿನ್ನ ಮಾತಿನ ಭರವಸೆಯಿಂದಾಗಿ ಅರ್ಪಿಸುತ್ತಿದ್ದೇನೆ.''

ಏವಂ ಧ್ಯಾತ್ವಾ ಜಗದ್ಧಾತುಃ ನೈವೇದ್ಯಸ್ಯ ಸಮರ್ಪಣೇ ।
ಮುಖ್ಯಪ್ರಾಣಪತಿರ್ಯೋಗ್ಯಃ ಯಜ್ಞಾಖ್ಯಸ್ತತ್ರ ದೇವತಾ ॥★॥

ಜ್ಞಾನಪೂರ್ವಂ ವಿಚಿಂತ್ಯೈವಂ ಹೃದಿಸ್ಥೇನಾವಿನಾಸ್ಥಿತಮ್ ।
ಸಾಲಗ್ರಾಮಾದಿಗೇನೈಕ್ಯಂ ವಿಚಿಂತ್ಯ ಪರಮೇಶಿತುಃ ॥★॥

''ಜಗತ್ತಿಗೆ ಅನ್ನಆಹಾರಾದಿಗಳನ್ನು ಕೊಟ್ಟು ರಕ್ಷಕನೂ, ಪೋಷಕನೂ ಆದ ಭಗವಂತನಿಗೆ ನೈವೇದ್ಯವನ್ನು ಸಮರ್ಪಿಸಲು ಮುಖ್ಯಪ್ರಾಣೇಶ್ವರರೇ ಯೋಗ್ಯರು. ಈ ಸಮರ್ಪಣರೂಪ ಕರ್ಮಕ್ಕೆ ಯಜ್ಞನಾಮಕ ಭಗವಂತನೇ ನಿಯಾಮಕ. ಈ ರೀತಿ ಜ್ಞಾನಪೂರ್ವಕವಾಗಿ ತಿಳಿದು ಅರ್ಚಕನ ಹೃದಯದಲ್ಲಿರುವ ಅಂತರ್ಯಾಮಿಗೂ, ಪೂಜಿಸಲ್ಪಡುವ ಪ್ರತಿಮಾ, ಸಾಲಿಗ್ರಾಮಗಳಲ್ಲಿರುವ ಪರಮಾತ್ಮನಿಗೂ, ನಿವೇದಿಸಲ್ಪಡುತ್ತಿರುವ ಅನ್ನಭಕ್ಷ್ಯಭೋಜ್ಯಾದಿಗಳಲ್ಲಿರುವ ಪರಮಾತ್ಮನಿಗೂ ಅಭೇದವನ್ನು ಚಿಂತಿಸಬೇಕು. (ಅರ್ಚಕನಲ್ಲಿದ್ದು ತಾನೇ ಸಮರ್ಪಿಸಿ, ಪ್ರತಿಮೆಯಲ್ಲಿದ್ದು ತಾನೇ ಸ್ವೀಕರಿಸಿ, ಭಕ್ಷ್ಯಾದಿಗಳಲ್ಲಿರುವ ಸ್ವಾಖ್ಯರಸವನ್ನು ತಾನೇ ಭೋಗಿಸುತ್ತಾನೆ.''

ಸ್ವತಂತ್ರ ನಿರ್ದೋಷ ಗುಣಪೂರ್ಣ ಜ್ಞೇಯ ವಿಮುಕ್ತಿದ ।
ನಿಃಸ್ಪೃಹೇಶ್ವರ ಸರ್ವೇಶ ಶುಭಸಾರಭುಗವ್ಯಯ ॥★॥

ಅಪ್ರಮೇಯ ರಮಾಬ್ರಹ್ಮರುದ್ರೇಂದ್ರಾದಿನಮಸ್ಕೃತ ।
ಸತ್ಯಸಂಕಲ್ಪ ಕಾರುಣ್ಯನಿಧೇ ನಿತ್ಯನಿರಾಮಯ ।
ಭಕ್ತವತ್ಸಲ ಪಾಹೀತಿ ಪ್ರಾರ್ಥ್ಯ ದೇವೇಶ್ವರಂ ಹರಿಮ್ ॥★॥

ನಾರಾಯಣ ತ್ವತ್ಸ್ವರೂಪಾನ್ ರಸಾನ್ ಲಕ್ಷ್ಮ್ಯಾತ್ಮಕಾನ್ ರಸಾನ್ ।
ಭುಂಕ್ಷ್ವಾಥೋ ಪ್ರಾಕೃತಾನ್ ದೃಷ್ಟ್ವಾ ಶುದ್ಧೀಕುರು ಜಗತ್ಪತೇ ॥★॥

''ಓ ಸ್ವತಂತ್ರ ! ಓ ನಿರ್ದೋಷ ! ಓ ಗುಣಪೂರ್ಣ !
ಓ ಸರ್ವವೇದಾದಿಗಳಿಂದ ತಿಳಿಯಬೇಕಾದ ಪರತತ್ತ್ವ !
ಭವಬಂಧನ ಬಿಡಿಸಿ ಮುಕ್ತಿಧಾಮವನ್ನೈದಿಸುವ ಮುಕುಂದ ! ವಾಸುದೇವ!
ಯಾವುದರ ಅಪೇಕ್ಷೆಯೂ ಇಲ್ಲದ ಆಪ್ತಕಾಮ ! ನಿಸ್ಪೃಹ !

ಎಲ್ಲವನ್ನೂ ನಿಯಮಿಸುವ ಸರ್ವೇಶ್ವರ !

ಸ್ವಾಖ್ಯರಸವನ್ನೇ ಭೋಗಿಸುವ ಶುಭಸಾರಭೋಕ್ತಾ !

ಏನನ್ನು ಉಣ್ಣದಿದ್ದರೂ ನಿರ್ವಿಕಾರನಾಗಿರುವ ಅವ್ಯಯ !

ಸಿರಿ ವಿಧಿ ವಾಯುಗಳ ಎಣಿಕೆಗೆ ಎಟುಕದೇ ದೂರನಿಂತ ಅಪ್ರಮೇಯ !

ಅವರೆಲ್ಲರಿಂದ ವಂದಿತ ! ಎಂದೆಂದಿಗೂ ತಪ್ಪದ ಸಂಕಲ್ಪವಿರುವ ಸತ್ಯಸಂಕಲ್ಪ!

ಭಕ್ತರನ್ನು ಹರಸಿ ಉದ್ಧರಿಸುವ ಕಾರುಣ್ಯನಿಧೆ !

ರೋಗ, ರುಜಿನೆ, ಹುಟ್ಟು, ಸಾವು, ನೋವು, ಅಳಿವು ಮುಂತಾದ ಯಾವ ದೋಷಗಳಿಲ್ಲದ ನಿತ್ಯ ನಿರಾಮಯ !

ಭಕ್ತರು ಮಾಡಿದ, ಕ್ಷುದ್ರ ಸೇವೆಯನ್ನು ಹಿಗ್ಗಿಸಿ ದೊಡ್ಡದಾಗಿ ಕಾಣುವ ಭಕ್ತವತ್ಸಲ !

ನನ್ನನ್ನು ಕಾಪಾಡು.

ಓ ಭಗವನ್ ! ನಿನ್ನ ಸ್ವಾಖ್ಯರಸವನ್ನು ಭೋಗಿಸು.

ರಸರೂಪನಾದ ನಿನ್ನನ್ನೇ ನೀನು ಉಣ್ಣು.

ಲಕ್ಷ್ಮೀರೂಪವಾದ ರಸವನ್ನು ಆಘ್ರಾಣನ ಮಾಡು.

ಪ್ರಾಕೃತರಸಗಳನ್ನು ಕಣ್ಣಿನಿಂದ ನೋಡು. ಶುದ್ಧಗೊಳಿಸು.''

**ಅನಂತರೂಪೇಣ ರಮಾ ತ್ವತ್ಪೂಜಾಂ ಕರ್ತುಮಂಜಸಾ ।**
**ನ ಶಶಾಕಾಲ್ಪಸಾರೋಽಸ್ಮಿ ನೇಶೋಽಹಮಿತಿ ಕಿಂ ವದೇ ॥★॥**

**ಕ್ಷಮಾಪಯಾಪರಾಧಾನ್ ಮೇ ದಯಾಸಾಗರ ತೇ ನಮಃ ॥★॥**

''ಅನಂತರೂಪಗಳಿಂದಲೂ ರಮಾದೇವಿಯು ನಿನ್ನ ಪೂಜೆಯನ್ನು ಚೆನ್ನಾಗಿ ಮಾಡಲು ಸಮರ್ಥಳಾಗದಿರುವಾಗ ಅಲ್ಪಸಾರನಾದ ನಾನು ನಿನ್ನನ್ನು ಹೇಗೆ ತಾನೆ ಆರಾಧಿಸಲು ಸಾಧ್ಯ?

ಆದುದರಿಂದ ದಯಾಸಾಗರ! ನನ್ನ ಅಪರಾಧಗಳನ್ನು ಕ್ಷಮಿಸು, ನಿನಗೆ ಕೋಟಿ ಕೋಟಿ ಅನಂತ ನಮನಗಳು.''

ಹೀಗೆ ಪ್ರಾರ್ಥಿಸಿ, ನೈವೇದ್ಯವನ್ನು ಸಮರ್ಪಿಸಬೇಕು. ಮಧ್ಯ ಮಧ್ಯದಲ್ಲಿ ಗಂಗಾಜಲವನ್ನು ಪಾನೀಯವನ್ನು ಸಮರ್ಪಿಸಬೇಕು. ಭಗವಂತನು ಭೋಗಿಸುತ್ತಿದ್ದಾನೆ ಎಂದು ಧ್ಯಾನಿಸುತ್ತ ನಮಗೂ ದೇವರಿಗೂ ಮಧ್ಯದಲ್ಲಿ

ಜವನಿಕೆ (ಪರದೆಯನ್ನು) ಕಲ್ಪಿಸಿ ಮೂಲಮಂತ್ರವನ್ನು ೧೦೮ ಬಾರಿ ಜಪಿಸಬೇಕು. ಆ ಕಾಲದಲ್ಲಿ ದ್ವಾದಶ ಸ್ತೋತ್ರಾದಿಗಳನ್ನು ಪಠಿಸಬೇಕು.

## ನೈವೇದ್ಯ ಅನುಸಂಧಾನ

ಈ ಸನ್ನಿವೇಶದಲ್ಲಿ, ವಿಶ್ವಗುರುಗಳಾದ ಶ್ರೀಮದಾನಂದತೀರ್ಥ-ಭಗವತ್ಪಾದಾಚಾರ್ಯರು ತಿಳಿಸಿರುವ ಅನೇಕ ಪ್ರಮೇಯಗಳಲ್ಲಿಯ ಕೆಲವನ್ನು ಇಲ್ಲಿ ಸಂಗ್ರಹವಾಗಿ ತಿಳಿಯೋಣ. ತಿಳಿದು ಅನುಸಂಧಾನ ಮಾಡಲು ಯತ್ನಿಸೋಣ.

ಭಗವಂತನ ಆನಂದಕ್ಕೆ ಕೊನೆ ಇಲ್ಲ. ಅದು ಅನಂತ, ಅನಂತವಿಧ. ಆ ತೆರನಾದ ಆನಂದ ಬೇರೆ ಯಾರೊಬ್ಬರಲ್ಲೂ ಇಲ್ಲ. ಅನಿತರಸಾಧಾರಣ. ಅದು ಅಲೌಕಿಕ ಹಾಗೂ ಅಪ್ರಾಕೃತ. ಅದು ಸ್ವತಂತ್ರ.

ಸಿರಿ, ವಿಧಿ, ವಾಯುಗಳ ಆನಂದದಂತೆ ಪರಾಧೀನವಲ್ಲ. ಅದು ಅನಾದಿ, ನಿತ್ಯ, ಶಾಶ್ವತ, ಏಕಪ್ರಕಾರ, ಸ್ವಾಭಾವಿಕ, ಅಚಿಂತ್ಯ, ಅದ್ಭುತ. ಅದು ನಿರವಧಿಕ, ನಿಶ್ಛಿದ್ರ.

ದೇವರ ಆನಂದಕ್ಕಿಂತಲೂ ಹೆಚ್ಚಿನ ಆನಂದ ಯಾರಿಗೂ ಇಲ್ಲ, ಅಂತೆಯೇ ನಿರತಿಶಯ. ಈ ಆನಂದ ದುಃಖದೊಡನೆ ಮಿಶ್ರಿತವಾಗಿಲ್ಲ. ದೇವರ ಆನಂದ ಎಂದಿಗೂ ಹಿಗ್ಗುವುದಿಲ್ಲ. ಎಂದಿಗೂ ಕುಗ್ಗುವುದಿಲ್ಲ. ಹ್ರಾಸ, ವೃದ್ಧಿ ವಿಹೀನ.

ಇಂಥ ಆನಂದವೇ ಆ ಭಗವಂತನ ಸ್ವರೂಪ. ಅಂತೆಯೇ ಆತ ಪೂರ್ಣ ಪರಿತುಷ್ಟ, ಪರಿಪೂರ್ಣ ಆಪ್ತಕಾಮ. ಹೀಗಿದ್ದರೂ ಇಚ್ಛಿಸುವದು ಅವನ ಕ್ರೀಡೆ, ಭೋಗಿಸುವದು ಅವನ ಲೀಲೆ.

ಭೋಗವಿದ್ದಾಗ ವೃದ್ಧಿ, ಇಲ್ಲದಿರುವಾಗ ಕ್ಷಯ ಎನ್ನುವದು ಇಲ್ಲ. ಭಗವಂತ ಇಡಿಯ ವಿಶ್ವವನ್ನೇ ಭೋಗಿಸುತ್ತಾನೆ. ಅವನು ಭೋಗಿಸದಿರುವ ವಸ್ತುವೇ ಇಲ್ಲ ಎಂದರೆ ತಪ್ಪಾಗಲಿಕ್ಕಿಲ್ಲ.

ಅವನಿಗೆ ಭೋಗ್ಯವಾದದ್ದು ತನ್ನಯ ಸ್ವರೂಪ, ತನ್ನ ಗುಣ, ರೂಪ, ಕ್ರಿಯೆಗಳು.

ನಂತರ ರಮಾದೇವಿಯ ರೂಪ, ಗುಣ, ಕ್ರಿಯೆಗಳು,

ಬ್ರಹ್ಮ, ವಾಯು ಮುಂತಾದ ಸಮಸ್ತ ದೇವತೆಗಳು,

ಎಲ್ಲ ಚೇತನರು, ದೇಶ, ಕಾಲ, ಶಬ್ದ, ಪ್ರಕೃತಿತತ್ವವೇ ಮೊದಲಾದ ಸಮಸ್ತ ಜಡ ಪದಾರ್ಥಗಳು.

ಹೀಗಿದೆ ಶ್ರೀಹರಿಯ ಭೋಗ್ಯವಸ್ತುಗಳ ಪಟ್ಟಿ. ಅವುಗಳಲ್ಲಿ ಭಗವಂತನ ಸ್ವರೂಪ, ಗುಣ, ಕ್ರಿಯೆಗಳು ಸರ್ವೋತ್ತಮವಾಗಿವೆ.

ತನ್ನ ರೂಪ, ಗುಣ, ಕ್ರಿಯಾಗಳ ಭೋಗ

ಭಗವಂತ ತನ್ನನ್ನು ತಾನು ಭೋಗಿಸುತ್ತಾನೆ. ಇದು ಸ್ವಾತ್ಮ ಭೋಗ. ಇದು ಎರಡು ಬಗೆ.

ವಿಷಯಗಳಲ್ಲಧಿಷ್ಠಿತವಾಗದಿರುವ ತನ್ನ ಸ್ವರೂಪವನ್ನು ಅನುಭವಿಸುವದು ಒಂದು.

ವಿಷಯಗಳಲ್ಲಿ ಅಧಿಷ್ಠಿತವಾಗಿರುವ ತನ್ನ ಸ್ವರೂಪವನ್ನು ಅನುಭವಿಸುವದು ಮತ್ತೊಂದು.

ಇದರ ವಿವರ

ಪರಮಾತ್ಮನಿಗೆ ಅನಂತಾನಂತ ರೂಪಗುಣಗಳು. ಅದರಲ್ಲಿ ಕೆಲವು ಮಾತ್ರ ರಮಾದಿ ಚೇತನರಲ್ಲೂ ಪ್ರಕೃತಿ ಮುಂತಾದ ಅಚೇತನಗಳಲ್ಲೂ ಅಧಿಷ್ಠಿತವಾಗಿವೆ.

ರಮಾದಿಗಳಲ್ಲಿರುವ ರೂಪಗಳು ಸ್ವಾಖ್ಯರಮಾದಿರೂಪಗಳೆಂದು ಕರೆಯಲ್ಪಡುತ್ತವೆ. (ಈ ಬಗ್ಗೆ ಇದೇ ಗ್ರಂಥದಲ್ಲಿ ಬೇರೆ ಕಡೆಗೆ ಸ್ವಲ್ಪ ವಿವರಿಸಿದಂತೆ) ಭಗವಂತನು ರೂಪದಲ್ಲಿ ರೂಪನಾಗಿ, ರಸದಲ್ಲಿ ರಸನಾಗಿ, ನೀರಿನಲ್ಲಿ ನೀರಾಗಿ, ಹಣ್ಣಿನಲ್ಲಿ ಹಣ್ಣಾಗಿ (ಅಂದರೆ ಆಯಾ ರೂಪಗಳಿಂದ) ಇರುವನು.

ಇಂಥ ರೂಪ, ರಸ, ನೀರು, ಹಣ್ಣುಗಳಲ್ಲಿರುವ ಭಗವಂತನ ರೂಪ, ರಸ, ನೀರು, ಹಣ್ಣಿನ ರೂಪಗಳಿಗೆ ಸ್ವಾಖ್ಯ ರೂಪ, ಸ್ವಾಖ್ಯ ರಸ ಮುಂತಾಗಿ ಕರೆಯಬೇಕು.

ಇದನ್ನುಳಿದ ಅನಂತಾನಂತ ರೂಪಗಳು ಯಾವ ಅಧಿಷ್ಠಾನದಲ್ಲೂ ಇರುವವಲ್ಲ.

ಯಾವ ಅಧಿಷ್ಠಾನಗಳಲ್ಲೂ ಅಧಿಷ್ಠಿತವಾಗದಿರುವ ತನ್ನ ಅನಂತಾನಂತ-ರೂಪಗಳನ್ನು ಭಗವಂತನು ಅನುಭವಿಸುತ್ತಾನೆ.

ಅಲ್ಲದೇ ತನ್ನಯ ಆನಂದ, ಜ್ಞಾನ, ದ್ಯುತಿ, ಬಲ, ಸೌಂದರ್ಯ, ಔದಾರ್ಯ, ವೀರ್ಯ, ಸ್ವಾತಂತ್ರ್ಯ, ಪ್ರಾಗಲ್ಭ್ಯ, ಇಚ್ಛಾ, ದಯಾ, ಪ್ರೀತಿ, ಕ್ಷಮಾ, ಕೃತಿ, ತೇಜಸ್, ಕಾಂತಿ, ಸ್ವಾಮಿತ್ವ ಮುಂತಾದ ಅನಂತ ಗುಣಗಳನ್ನು,

ಸೃಜನ, ಪಾಲನ, ಸಂಹರಣ, ಪ್ರೇರಣ, ನಿಯಮನ, ಧಾರಣ, ಬೋಧನ, ಬಂಧನ, ಮೋಚನ, ಗಮನ ಮುಂತಾದ ಅನಂತ ಕ್ರಿಯೆಗಳನ್ನೂ ಅನುಭವಿಸುತ್ತಾನೆ.

ಈ ಎಲ್ಲ ಗುಣಗಳೂ ಕ್ರಿಯೆಗಳೂ ಭಗವಂತನಿಂದ ಅತ್ಯಂತಾಭಿನ್ನ.

ಒಂದೊಂದು ಗುಣವೂ ಒಂದೊಂದು ಕ್ರಿಯೆಯೂ ಅನಂತ. ಪ್ರತಿಯೊಂದು ಗುಣ ಹಾಗೂ ಕ್ರಿಯೆಗಳು ಅನಂತಗುಣಕ್ರಿಯಾಮಯವಾಗಿವೆ. ಎಂದರೆ ಜ್ಞಾನಕ್ಕೆ ಜ್ಞಾನ, ಬಲ, ಆನಂದಾದಿ ಗುಣಗಳೂ ಹಾಗೂ ಸೃಜನ, ಪಾಲನ, ಪ್ರೇರಣ ಮುಂತಾದ ಕ್ರಿಯೆಗಳೂ ಇವೆ.

ಅಂದರೆ ಜ್ಞಾನವೆಂಬ ಹೆಸರಿನ ಭಗವಂತನ ರೂಪವೇ ವಿಶ್ವದ ಸೃಷ್ಟಿ, ಸಂಹಾರ ಮುಂತಾದ ಅನಂತ ಕ್ರಿಯೆಗಳನ್ನು ಮಾಡುತ್ತದೆ ಎಂದರ್ಥ.

ಇದೇ ರೀತಿ ಆನಂದ, ಬಲ ಮುಂತಾದ ಗುಣಗಳು, ಹಾಗೂ ಪಾಲನ ಪ್ರೇರಣ ಮುಂತಾದ ಕ್ರಿಯೆಗಳೂ ಅನಂತ ಗುಣಕ್ರಿಯಾಪೂರ್ಣವಾಗಿವೆ.

ಈ ಎಲ್ಲ ಗುಣಕ್ರಿಯೆಗಳು ಭಗವಂತನಿಗೆ ಭೋಗ್ಯವಾಗಿವೆ.

ಅಲ್ಲದೇ ದೇವರು ಗುಣಗಳನ್ನು, ಕ್ರಿಯೆಗಳನ್ನು ಅನುಭವಿಸುವಂತೆ, ಗುಣಗಳೂ ಗುಣಕ್ರಿಯೆಗಳನ್ನು, ಕ್ರಿಯೆಗಳೂ ಗುಣಕ್ರಿಯೆಗಳನ್ನು ಅನುಭವಿಸುತ್ತವೆ.

ಆದುದರಿಂದ ಪರಸ್ಪರ ಭೋಗ್ಯವಾಗಿವೆ. ಇದು ಎಲ್ಲ ಆ ಅನಂತನ ಅಚಿಂತ್ಯ ಲೀಲಾವಿಲಾಸ. ಮಾನವನಿಗೆ ತಿಳಿಯಲು ಅಸಾಧ್ಯ. ಛೇ, ರಮಾದಿಗಳಿಗೂ.

ಮೇಲೆ ಹೇಳಿದ ಎರಡನೇ ತರಹದ ರೂಪಗಳ ಭೋಗವನ್ನು ವಿವರವಾಗಿ ತಿಳಿಯೋಣ.

ರಮಾದಿದೇವತೆಗಳಲ್ಲಿ ಇರುವ ತನ್ನ ರೂಪಗಳನ್ನು ಅನುಭವಿಸುತ್ತಾನೆ.

ಆದೇ ರೀತಿ, ಭಕ್ಷ್ಯ ಭೋಜ್ಯಗಳಲ್ಲೂ ಹಣ್ಣು ಹಾಲು ಮಧುಗಳಲ್ಲೂ ಇರುವ ತನ್ನ ರೂಪಗಳನ್ನು ಭಗವಂತ ಭೋಗಿಸುತ್ತಾನೆ.

ಈ ರೂಪಗಳೇ ಸ್ವಾಖ್ಯರಸ, ಸ್ವಾಖ್ಯದ್ರವ್ಯಗಳೆಂದು ಕರೆಯಲ್ಪಡುತ್ತವೆ.

ಇನ್ನು ಭಗವದ್ರೂಪವಾದ ವಿಷಯಗಳು ಅನಂತ, ಅನಂತವಿಧ.

ಹೇಗೆ ರೂಪ ಕಣ್ಣಿಗೆ ಮಾತ್ರ ತೋರುವದು ಹೊರತು ಕಿವಿಗೆ ಅಲ್ಲ. ಹಾಗೆ ಭಗವದಾತ್ಮಕ ಬಣ್ಣಗಳು ಅನಂತವಿಧವಾದುದರಿಂದ ಅನಂತ ಇಂದ್ರಿಯಗಳಿಂದ ಸಂಭೋಗ್ಯವಾಗಿವೆ. ಅನಂತ ಇಂದ್ರಿಯಗಳು ಭಗವಂತನಿಗೆ ಮಾತ್ರವಿರುವದರಿಂದ ಅವನಿಗೆ ಮಾತ್ರ ಅವು ಸಂಭೋಗ್ಯವು.

ಈ ಭಗವದಾತ್ಮಕ ಬಣ್ಣ ರಸ ಮುಂತಾದವುಗಳನ್ನು ಸಿರಿ, ವಿಧಿ ಮುಂತಾದ ದೇವತೆಗಳು ಚಿಂತಿಸಲೂ ಸಮರ್ಥರಾಗುವದಿಲ್ಲ. ಇವು ಪ್ರಪಂಚದಲ್ಲಿ ಅನುಭವಿಸುವಂತಹ ರೂಪ ರಸಗಳಂತಲ್ಲ. ಲೋಕತೋ ಅತ್ಯಂತವಿಲಕ್ಷಣವಾಗಿವೆ.

ಇದನ್ನು ಕಂಡು ಸಿರಿಯೂ ಪುಲಕಿತಳಾಗುತ್ತಾಳೆ, ಬೆರಗುಗೊಂಡು ಬಾಗಿ ನಮಿಸುತ್ತಾಳೆ.

ಅಲ್ಲದೇ ಭಗವದಾತ್ಮಕ ಶಬ್ದ, ರಸ ಮುಂತಾದವು ತಮ್ಮನ್ನು ತಾವು ಭೋಗಿಸುತ್ತವೆ. ಭಗವದಾತ್ಮಕರೂಪವು ಶಬ್ದ ರಸಾದಿಗಳನ್ನು ಭೋಗಿಸುತ್ತದೆ. ಹೀಗೆ ಸ್ವಭೋಗ್ಯವು ಅನ್ಯೋನ್ಯಭೋಗ್ಯವೂ ಆಗಿವೆ.

### ಭೂತ ಭವಿಷ್ಯ ಸುಖಭೋಗ

ನಾವು ವರ್ತಮಾನವನ್ನು ಮಾತ್ರ ಅನುಭವಿಸುತ್ತೇವೆ. ಅತೀತವನ್ನು ನೆನೆಯುತ್ತೇವೆ, ಆದರೆ ಅನುಭವಿಸಲಾರೆವು. ಭವಿಷ್ಯವನ್ನಂತೂ ಅನುಭವಿಸಲು ನೆನೆಯಲೂ ಸಾಧ್ಯವಿಲ್ಲ. ಕೇವಲ ಊಹೆ, ಕಲ್ಪನೆ ಸಾಧ್ಯ.

ಆದರೆ ಭಗವಂತ ವರ್ತಮಾನದಂತೆ ಅನಂತಾನಂತ ಬ್ರಹ್ಮಕಲ್ಪಗಳ ಹಿಂದೆ ಆಗಿಹೋದ, ಅನಂತಾನಂತ ಬ್ರಹ್ಮಕಲ್ಪಗಳ ಮುಂದೆ ಬರುವ ತನ್ನಯ ಅನಂತ ಸುಖವನ್ನೂ ಭೋಗ್ಯಪದಾರ್ಥವನ್ನೂ ಎಲ್ಲ ಕಾಲದಲ್ಲೂ ಕ್ಷಣದ ಅನಂತಾಂಶ-ದಷ್ಟು ಸೂಕ್ಷ್ಮಕಾಲದಲ್ಲೂ ಭೋಗಿಸುತ್ತಾನೆ. ಇದು ಅತ್ಯದ್ಭುತ.

ರಮಾದೇವಿಯ ರೂಪ, ಗುಣ, ಕ್ರಿಯಾಗಳ ಭೋಗ

ಹಿಂದೆ ಹೇಳಿದಂತೆ ರಮಾದೇವಿಯಲ್ಲಿರುವ ತನ್ನ ರೂಪವನ್ನು ಭೋಗಿಸುತ್ತಾನೆ. ಅಲ್ಲದೇ ರಮಾದೇವಿಯನ್ನೂ ಭೋಗಿಸುತ್ತಾನೆ.

ಅವಳ ದೇಶಕಾಲವ್ಯಾಪ್ತಿ, ಭಕ್ತಿ, ಆನಂದ, ಜ್ಞಾನ, ಅವಳ ಅಸಾಧಾರಣ ಶಕ್ತಿ, ಸಾಮರ್ಥ್ಯ, ಚಂಚಲಾಪಾಂಗನೀರಾಜನ, ಅವಳ ವಿಲಾಸ, ಮಂದಹಾಸ, ನೃತ್ಯ, ಗಾನ ಮುಂತಾದವುಗಳನ್ನೆಲ್ಲ ದೇವರು ಅನುಭವಿಸುತ್ತಾನೆ.

ಈ ಗುಣಗಳೂ ಕ್ರಿಯೆಗಳೂ ಅನಂತ ಗುಣಕ್ರಿಯಾತ್ಮಕವಾಗಿರುವವು.

ಇದಲ್ಲದೇ ಭಗವಂತನು ಅನುಭವಿಸುವ ಬ್ರಹ್ಮಾದಿರೂಪವಾದ ಹಾಗೂ ಜಡರೂಪವಾದ ಶಬ್ದಸ್ಪರ್ಶಾದಿಗಳಲ್ಲೂ ಹೂ, ಹಣ್ಣು, ಹಾರ, ಚಂದನ, ಆಸನ, ಹಾಸಿಗೆ, ವಾಹನ, ಅರಮನೆ, ನದಿ, ಕಡಲು, ಬೆಟ್ಟ, ಗಿಡ, ಬಳ್ಳಿ, ದೀಪ, ಧೂಪ, ಪಾದುಕೆ, ಛತ್ರ, ಚಾಮರ, ವ್ಯಜನ, ಪರ್ಯಂಕ, ಮಣಿ, ಬೆಳ್ಳಿ, ಚಿನ್ನ ಮುಂತಾದ ಪದಾರ್ಥಗಳಲ್ಲಿ ಲಕ್ಷ್ಮಿಯು ಆಯಾ ರೂಪಳಾಗಿ ಆಯಾ ಆಕಾರಗಳಿಂದ ಇರುವಳು. ಇವು ರಮಾದೇವಿಯ ಸ್ವಾಖ್ಯರೂಪಗಳು.

ಈ ಎಲ್ಲ ರೂಪಗಳನ್ನು ಸ್ವತಂತ್ರ ಭಗವಂತ ಅನುಭವಿಸುವನು.

### ಮುಕ್ತಭೋಗ್ಯ ಆನಂದಾದಿ ಭೋಗ

ಮುಕ್ತನಾದ ಮನುಷ್ಯನಿಗೆ ಆಗುವ ಆನಂದವು ಒಂದು ಮೊತ್ತ ಎನ್ನುವುದಾದರೆ ಅದರ ನೂರು ಪಟ್ಟು ಮನುಷ್ಯಗಂಧರ್ವರ ಆನಂದ. ಅದಕ್ಕೆ ನೂರು ಪಟ್ಟು ದೇವಗಂಧರ್ವರದು.

ಹೀಗೆ ಪಿತೃ, ಆಜಾನಜ, ಕರ್ಮದೇವ, ದೇವ, ದಕ್ಷ, ಇಂದ್ರ, ರುದ್ರ, ಬ್ರಹ್ಮ ಈ ಎಲ್ಲ ದೇವತೆಗಳು ಉತ್ತರೋತ್ತರ ನೂರಾರು ಪಟ್ಟು ಹೆಚ್ಚಿನ ಆನಂದವನ್ನು ಆಸ್ವಾದಿಸುತ್ತಾರೆ.

ಹೀಗೆ ಅನಾದಿಕಾಲದಿಂದ ಅನಂತಕಾಲದವರೆಗಿನ ಮುಕ್ತರು ಅನುಭವಿಸುವ ಅನಂತ ಆನಂದವನ್ನು ಭಗವಂತ ಅನುಭವಿಸುವ.

ಇದೇ ಬಗೆಯಾಗಿ ಜ್ಞಾನ, ಬಲ, ಲಾವಣ್ಯ, ತೇಜಸ್ಸು ಮುಂತಾದ ಎಲ್ಲ ಗುಣಗಳನ್ನು ಅನುಭವಿಸುವ.

ಇವರೆಲ್ಲರ ಈ ಆನಂದಗಳ ಇಷ್ಟು ಬೃಹದ್ಗಾತ್ರದ ಮೊತ್ತವು ದೇವರ ಅನಂತವೂ, ಅಪಾರತೀರವೂ ಆದ ಆನಂದಕಡಲಿನ ಅತಿ ಕ್ಷುದ್ರವಾದ ಬಿಂದುವಿಗೂ ಕಡಿಮೆ.

ಜೊತೆಗೆ, ರಮಾ ಬ್ರಹ್ಮರೇ ಮೊದಲಾದ ಎಲ್ಲ ಮುಕ್ತಜೀವರು ನಿತ್ಯವೂ, ಪ್ರತಿಕ್ಷಣವೂ ದೇವರಿಂದ ಆನಂದವನ್ನು ಭಿಕ್ಷೆ ಬೇಡಿ ಅನುಭವಿಸುವ ಭಿಕ್ಷುಕರೇ, ಕಿಂಕರರೇ ಹೊರತು ಯಾರೂ ಸ್ವತಂತ್ರವಾಗಿ ಆನಂದವನ್ನು ಅನುಭವಿಸುವ ರಾಜರಲ್ಲ.

## ದೇವತಾಭೋಗ

ಸಂಸಾರಸ್ಥರಾದ ಸಮಸ್ತಬ್ರಹ್ಮಾದಿದೇವತೆಗಳು ಜಡವಾದ ಹೂ ಹಣ್ಣು, ಅನ್ನ ಪಾಯಸ, ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯಾದಿಗಳಲ್ಲಿ ಆಯಾ ಆಕಾರ, ಗುಣ, ರಸ ಮುಂತಾದವುಗಳುಳ್ಳವರಾಗಿ ಇರುವರು.

ಅವರು ತಮ್ಮ ತಮ್ಮ ಆ ಸ್ವರೂಪಗಳನ್ನು ಸಮರ್ಪಿಸುತ್ತಾರೆ. ಅದನ್ನೆಲ್ಲ ಭಗವಂತ ಭೋಗಿಸುತ್ತಾನೆ.

## ಕರ್ಮಾದಿ ಸಾಧನ ಭೋಗ

ದೇವರು ಬ್ರಹ್ಮಾದಿ ಸಕಲ ಜೀವರು ಮಾಡುವ ಭಕ್ತಿ, ಉಪಾಸನೆ, ಜ್ಞಾನ, ಕರ್ಮ ಮುಂತಾದವುಗಳ ಭೋಗವನ್ನೂ ಮಾಡುತ್ತಾನೆ. ಜೀವರು ಮಾಡುವ ಯಜ್ಞ, ತಪಸ್ಸು, ದಾನ ಇತ್ಯಾದಿಗಳನ್ನೂ ಭೋಗಿಸುತ್ತಾನೆ.

## ದೇಶ ಕಾಲ ಜಡ ವಿಶ್ವ ಭೋಗ

ದೇವರು ಅನಂತ ದೇಶವನ್ನು ಅನಂತ ಕಾಲವನ್ನು ಅನುಭವಿಸುತ್ತಾನೆ. ಆ ಅನಂತ ದೇಶ ಕಾಲಗಳ ಅನಂತಾನಂತ ಅಂಶಗಳನ್ನೂ ನಿರವಧಿಕ ಸ್ಪಷ್ಟವಾಗಿ ಅನುಭವಿಸುತ್ತಾನೆ.

ಅವುಗಳಲ್ಲಿ ಸ್ವಾಖ್ಯದೇಶ ಕಾಲರೂಪಗಳಿಂದ ವ್ಯಾಪಿಸಿರುವದನ್ನೂ ನಾವು ತಿಳಿದಿರುವೆವು.

ಪ್ರಕೃತಿ, ಮಹತ್, ಅಹಮ್, ಮನಸ್ಸು, ಇಂದ್ರಿಯ, ಭೂತ, ಬ್ರಹ್ಮಾಂಡ, ಲೋಕ, ದ್ವೀಪ, ಬೆಟ್ಟ, ಸಾಗರ ಮುಂತಾದವೆಲ್ಲವನ್ನೂ ಭಗವಂತನು ಭೋಗಿಸುತ್ತಾನೆ.

## '..ಭೋಜನದಾಯಿನೇ'

'ಅಲ್ಲಲ್ಲಿ ಆಹಾರವಿತ್ತವನು ಯಾರು'

ಇನ್ನೊಂದು ಮಹತ್ವದ ಅಂಶವನ್ನು ನಾವು ಗಮನಿಸಬೇಕು.

ಇಡಿಯ ವಿಶ್ವದ ಸೃಷ್ಟಿಯ ಮೊದಲ ಕ್ಷಣದಿಂದ ಕೊನೆಯ ಕ್ಷಣದವರೆಗೆ ಅನಂತಾನಂತ ಜೀವರಾಶಿಗಳು ಜನಿಸುವರು. ಈ ಜೀವರಾಶಿಗಳ ಸಂಖ್ಯೆ ಅನಂತಾನಂತ.

ಅಂದರೆ ಅನಾದಿಕಾಲದಿಂದ ಅನಂತಕಾಲದವರೆಗೆ ಇರುವ ಅನಂತಕಾಲ-ಕ್ಷಣಗಳ ಹಾಗೂ ಅನಂತಪರಮಾಣುಗಳ ಸಂಖ್ಯೆಗಿಂತಲೂ ಅನಂತ ಮಡಿ ಮಿಗಿಲಾದುದು ಜೀವರ ಸಂಖ್ಯೆ.

ಅವರಿಗೆ ಅನ್ನ, ಆಹಾರ ಅಗತ್ಯ. ಆದುದರಿಂದ ಆಹಾರವಿಲ್ಲದೇ ಯಾವ ಜೀವರನ್ನೂ ಎಂದಿಗೂ ಭಗವಂತ ಹುಟ್ಟಿಸುವದಿಲ್ಲ. ಹುಟ್ಟಿಸುವ ಆ ದೊರೆ ಹೊಟ್ಟೆಗೆ ಇಟ್ಟೇ ಹುಟ್ಟಿಸಿರುವ.

ಇಷ್ಟು ಮಾತ್ರವಲ್ಲ, ಎಲ್ಲರಿಗೆ ಒಂದೇ ತರಹದ ಆಹಾರ ಬೇಕಾಗುವದಿಲ್ಲ.

ಒಂದು ಜಾತಿಯ ಪ್ರಾಣಿಗೆ ಒಂದು, ಮತ್ತೊಂದು ಜಾತಿಗೆ ಮತ್ತೊಂದು. ಕಣ್ಣಿಗೆ ಕಾಣದಷ್ಟು ಸಣ್ಣ ಕ್ರಿಮಿ, ನುಷಿ, ನೊರಜು, ನೊಣ, ಇರಿವೆ, ಸೊಳ್ಳೆ ಮುಂತಾದ ಅತಿಕ್ಷುದ್ರವಾದ ಕೋಟಿಕೋಟಿ ಬಗೆಯ ಜಂತುಗಳು ಭೋಗಿಸುವ ಪದಾರ್ಥಗಳನ್ನು ಒದಗಿಸುತ್ತಾನೆ ಭಗವಂತ.

ಇದೇ ರೀತಿ ಜಿರುಳೆ, ಹಲ್ಲಿ, ಚೇಳು, ಇಲಿ, ಹಾವು ಮುಂತಾದ ಭೂಚರ,

ಮೀನು, ಏಡಿ, ಆಮೆ, ಮೊಸಳೆ, ತಿಮಿಂಗಿಲ ಮುಂತಾದ ಜಲಚರ,

ಗುಬ್ಬಿ, ಕಾಗೆ, ಕಪೋತ, ಕೋಗಿಲೆ, ಹದ್ದು, ಹಂಸ ಮುಂತಾದ ಖೇಚರ,

ಜಿಂಕೆ ಕುದುರೆ, ಹುಲಿ, ಸಿಂಹ, ಆನೆ, ಚಿರತೆ ಮುಂತಾದ ಪ್ರಾಣಿಗಳು,

ಸಮಸ್ತಮಾನವರು, ನಾಗ, ಪ್ರೇತ, ಭೂತ, ಪಿಶಾಚ, ಚಾರ, ಕಿನ್ನರ, ಸಿದ್ಧ, ಗಂಧರ್ವ, ಋಷಿ, ಪಿತೃ, ದೇವ, ದೇವೋತ್ತಮ ಮೊದಲಾದ ಎಂಬತ್ತುನಾಲ್ಕು ಲಕ್ಷ ಯೋನಿಗಳಲ್ಲಿ ಜನಿಸಿದ ಜೀವರಿಗೆ ಕೋಟಿ ಕೋಟಿ ತೆರನಾದ ಆಹಾರವನ್ನು ಒದಗಿಸುತ್ತಾನೆ.

ಅಲ್ಲದೇ, ಚಿಕ್ಕ ಶಿಶುವಿಗೆ ಬೇಕಾಗಿರುವ ಆಹಾರ ಬಾಲಕನಿಗೆ ಬೇಕಾಗುವದಿಲ್ಲ. ಬಾಲಕನಿಗೆ ಆಹಾರವಾದುದು ತರುಣನಿಗೆ ಸಲ್ಲ.

ಹೀಗೆ. ಶಿಶು, ಬಾಲ, ತರುಣ, ವಯಸ್ಕ, ತೀರವೃದ್ಧ ಇವೆಲ್ಲರಿಗೆ ಒಂದೇ ತೆರನಾದ ಆಹಾರವಲ್ಲ. ನಾನಾ ಬಗೆಯ ಆಹಾರ ಅಗತ್ಯ.

ಹೀಗೆ ಆಯಾ ಜೀವನ ಆಯುಷ್ಯದವರೆಗೆ ಅವರವರಿಗೆ ಬೇಕಾದ ಆಹಾರವನ್ನು ನಿರಂತರವಾಗಿ ಭಗವಂತನು ಸೃಜಿಸುತ್ತಾನೆ.

ಹೀಗೆ ಅನಂತಾನಂತ ಜೀವರಾಶಿಗಳ ಹೊಟ್ಟೆಯ ಹೊಣೆಯನ್ನು ಹೊತ್ತ ಕರುಣಾಮಯ ಪ್ರಭುವು

ಕ್ರಿಮಿಯ ಅಣುಹೊಟ್ಟೆಯನ್ನು,
ತಿಮಿಯ ಮಹೋದರವನ್ನು,
ಚಿಕ್ಕವರ ಚಿಕ್ಕ ಹೊಟ್ಟೆಯನ್ನು
ದೊಡ್ಡವರ ದೊಡ್ಡಹೊಟ್ಟೆಯನ್ನು ತುಂಬಿಸಿ ಸಂತಸಗೊಳಿಸುವನು.

ಅವರೆಲ್ಲರೂ ಉಣ್ಣುವದನ್ನು ತಾನೂ ಉಂಡು ಅವುಗಳಲ್ಲಿ ಶುಭವನ್ನು ಮಾತ್ರ ಸ್ವೀಕರಿಸಿ ಆನಂದತುಂದಿಲನಾಗಿ ಮೆರೆವ, ಸಿರಿಯರಸ.

**'ಈಶಾವಾಸ್ಯಮಿದಂ ಸರ್ವಂ..'**

ನಾವು ಭಗವಂತನಿಗೆ ನಿವೇದಿಸುತ್ತಿರುವ ಅನ್ನ, ಅದಕ್ಕೆ ಕಾರಣವಾದ ಧಾನ್ಯ, ನೀರು, ಬೆಂಕಿ, ಪಾತ್ರೆ, ವಲೆ, ಧಾನ್ಯಕ್ಕೆ ಕಾರಣವಾದ ಗಿಡ, ಅಂಕುರ, ಬೀಜ, ನೆಲ, ಗಾಳಿ ಇವೆಲ್ಲ ಯಾರದು?

ಯಾರು ಅದನ್ನೆಲ್ಲ ಹುಟ್ಟಿಸಿದವರು ?
ಅದರಲ್ಲೆಲ್ಲ ರಸವನ್ನು ತುಂಬಿದವರಾರು?
ಅದನ್ನು ಪೌಷ್ಟಿಕಗೊಳಿಸಿದವರಾರು ?

ಇದಕ್ಕೆ ಸೇರಿದಂತೆ ಭಗವಂತನಿಗೆ ಸಮರ್ಪಿಸಲು ಯಾವ ಪದಾರ್ಥವು ನನ್ನ ಸ್ವಂತದ್ದು ?

ಪುರ, ಪ್ರಾಕಾರ, ಗೋಪುರ, ವಿಮಾನ, ನೆಲ, ಗೋಡೆ, ಸ್ತಂಭ, ವೇದಿಕೆ, ಮಂಟಪ, ಕೂಡಿಸುವ ಪೀಠ, ಅಭಿಷೇಕದ ನೀರು, ಉಡಿಸುವ ಬಟ್ಟೆ, ತೊಡಿಸುವ ಅಲಂಕಾರ, ಪಿಡಿಯುವ ಆಯುಧ, ಲೇಪಿಸುವ ಗಂಧ, ಹಚ್ಚುವ ತಿಲಕ, ಅರ್ಚಿಸುವ ತುಲಸೀ, ಏರಿಸುವ ಮಾಲೆ, ಅರ್ಪಿಸುವ ಹೂಗಳು, ತೋರುವ ಧೂಪ, ಬೆಳಗುವ ದೀಪ, ಮಾಡುವ ನೈವೇದ್ಯ, ಧರಿಸುವ ಛತ್ರ, ಬೀಸುವ ಚಾಮರ, ಹಾಕುವ ವ್ಯಜನ, ನೋಡಿಸುವ ದರ್ಪಣ, ಹಾಡುವ ಗಾನ, ಮಾಡುವ ನೃತ್ಯ, ಬಾರಿಸುವ ವಾದ್ಯ, ಏರುವ ವಾಹನ, ಆಂದೋಲಿಕಾ, ರಥ, ಗಜ, ಸಿಂಹ, ಗರುಡ,

ಅಷ್ಟೇ ಅಲ್ಲ, ಬಾಗುವ ತಲೆ, ಮುಗಿಯುವ ಕೈ, ನುಡಿದ ಮಂತ್ರ, ನುಡಿಯುವ ನಾಲಿಗೆ, ನೋಡುವ ಕಣ್ಣು, ಧ್ಯಾನಿಸುವ ಮನಸ್ಸು, ಇವೆಲ್ಲ ಮಾಡುವ ಜೀವ,

ಇದಕ್ಕೆಲ್ಲ ಯಾರು ನಿಯಾಮಕರು ?

ಇದೆಲ್ಲ ಯಾರ ಸೊತ್ತು ?

ದೇವರು ಹುಟ್ಟಿಸಿದ, ಅವನೇ ನಿಯಮಿಸಿದ. ಅಂತೆಯೇ ಇದೆಲ್ಲ ಅವನ ಸೊತ್ತು. 'ತ್ವದೀಯಂ ವಸ್ತು ಗೋವಿಂದ ತುಭ್ಯಮೇವ ಸಮರ್ಪಯೇ'

ಇದನ್ನೆಲ್ಲ ಭಗವಂತ ಭೋಗಿಸುವ. ಭೋಗಿಸುವ ಕ್ರಮವೂ ತೀರ ವಿಲಕ್ಷಣ. ಅದು ಸಿರಿಗೂ ಎಟುಕದ ಮಾತು.

ಭಗವಂತ ನಾವಿಟ್ಟ ಅನ್ನವನ್ನು ತಿನ್ನುವುದಿಲ್ಲ. ಆ ಅನ್ನದಲ್ಲಿ ಅದೇ ಅನ್ನದ ಆಕಾರವಾಗಿ ತತ್ತ್ವಾಭಿಮಾನಿ ದೇವತೆಗಳು ಅವರ ಅಂತಸ್ಥರಾಗಿ ಪ್ರಾಣದೇವರು, ಅವರಲ್ಲಿ ರಮಾದೇವಿಯೂ ಅನ್ನದ ಆಕಾರದಲ್ಲಿ ಇರುವರು.

ಆ ರಮಾದೇವಿಯಲ್ಲಿ ಅನೇಕ ರೂಪಗಳಿಂದ ಭಗವಂತ ತುಂಬಿರುವ.

ಪ್ರತಿಮೆಯಲ್ಲಿರುವ ದೇವರು ಪ್ರಾಕೃತ ಅನ್ನದಲ್ಲಿರುವ ತನ್ನ ರೂಪವನ್ನೇ ಉಣ್ಣುವನು. ಸ್ವಾಖ್ಯರಸವನ್ನು ಆಸ್ವಾದಿಸುವನು.

ರಮಾರೂಪವಾದ ರಸವನ್ನು ಆಘ್ರಾಣಿಸುವನು. ಉಳಿದ ರಸವನ್ನು ಕಣ್ಣಿಂದ ನೋಡುವನು. ಆಸ್ವಾದಿಸುವ ಭಗವಂತನ ನಾಲಿಗೆ ಕೂರ್ಮ. ಆಘ್ರಾಣಿಸುವ ಘ್ರಾಣೇಂದ್ರಿಯ ನರಸಿಂಹ. ನೋಡುವ ಕಣ್ಣು ಕಪಿಲ.

ಮೇಲೆ ಹೇಳಿದ ಭಗವಂತನ ಸ್ವಾಖ್ಯರಸವನ್ನು ದೇವರ ಹೊರತಾಗಿ ಯಾರೂ ಭೋಗಿಸುವದಿಲ್ಲ. ದೇವರು ಭೋಗಿಸುವ ಸ್ವಾಖ್ಯರಸಕ್ಕೆ (ರಸರೂಪನಾದ ಭಗವಂತನಿಗೆ) ಅಧಿಷ್ಠಾನವಾದುದರಿಂದ ನಾವು ಭೋಗಿಸುವ ರಸದ ವರೆಗಿರುವ ಎಲ್ಲ ರಸಗಳೂ ದೇವರಿಗೆ ನಿವೇದಿತ ಎಂದು ಕರೆಯುತ್ತೇವೆ.

**'ಪುರುಷೋ ವಾ ಅಕ್ಷಿತಿಃ'**

ಭಗವಂತನು ಮಾಡುವ ಭೋಗದ ಈ ಕ್ರಮದ ಚಿಂತನೆಯ ಜೊತೆಗೆ ಅವನು ಭೋಗ್ಯ ಪದಾರ್ಥಗಳನ್ನು ಸೃಜಿಸುವ ಬಗೆಯನ್ನೂ ಸ್ವಲ್ಪ ನೆನೆಯಬೇಕು.

ಅನಂತ ಜೀವರಾಶಿಗಳಿಗೆ ಅಗತ್ಯವಾದ ಆಹಾರವನ್ನು ಒದಗಿಸಬೇಕು.

ಅಂತೆಯೇ ಭೂಮಿಯು ಆಗಾಗ ಆಗಾಗ ಆಹಾರವನ್ನು ಹುಟ್ಟಿಸುತ್ತಲೇ ಇರುವದು.

ಒಂದೇ ಬಾರಿ ಹುಟ್ಟಿಸಿದ ಆಹಾರ ಮುಂಬರುವ ಜನಾಂಗಕ್ಕೆ ದೊರಕದಿರಬಹುದು ಹಾಗಾಗಿ ಆಹಾರವನ್ನು ಹುಟ್ಟಿಸುವ ಪ್ರಕ್ರಿಯೆ ಜೀವರು ಹುಟ್ಟುವವರೆಗೆ ನಡೆಯುತ್ತಲೇ ಇರುವದು ಆವಶ್ಯಕ.

ಕಾರಣ, ಕೆಲವು ಬಾರಿ ಭೂಮಿಯಿಂದ ಬೆಳೆಯನ್ನು ಬೆಳೆದಮೇಲೆ ಮುಂದೆ ಭೂಮಿ ಬೆಳೆಯನ್ನು ಬೆಳೆಯುವುದಿಲ್ಲ ಎಂದಾಗಲು ಸಾಧ್ಯವೇ ಇಲ್ಲ.

ಹಾಗಾದರೆ ಆಗಿರುವ ಜೀವರ ಪಾಡೇನು? ಹೀಗೆ ಎಷ್ಟು ಸಲ ಬೆಳೆ ಬೆಳಿಸಿದರೂ ಭೂಮಿಯ ಶಕ್ತಿ ಉಡುಗಿ ಹೋಗುವದಿಲ್ಲ. ಕ್ಷಯವಾಗುವದಿಲ್ಲ.

ಈ ಭೂಶಕ್ತಿ ಅಕ್ಷೀಣ, ಶಾಶ್ವತ. ಇದನ್ನು ಕ್ಷಯವಾಗದಂತೆ ನೋಡಿಕೊಂಡವನು 'ಪುರುಷೋ ವಾ ಅಕ್ಷಿತಿಃ'.

ಆ ಪರಮಪುರುಷ ಈ ಭೂಶಕ್ತಿಯನ್ನು ಶಾಶ್ವತವಾಗಿರಿಸದಿದ್ದಲ್ಲಿ ಇದು ಸಾಧ್ಯವಿರಲಿಲ್ಲ. ಹೀಗೆ ಭೂಮಿಶಕ್ತಿಯನ್ನು ಅಕ್ಷತವಾಗಿರಿಸಿದ 'ಅಕ್ಷಿತಿ' ಭೂಮಾಪುರುಷನನ್ನು ನೆನಿಸಬೇಕು. ನೆನೆದು ಮನ ತಣಿಸಬೇಕು.

**'ಪುಷ್ಣಾಮಿ ಚೌಷಧೀಃ ಸರ್ವಾಃ'**

ಅಲ್ಲದೇ, ದೇವರ ಇನ್ನೊಂದು ಕಾರುಣ್ಯವನ್ನು ಅರಿತುಕೊಳ್ಳಬೇಕು. ಧಾನ್ಯವನ್ನು ಬೆಳೆಯುವದಕ್ಕೆ ಬೀಜವನ್ನು ಬಿತ್ತುತ್ತೇವೆ. ಬಿತ್ತಿದ ಬೀಜದಿಂದ ಧಾನ್ಯ ಬರುವದು ಒಂದು ಬೀಜದಿಂದ ವಿಪುಲ ಧಾನ್ಯ ಲಾಭವಾಗುವದು.

ಹೀಗಿರದೆ ಒಂದು ಬೀಜ ಬಿತ್ತಿದುದರಿಂದ ಒಂದೇ ಧಾನ್ಯದ ಕಣವು ಲಭಿಸಿದರೆ ಯಾವುದನ್ನು ತಿಂದೇವು? ಯಾವುದನ್ನು ಬಿತ್ತೇವು?

ಒಂದು ಬೀಜದಿಂದ ಒಂದೇ ಕಣವು ಬಂದುದರಿಂದ ತಿಂದರೆ ಬಿತ್ತಲು ಇಲ್ಲ. ಬಿತ್ತಿದರೆ ತಿನ್ನಲು ಇಲ್ಲ. ಹೀಗಾಗಿ ಮಹಾಕ್ಷಾಮ.

ಈ ನಿಟ್ಟಿನಿಂದ ಒಂದು ಬೀಜದಿಂದ ವಿಪುಲಧಾನ್ಯದ ಬೆಳಸನ್ನು ಕರುಣಿಸುವ ಆ ದೇವರ ದಯೆಯನ್ನು ತಪ್ಪದೇ ನೆನೆಯಬೇಕು.

ನೈವೇದ್ಯ ಮಾಡುವಾಗ ಇನ್ನೂ ಕೆಲವನ್ನು ನಾವು ಧ್ಯಾನಿಸಬೇಕು.

## ‘ಪಿತರಂ ಪರಿಚರತಃ ಪೃಥಿವೀ ಚ ಅಗ್ನಿಶ್ಚ’

ನಾವು ಉಣ್ಣುವ ಧಾನ್ಯವನ್ನು ಭೂಮಿ ನಮಗಾಗಿಯೇ ಬೆಳೆಸಿದೆ, ನಾವು ಉಣ್ಣುವ ಅನ್ನವನ್ನು ಬೆಂಕಿ ನಮಗಾಗಿಯೇ ಬೇಯಿಸಿದೆ ಎಂದು ನಾವು ತಿಳಿದಿರುವದು. ಇದು ಭ್ರಾಂತಿ.

ಭೂಮಿ ಬೆಂಕಿ ಭಗವಂತನ ಮುಖದಿಂದ ಹುಟ್ಟಿದ ದೇವತೆಗಳು. ಅಂದರೆ ದೇವರ ಮುಖ ಭೂಮಿ ಬೆಂಕಿಗಳಿಗೆ ತಂದೆ.

ತಮ್ಮ ತಂದೆಯಾದ ದೇವರ ಮುಖದ ಕೈಂಕರ್ಯವನ್ನು ಮಾಡಲೋಸುಗ ಭೂಮಿ ಧಾನ್ಯವನ್ನು ಬೆಳೆಸಿತು, ಬೆಂಕಿ ಅದನ್ನು ಬೇಯಿಸಿತು.

ಭೂಮಿ, ಬೆಂಕಿ ದೇವತೆಗಳು ತಾವು ಸಿದ್ಧಪಡಿಸಿದ ಅನ್ನವನ್ನು ಜೀವರ ಮುಖದಲ್ಲಿರುವ ದೇವರ ಮುಖಕ್ಕೆ ಅರ್ಪಿಸಿ ಕೃತಾರ್ಥರಾಗುತ್ತಾರೆ.

ಅದನ್ನು ‘ನಾವೇ ತಿಂದೆವು’ ಎಂಬ ಸಂಭ್ರಮದಲ್ಲಿ ನಾವು ಮೆರೆಯುತ್ತೇವೆ, ದೇವರನ್ನು ಮರೆಯುತ್ತೇವೆ.

ಇನ್ನೊಂದು,

ತೆಂಗು ಮುಂತಾದ ಯಾವುದೇ ಮರಕ್ಕೆ ನೀರೆರೆಯುವದು ಕಾಲಿಗೆ. ಆ ನೀರು, ಮಣ್ಣು, ಬೇರು, ಕಾಂಡ, ಚರ್ಮ, ಶಾಖೆ, ಎಲೆ, ಹೂ, ಜುಬ್ಬರ, ಪರಟೆ ಇಲ್ಲೆಲ್ಲೂ ಕಾಣಸಿಗದೆ ಕಾಯಿಯ ಮಧ್ಯದಲ್ಲೇ ಸಮೃದ್ಧವಾಗಿ, ಅದೂ ಸಿಹಿಯಾಗಿ ದೊರೆಯುವದು ದೇವರ ಸಂಕಲ್ಪದ ಮಹಿಮೆ.

ಇದೇ ರೀತಿ ಮಾವು, ಬಾಳೆ, ಹಲಸು ಮುಂತಾದ ಹಣ್ಣು ಕಾಯಿ, ತರಕಾರಿಗಳಲ್ಲಿ ತಿಳಿಯಬೇಕು.

## ‘ಅಹಂ ವೈಶ್ವಾನರೋ ಭೂತ್ವಾ..’

ಮತ್ತೊಂದು,

ಹಲ್ಲಿನಿಂದ ಕಡಿಯಲು, ಜಗಿಯಲು, ಕಷ್ಟವಾದ ಗಟ್ಟಿಯಾದ ಕೆಲವು ಪದಾರ್ಥಗಳು ನಮ್ಮ ಹೊಟ್ಟೆಯಲ್ಲಿ ಹೋಗಿ ನಮಗೇನೂ ತಿಳಿಯದಂತೆ ಸಹಜವಾಗಿ ಪಚನವಾಗುವದು.

ಆ ಗಟ್ಟಿ ಪದಾರ್ಥ ಹೊಟ್ಟೆಗೆ ಹಾದು ಹೋಗುವ ದಾರಿ ಅತಿ ಕೋಮಲವಾದ ನಾಲ.

ಆ ನಾಲವನ್ನು ಹಾಗೂ ಉದರಕೋಶದ ಚರ್ಮವನ್ನು ಹರಿಯುವುದೂ ಇಲ್ಲ. ಮಧ್ಯದಲ್ಲೇ ಸಿಕ್ಕು ಬೀಳುವದೂ ಇಲ್ಲ.

ಹೀಗೆ ಸ್ವಾಭಾವಿಕ ಪ್ರಕ್ರಿಯೆಯಿಂದ ಪದಾರ್ಥಗಳನ್ನು ಜೀರ್ಣಗೊಳಿಸುವ ಅಧ್ಭುತ ಶಕ್ತಿ ಆ ಭಗವಂತನಿಗೆ ಮೀಸಲು ಎಂದಾಗಿ ಮರೆಯದೇ ಸ್ಮರಿಸಬೇಕು.

ಇನ್ನೊಂದು,

ಯಾವುದೇ ಜೀವ, ವಿಶೇಷವಾಗಿ ಮಾನವ ಉಣ್ಣುವದಕ್ಕೆ ಯಾವ ನಿರ್ಬಂಧವೂ ಇಲ್ಲ.

ಶಾಸ್ತ್ರೀಯ ನಿಯಮಗಳು ಒತ್ತಟ್ಟಿಗಿರಲಿ, ಆಯುರ್ವೇದ ಶಾಸ್ತ್ರಕ್ಕೆ ತೀರ ವಿರುದ್ಧವಾಗಿ ಕಂಡ ಕಂಡ ಆಹಾರವನ್ನು ಮನಗಂಡಂತೆ ತಿನ್ನುತ್ತಾನೆ.

ಯಾವ ಎರಡು ಪದಾರ್ಥಗಳು ಹೊರಗೆ ಬೆರಸಿದರೆ ಕೆಡಬಹುದು, ಕೊಳೆಯಬಹುದು, ವಿಷವಾಗಬಹುದು ಅಂಥ ಎಲ್ಲ ಆಹಾರವನ್ನು ಹೊಟ್ಟೆಯಲ್ಲಿ ಜಡಿದುಕೊಳ್ಳುತ್ತಾನೆ.

ಆದರೂ ಆ ಎಲ್ಲ ಪದಾರ್ಥಗಳೂ ಉತ್ತಮ ರೀತಿಯಲ್ಲಿ ಜೀರ್ಣವಾಗುವದನ್ನು ಕಂಡಿದ್ದೇವೆ.

ಇದೆಲ್ಲ ನಮ್ಮುದರದಲ್ಲಿರುವ ವೈಶ್ವಾನರನ ಪಚನ ಪ್ರಕ್ರಿಯೆಯಲ್ಲವೇ ? ಆತನ ಪ್ರಸಾದರಸವಲ್ಲವೇ ?

**'ತನುತ್ವೇಪ್ಯಖಿಲಂಭರಂ'**

ಇಂಥ ಭಗವಂತನಿಗೆ ಮಾಡುವ ನೈವೇದ್ಯ ಅವನ ಹೊಟ್ಟೆ ತುಂಬುವದಕ್ಕಲ್ಲ. ಅವನ ಹೊಟ್ಟೆ ತುಂಬಲು ಸಾಧ್ಯವೂ ಇಲ್ಲ.

ಇಡಿಯ ಅವ್ಯಾಕೃತ ಗಗನವನ್ನೇ ಉದರದಲ್ಲಿ, ಅಷ್ಟೇ ಏಕೆ ? ತನ್ನ ರೋಮಕೂಪದಲ್ಲಿ ಇರಿಸಿಕೊಂಡ ಭಗವಂತನ ಉದರದ ಏಕದೇಶದ ಕೋಟ್ಯಂಶದ ಅನಂತಾಂಶವನ್ನೂ ಸಪ್ತಾವರಣ ಸಮೇತವಾದ ಇಡಿಯ ಬ್ರಹ್ಮಾಂಡ ತುಂಬಲಾರದು.

ಮಾತ್ರವಲ್ಲ, ಅವ್ಯಾಕೃತ ಆಕಾಶದಲ್ಲಿರಿಸಿದ ಪರಮಾಣುವಿನಂತೆ ತೋರುವದು.

ಅಂಥ ಭಗವಂತನ ಹೊಟ್ಟೆಯನ್ನು, ನಾವು ಸಲ್ಲಿಸುವ ನೈವೇದ್ಯವು ಹೇಗೆ

ತುಂಬೀತು? ಮನೆಗೆ ಬಂದ ಅತಿಥಿಯ ಹೊಟ್ಟೆ ತುಂಬದಿದ್ದರೆ ನಮಗೇ ಸಂಕೋಚವಾಗುವದು.

ಶಿಶುವಿಗೆ ಉಣಿಸುವಷ್ಟು ಆಹಾರವನ್ನು ಮಹಾ ಭೋಕ್ತೃವಾದ ಜಟ್ಟಿಗೆ ಬಡಿಸಿದರೆ ಹೇಳಲಾರದಷ್ಟು ತೀರ ನಾಚಿಕೆಯಾಗುವದು ಸಹಜ.

ಹಾಗೇ 'ಸರ್ವಭುಕ್' ಆಗಿರುವ ಭಗವಂತನಿಗೆ ತೀರ ಸ್ವಲ್ಪ ಆಹಾರವನ್ನು ನಿವೇದಿಸಲು ನಮಗೆ ನಾಚಿಕೆಯಾಗಬೇಕು.

ಆದರೂ ನಿತ್ಯತೃಪ್ತ, ಆಪ್ತಕಾಮ, ನಿತ್ಯ ಅನಶನನಾದ ದೇವನಿಗೆ ಭಕ್ತಿಯಿಂದ ನಾವು ಸಮರ್ಪಿಸಿದ 'ಒಂದು ಕವಲ ಅನ್ನ', 'ಬಿಂದು ಗಂಗೋದಕವು' ಸಂತುಷ್ಟಿ ತರಿಸುವಲ್ಲಿ ಸಂದೇಹವಿಲ್ಲ.

**'..ವಿನಾ ದ್ರವ್ಯಂ ಸುಖಾಗತಾನ್'**

ಅಬ್ಬ ! ಈತ ಕರುಣೆಯ ಮಹಾಸಾಗರ, ಕ್ಷಮೆಯ ಕಡಲು. ತನ್ನ ಪರಿಪೂರ್ಣ ಪೂಜೆಗಾಗಿಯೂ ದ್ರವ್ಯವನ್ನಪೇಕ್ಷಿಸುವದಿಲ್ಲ.

ದ್ರವ್ಯಸಂಪಾದನಾಯಾಸ ಬೇಡ, ಅದಕ್ಕಾಗಿ ಭಕ್ತರು ಪರದಾಡುವದು ಬೇಕಿಲ್ಲ ಎನ್ನುತ್ತಾನೆ.

ಹಣವಿಲ್ಲದೆ, ಶ್ರಮವೂ ಇಲ್ಲದೆ ಸುಲಭ ಲಭಿಸಿದ ಕಂದ, ಮೂಲ, ಫಲಗಳಿಂದ, ಎಲೆ, ಹೂ, ನೀರುಗಳಿಂದಲೇ ಅತುಲ ಆದರ, ಅನನ್ಯ-ಭಕ್ತಿಪುರಸ್ಸರವಾಗಿ ಅರ್ಚಿಸಬಹುದು. ಅಷ್ಟರಿಂದಲೇ 'ಆನಂದತುಂದಿಲನಾಗುವ'

'ವಾಸನಾರೂಪಕಾನ್ ಭೋಜ್ಯಾನ್ ಭುಂಕ್ತೇ'

ಇಷ್ಟು ಮಾತ್ರವಲ್ಲ ಈ ಕ್ಷುದ್ರ ಪ್ರಾಕೃತ, ಭೌತಿಕ, ನೀರಸ, ಕಂದ, ಮೂಲ, ಫಲ, ಎಲೆ, ಜಲಗಳನ್ನೂ ಬಯಸುವುದಿಲ್ಲ.

ಆತ್ಮತೃಪ್ತನಲ್ಲವೇ ಆತ ?

ಇವೆಲ್ಲವನ್ನೂ ಭಕ್ತಿಭರಿತ ಮನಸ್ಸಿನಿಂದಲೇ ನಿರ್ಮಿಸಿ ಸಮರ್ಪಿಸಿದರೂ ಸಾಕು, ದೊರೆ ಶ್ರೀಹರಿ ಮೆಚ್ಚುವ.

ಒಂದರ್ಥದಲ್ಲಿ ಮಾನಸ ಪದಾರ್ಥಗಳೇ ಭಾರಿಯಾದ ನೈವೇದ್ಯ. ಮಾನಸ ಪದಾರ್ಥಗಳೊಡನೆ ಬಾಹ್ಯಪದಾರ್ಥಗಳನ್ನು ಸಾಟಿ ಮಾಡಿ ನೋಡುವ, ಬನ್ನಿ.

ಬಾಹ್ಯಪದಾರ್ಥಗಳಿಗೆ ಪರಿಮಿತಿ ಇದೆ. ಅವುಗಳಿಗೆ ದೇಶಕಾಲಗಳ ನಿರ್ಬಂಧವಿದೆ. ಕಂಡಂತೆ ಕಂಡಷ್ಟು ಬಳಸಲಾಗದು.

ಪರಮಶುದ್ಧವಾಗಿರುವದಂತೂ ಇನ್ನೂ ಕಷ್ಟ ಇತ್ಯಾದಿ ಕೊರತೆಗಳನ್ನು ನಾವು ಬಾಹ್ಯ ಪದಾರ್ಥಗಳಲ್ಲಿ ಕಾಣುತ್ತೇವೆ.

ಮಹಾರಾಜರಿಗೂ ಶಾಸ್ತ್ರದಲ್ಲಿ ಹೇಳಿದಂತೆ ಪದಾರ್ಥಗಳನ್ನು ನಿರ್ಮಿಸಿ ಪೂಜೆ ಮಾಡಲು ಸಾಧ್ಯವಿಲ್ಲ.

ಅಷ್ಟು ಅದ್ಭುತವಾಗಿದೆ ಪೂಜಾವಿಧಿ.

ಆದರೆ, ಬಹಿರಂಗದಲ್ಲಿ ಬಡವನಾದರೂ ಮನದ ಭಾವಭಕ್ತಿಗಳಿಂದ, ಜ್ಞಾನ ವಿಜ್ಞಾನಗಳಿಂದ, ಅಂತರಂಗದಲ್ಲಿ ಸಿರಿವಂತನಾದವ ರಾಜಾಧಿರಾಜರಾದ ಸಾರ್ವಭೌಮರು ಯಾವುದನ್ನು ಸಮರ್ಪಿಸಲು ಸಮರ್ಥರಾಗುವದಿಲ್ಲವೋ, ಅಂಥ ಮಹಾನೈವೇದ್ಯವನ್ನು ಪರಮಾದ್ಭುತ ರೀತಿಯಲ್ಲಿ ಸಮರ್ಪಿಸಲು ಸಮರ್ಥನಾಗುವ.

ಇಲ್ಲಿ ಕೆಲ ಪ್ರಶ್ನೆಗಳು.

ಈ ಬಗೆಯ ಮನೋಮಯ ಪದಾರ್ಥಗಳ ಅರ್ಪಣೆಯಿಂದ ಶಾಸ್ತ್ರವಿಧಿಗಳನ್ನು ಪೂರೈಸಿದಂತಾಗಲು ಸಾಧ್ಯವೇ ?

ಈ ಪ್ರಶ್ನೆಯ ಕುರಿತು ಚಿಂತನ ಮಾಡೋಣ.

ಮನೋಮಯ ಪದಾರ್ಥಗಳಿಂದಲೂ ಶಾಸ್ತ್ರವಿಧಿಯನ್ನು ಪೂರೈಸಲು ಸಾಧ್ಯವಿದೆ.

ಅಂತೆಯೇ ಮಾನಸಪೂಜಾವಿಧಾನ ಶಾಸ್ತ್ರದಲ್ಲಿ ಇರುವದು.

ಆದರೆ ಬಹಿರಂಗ ಕರ್ಮವನ್ನು ಮಾಡಲು ಸಾಧ್ಯವಿರುವಾಗ ಅದನ್ನು ಬಿಟ್ಟು ಕೇವಲ ಅಂತರಂಗವನ್ನು ಆಚರಿಸಿದರೆ ಪೂರ್ಣವಾಗುವದಿಲ್ಲ.

ಯಾವನಿಗೆ ಅಶಕ್ತಿ, ದಾರಿದ್ರ್ಯ, ರೋಗ ಮುಂತಾದವುಗಳಿವೆಯೋ, ಆತ ಬಹಿರಂಗಕರ್ಮವನ್ನು ಆಚರಿಸಲು ಸಮರ್ಥನಾಗದಿರುವಾಗ ಕೇವಲ ಅಂತರಂಗವನ್ನು ಭಕ್ತಿಯಿಂದ ಮಾಡಿ ಕೃತಕೃತ್ಯನಾಗಬಹುದು.

ಆದರೆ ಬಹಿರಂಗಕರ್ಮದ ಹೊಣೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಅಂತರಂಗಕ್ಕೆ ಶರಣು ಹೋದರೆ ಅದು ಕೇವಲ ಶಾಠ್ಯವಾಗುವದು.

ಸಿರಿ, ಸಂಪತ್ತು ಸಮೃದ್ಧವಾಗಿದ್ದರೂ ತನ್ನ ಜಿಪುಣತನದಿಂದಾಗಿ,

ಬಲ, ಶಕ್ತಿಗಳು ವಿಪುಲವಾಗಿದ್ದರೂ ತನ್ನ ಜಾಡ್ಯದಿಂದಾಗಿ,

ಪ್ರಯತ್ನಿಸಿದರೆ ಸಮಯ ಸಾಕಷ್ಟು ದೊರೆಯಲು ಸಾಧ್ಯವಿದ್ದರೂ ಕೇವಲ ತನ್ನ ಆಲಸ್ಯದಿಂದಾಗಿ,

ಸೋಗು ಹಾಕಿ ಅಥವಾ ಭಕ್ತಿಯಿಂದಲೇ ಆಗಲಿ ಮಾನಸ ಪೂಜೆಯನ್ನು ಮಾತ್ರ ಮಾಡಿ ಬಹಿರಂಗವನ್ನು ತ್ಯಜಿಸಿದಲ್ಲಿ ಪಾಪ ಬರುವದು ನಿಶ್ಚಿತ.

ಈ ಕುರಿತಾಗಿ ಮಾನಸಪೂಜೆಯ ಸಂದರ್ಭದಲ್ಲಿ ಸ್ವಲ್ಪ ಪ್ರಸ್ತಾಪ ಮಾಡಿದ್ದೇವೆ.

**'..ಏಷ ಪ್ರವಿವಿಕ್ತಾಹಾರತರಃ..'**

ಮನೋನಿರ್ಮಿತ ವಾಸನಾಮಯ ಪದಾರ್ಥಗಳನ್ನು ದೇವರಿಗೆ ಅರ್ಪಿಸಿದಲ್ಲಿ ದೇವರು ಅದನ್ನು ಭೋಗಿಸುವ ಕ್ರಮವೇನು ?

ಅವುಗಳಿಂದ ದೇವರಿಗೆ ತೃಪ್ತಿ ಆಗಬಹುದೇ ?

ಸ್ವತಂತ್ರ ಪ್ರಭುವಾದ ಭಗವಂತನಿಗೆ ಯಾವ ತೆರನಾದ ಪದಾರ್ಥಗಳನ್ನು ಭೋಗಿಸುವಲ್ಲೂ ಸಮಸ್ಯೆ ಇಲ್ಲ.

ಶಾಸ್ತ್ರ ತಿಳಿಸುವಂತೆ ನಮ್ಮ ಜಾಗರದಲ್ಲಿ (ಎಚ್ಚರದಲ್ಲಿ) ನಮ್ಮಂತೆ ದೇವರೂ ಬಾಹ್ಯಪದಾರ್ಥಗಳನ್ನು ವಿಶ್ವನಾಮಕನಾಗಿ ಅನುಭವಿಸುವ.

ಹಾಗೆ ನಾವು ಸ್ವಪ್ನದಲ್ಲಿ ನಾನಾ ಬಗೆಯ ಪದಾರ್ಥಗಳನ್ನು ಹೇಗೆ ಭೋಗಿಸುತ್ತೇವೆಯೋ, ಹಾಗೆಯೇ ನಮ್ಮೊಡನೆ ದೇವರೂ ತೈಜಸ ನಾಮಕನಾಗಿ ಸ್ವಪ್ನಪದಾರ್ಥಗಳನ್ನು ಭೋಗಿಸುವ.

ಸ್ವಪ್ನದಲ್ಲಿಯ ವಾಸನಾಮಯ ಪದಾರ್ಥಗಳ ಅನುಭವದಿಂದ ನಮಗೆ ತಾತ್ಕಾಲಿಕವಾಗಿ ತೃಪ್ತಿಯಾದೀತು.

ಆದರೆ ಎಚ್ಚರವಾದಮೇಲೆ ಆ ತೃಪ್ತಿ ಇರಲು ಸಾಧ್ಯವಿಲ್ಲ. ಇದಕ್ಕೆ ಕಾರಣ ಜೀವ ಬಾಹ್ಯ ಪದಾರ್ಥಗಳಿಂದಲೇ ತೃಪ್ತಿ ಪಡಲು ಸಾಧ್ಯ. ವಾಸನಾನಿರ್ಮಿತ ಪದಾರ್ಥಗಳಿಂದ ಸಂತೋಷಪಡಲಾರ.

ಇದು ಜೀವನ ಸ್ವಭಾವ ಎನ್ನಿ, ಇಲ್ಲವೆ ದುರ್ದೈವ, ದೌರ್ಬಲ್ಯ, ಅಪರಿಪೂರ್ಣತೆ ಎಂತಾದರೂ ಅನ್ನಿ. ಅಂತೂ ಇದು ವಸ್ತುಸ್ಥಿತಿ.

ಆದರೆ, ದೇವರ ಕಥೆ ಮಾತ್ರ ಇದಕ್ಕೆ ವಿಪರೀತ.

ಅದಕ್ಕೆ ಕಾರಣ ಅವನ ಪರಿಪೂರ್ಣತೆ, ಅನಂತ ಸಾಮರ್ಥ್ಯ, ಸ್ವಾತಂತ್ರ್ಯ ಎಂತೆನ್ನುವದು ತೀರ ಸ್ಪಷ್ಟ.

ಹೀಗಾಗಿ ನಾವು ಅರ್ಪಿಸಿದ ವಾಸನಾನಿರ್ಮಿತ ಚಿನ್ನದ ವೇದಿಕೆ, ಸ್ಫಟಿಕದ ಮಂಟಪ, ಚಂದನದ ಗಂಧ, ಚಂಪಕಾದಿ ಪುಷ್ಪ, ಅನ್ನಾದಿ ನಾನಾ ಭೋಗ್ಯಪದಾರ್ಥಗಳನ್ನು ಭಗವಂತ ಭೋಗಿಸುತ್ತಾನೆ.

ಆದರೆ ವಾಸನಾಮಯಪದಾರ್ಥಗಳನ್ನು ನಾವು ಭೋಗಿಸುವದಕ್ಕೂ ದೇವರು ಭೋಗಿಸುವದಕ್ಕೂ ಮೇರು ಮಶಕಗಳಷ್ಟು ಅಂತರವಿದೆ.

ಮಾತ್ರವಲ್ಲ, ಅನಂತವಾದ ಅಂತರವಿದೆ.

ಸ್ವಪ್ನದಲ್ಲಿರುವ ವಾಸನಾಮಯವನ್ನು ನಾವು ಜಾಗರವೆಂದು ಭ್ರಮಿಸಿ ಭೋಗಿಸುತ್ತೇವೆ. ದೇವರಿಗೆ ಈ ತೆರನಾದ ಭ್ರಮವೇ ಇಲ್ಲ.

ಇದಕ್ಕೂ ಮಿಗಿಲಾದ ತೀರ ಮಹತ್ವದ ಅಂತರವಿದೆ. ದೇವರು ವಾಸನಾಮಯ ಪದಾರ್ಥಗಳಿಂದ ಸಂತಸಪಡುವನು. ಅದರ ಜೊತೆಗೆ ಹಣ್ಣು ಹಂಪಲು, ಅನ್ನ, ಪಾಯಸ ಮುಂತಾದವುಗಳಲ್ಲಿಯ ಸ್ವಸ್ವರೂಪವನ್ನು ಸ್ವಾಖ್ಯರಸವನ್ನು ಭೋಗಿಸುವಂತೆ, ವಾಸನಾಮಯ ಪದಾರ್ಥಗಳಲ್ಲಿರುವ ಅಗಣಿತಗುಣ-ಪೂರ್ಣವಾದ ತನ್ನ ಅನಂತರೂಪಗಳನ್ನು ಭೋಗಿಸುತ್ತ ಆನಂದವನ್ನನುಭವಿಸುವ.

**ವಾಸನಾರೂಪಕಾನ್ ಭೋಜ್ಯಾನ್ ಭುಂಕ್ತೇ ತತ್ಪ್ರವಿಚಿಂತಿತಾನ್ ।**
**ಭುಂಕ್ತೇ ವಿಷ್ಣುಃ ಪೂರ್ಣಶಕ್ತಿಃ ಬಾಹ್ಯಭೋಗವಿಲಕ್ಷಣಾನ್ ॥★॥**

**ತತ್ತದಾಕಾರಸಂಯುಕ್ತಾನ್ ಸ್ವರೂಪಾನ್ ಸ್ವೀಕರೋತ್ಯಜಃ ॥★॥**

ಅಲ್ಲದೇ ಭಗವಂತನ ಭೋಗ ಸ್ವತಂತ್ರವಾದದ್ದು.

ನಮ್ಮಂತೆ ಪರತಂತ್ರವಲ್ಲ.

ಕಮಲಾ, ಕಮಲಾಸನರೂ ಆ ಭಗವಂತನ ಕರುಣೆಯ ಅಣತಿಯಂತೆ ಭೋಗ ಮಾಡುವರು.

ದೇವರ ಕರುಣೆಯು ತಪ್ಪಿದಲ್ಲಿ ಕಂಗಾಲಾಗುವದು ನಿಶ್ಚಿತ,

ದೇವರಿಗೆ ಮಾತ್ರ ಈ ಪರಿಯಿಲ್ಲ. ಆತನೊಬ್ಬನೇ ಸ್ವತಂತ್ರ.

ಅಲ್ಲದೇ, ನಮ್ಮಂತೆ ಅಪರಿಪೂರ್ಣನಾದುದರಿಂದ ಭಗವಂತ ಭೋಗಿಸುವದಿಲ್ಲ.

ಏಕೆಂದರೆ ಆತ 'ಸದಮಂದಸಾಂದ್ರಸ್ವಾನಂದತುಷ್ಟವಪುಃ' ಅನಂತ ಆನಂದರೂಪನಾದುದರಿಂದ ಆಪ್ತಕಾಮ. ಆದ್ದರಿಂದಲೇ, ಬಾಹ್ಯಭೋಗಗಳಲ್ಲಿ ವಿರಕ್ತನೆಂದು ಭಗವಂತನನ್ನು ಕರೆಯುವರು.

ಜೀವರಿಗೆ ಅವರವರ ಕರ್ಮನುಸಾರವಾಗಿ ಅಶುಭ ಭೋಗಗಳಿವೆ. ಭಗವಂತನಿಗೆ ಮಾತ್ರ ಕರ್ಮಲೇಪವೂ ಇಲ್ಲ. ಅಶುಭಭೋಗಗಳೂ ಇಲ್ಲ.

ಆ ಭಗವಂತನ ಕೃಪೆಯಿಂದಲೇ ಮುಕ್ತರು ಹಾಗೂ ನಿತ್ಯಮುಕ್ತ ಲಕ್ಷ್ಮೀ ಇವರೂ ಅಶುಭವನ್ನು ಭೋಗಿಸುವದಿಲ್ಲ.

ಈ ಎಲ್ಲ ಅನುಸಂಧಾನಗಳೊಡನೆ ನೈವೇದ್ಯವನ್ನು ಮಾಡಬೇಕು.

★★★

ಈ ನೈವೇದ್ಯವನ್ನು ಮೂಲರೂಪ ಪರಮಾತ್ಮನೊಡನೆ ಪೀಠದೇವತೆಗಳಿಗೂ ಆವರಣದೇವತೆಗಳಿಗೂ ತೋರಿಸಬೇಕು.

ಆಗಲೇ ಅನುಯಾಗವನ್ನು ಮಾಡಬೇಕು. ''ಅಮೃತಾಪಿಧಾನಮಸಿ'' ಎಂಬ ಮಂತ್ರದಿಂದ ಉತ್ತರಾಪೋಶನವನ್ನು ಕೊಡುವದು.

ಆ ನೈವೇದ್ಯವನ್ನು ವಿಷ್ವಕ್ಸೇನನಿಗೆ ಒಪ್ಪಿಸಬೇಕು.

ಪಾದುಕೆ ಕೊಟ್ಟು ಹಸ್ತಪ್ರಕ್ಷಾಲನಕ್ಕಾಗಿ ಕರೆತಂದು ಪೀಠಾಂತರದಲ್ಲಿ ಕೂಡಿಸಿ ನಾರಾಯಣಮಂತ್ರದಿಂದ ೧೨ ಬಾರಿ ಗಂಡೂಷಕ್ಕಾಗಿ ಜಲವನ್ನು ಸಮರ್ಪಿಸುವದು.

ಕರ್ಪೂರ ಕಸ್ತೂರಿಗಳಿಂದ ಕೂಡಿದ ಚಂದನದ ನೀರನ್ನು ಕೈಗೆರೆದು ಕೈತೊಳಿಸಬೇಕು. ಹಲ್ಲುಜ್ಜಲು, ಹಾಗೂ ಪಾದ ತೊಳೆಯಲು ಮತ್ತೊಮ್ಮೆ ೧೨ ಬಾರಿ ಗಂಡೂಷಕ್ಕೆ ನೀರು ಅರ್ಪಿಸಬೇಕು.

ಪುನಃ ಆಚಮನವನ್ನು ಮಾಡಿಸಿ ಕನಿಷ್ಠ ಮೂರು ಬಾರಿ ಹೂಗಳಿಂದರ್ಚಿಸಬೇಕು.

ಛತ್ರ, ಚಾಮರ, ವ್ಯಜನಗಳಿಂದ ಸಹಿತವಾಗಿ, ಗೀತ, ವಾದ್ಯ, ನೃತ್ಯಗಳಿಂದ ಸ್ವಾಗತಿಸುತ್ತ ತೂಗುಮಂಚದ ಪೀಠದಲ್ಲಿ ಕುಳ್ಳಿರಿಸಬೇಕು.

ಪ್ರಶಾಂತವಾಗಿ ಉರಿಯುವ ಸಾಲುದೀಪಗಳ, ಹಂಸ, ಕೋಕಿಲೆ, ನವಿಲು, ಮುಂತಾದ ಮಧುರ ಮನೋಹರ ಪಕ್ಷಿಗಳ ನಿನಾದದ ಮಧ್ಯದಲ್ಲಿ ರಮಾರಮಣನನ್ನು ಕೂಡಿಸಿ ತಾಂಬೂಲವನ್ನು ನೀಡಬೇಕು.

ಬಳಿಕ ಸುವರ್ಣದಕ್ಷಿಣೆಯನ್ನು ಸಮರ್ಪಿಸಬೇಕು. ತಾಂಬೂಲ ತಿಂದ ಮುಖವನ್ನು ತೊಳೆಯುವದಕ್ಕೆ ಮತ್ತೊಮ್ಮೆ ೧೨ ಬಾರಿ ಗಂಡೂಷ, ದಂತಧಾವನ ಹಾಗೂ ಆಚಮನವನ್ನು ಅರ್ಪಿಸಬೇಕು.

ಸುವರ್ಣದಕ್ಷಿಣೆಯನ್ನು ಸಮರ್ಪಿಸುವಾಗ ಈ ಮಂತ್ರಗಳನ್ನು ಹೇಳಬೇಕು.

**ಓಂ ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ ಸೇದು ಹಿರಣ್ಯವರ್ಣಃ। ಹಿರಣ್ಯಯಾತ್ ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ॥**
**(ಋ.೨-೩೫-೧೦)**

ಈ ಮಂತ್ರದ ಅರ್ಥ ಆಭರಣಗಳ ಸಮರ್ಪಣೆ ಕಾಲದಲ್ಲಿ ಬಂದಿದೆ.

**ನಾಕಸ್ಯ ಪೃಷ್ಠೇ ಅಧಿತಿಷ್ಠತಿ ಶ್ರಿತೋ ಯಃ ಪೃಣಾತಿ ಸ ಹ ದೇವೇಷು ಗಚ್ಛತಿ। ತಸ್ಮಾ ಆಪೋ ಘೃತಮರ್ಷಂತಿ ಸಿಂಧವಸ್ತಸ್ಮಾ ಇಯಂ ದಕ್ಷಿಣಾ ಪಿನ್ವತೇ ಸದಾ ॥**
**(ಋ.೧.೧೨೫.೫)**

**ಅನ್ವಯ :- ಯಃ (ವಿಷ್ಣುಂ) ಶ್ರಿತಃ ಪೃಣಾತಿ, ಸ ಹ ನಾಕಸ್ಯ ಪೃಷ್ಠೇ ಅಧಿತಿಷ್ಠತಿ, ದೇವೇಷು ಗಚ್ಛತಿ. ತಸ್ಮೈ ಸಿಂಧವಃ ಆಪಃ ಘೃತಂ ಅರ್ಷಂತಿ. ಇಯಂ ದಕ್ಷಿಣಾ ತಸ್ಮೈ ಸದಾ ಪಿನ್ವತೇ.**

''**ಯಃ (ವಿಷ್ಣುಂ) ಶ್ರಿತಃ** ಯಾರು ಭಗವಂತನನ್ನು ಆಶ್ರಯಿಸಿ, ಅವನ ಭಕ್ತನಾಗಿದ್ದು **ಪೃಣಾತಿ** ದಾನ ಕೊಡುವನೊ **ಸ ಹ ನಾಕಸ್ಯ ಪೃಷ್ಠೇ ಅಧಿತಿಷ್ಠತಿ** ಅವನು ಸ್ವರ್ಗದಲ್ಲಿ ಅಧಿಕವಾಗಿ ಆನಂದವನ್ನು ಭೋಗಿಸುತ್ತಾನೆ, **ದೇವೇಷು ಗಚ್ಛತಿ** ಇಂದ್ರಾದಿ ದೇವತೆಗಳಲ್ಲಿ ಬೆರೆಯುತ್ತಾನೆ. **ತಸ್ಮೈ** ಅಂಥವನಿಗೆ **ಸಿಂಧವಃ** ಇಷ್ಟಾರ್ಥಗಳ ಸ್ಯಂದನ ಮಾಡುವ, ಅಪೇಕ್ಷಿತವನ್ನು ಹರಿಸುವ **ಆಪಃ** ದೇವತೆಗಳು **ಘೃತಂ ಅರ್ಷಂತಿ** ಉದ್ದೀಪ್ತವಾದ ಭೋಗಗಳನ್ನು ಕೊಡುತ್ತಾರೆ. (ಹಾಲಿಗಿಂತ ಮೊಸರು, ಮೊಸರುಗಿಂತ ಬೆಣ್ಣೆ, ಬೆಣ್ಣೆಗಿಂತ ತುಪ್ಪ ಉತ್ತಮ. ಅರ್ಥಾತ್

ಅತ್ಯುತ್ತಮವಾದ ಪದಾರ್ಥವನ್ನು ದಯಪಾಲಿಸುತ್ತಾನೆ.) ಇಯಂ ದಕ್ಷಿಣಾ ಅವನು ಕೊಟ್ಟ ದಕ್ಷಿಣೆ ತದಭಿಮಾನಿನಿಯಾದ ದಕ್ಷಿಣಾನಾಮಕ ಲಕ್ಷ್ಮೀದೇವಿ ತಸ್ಮೈ ದಕ್ಷಿಣಾ ಪ್ರದಾನ ಮಾಡಿದವನಿಗೆ ಸದಾ ಪಿನ್ವತೇ ಯಾವಾಗಲೂ ಸುಖರಸವನ್ನು ಹರಿಸುತ್ತಾಳೆ.''

ಓಂ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ ।
ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥ (ಋ.೮-೬೯-೮)

ಕರ್ಮನಿರ್ಣಯಃ ಅರ್ಚನಂ ಯಜ್ಞಾದಿ । ಪ್ರಾರ್ಚನಂ ಜ್ಞಾನಧ್ಯಾನಾದಿ। 'ಶ್ರೇಯಾನ್ ದ್ರವ್ಯಮಯಾದ್ ಯಜ್ಞಾತ್ ಜ್ಞಾನಯಜ್ಞಃ ಪರಂತಪ'। ಇತಿ ಭಗವದ್ವಚನಾತ್ । ಪ್ರಿಯ ಯಜ್ಞಾ ಅರ್ಚತ, ಪ್ರಿಯಜ್ಞಾನಾಃ ಪ್ರಾರ್ಚತ, ಪುತ್ರಕಾಃ ಅಲ್ಪಜ್ಞಾ ಅಪ್ಯರ್ಚತ ।

'ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ । ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್' ಇತಿ ಚ । ಉತಶಬ್ದಾತ್ ಜ್ಞಾನಿನಾಮಪ್ಯರ್ಚನಂ ಯುಕ್ತಂ ಸ್ವಾಶ್ರಮಾನುಸಾರೇಣೇತಿ । 'ಅಧಾ ತೇ ವಿಷ್ಣೋ ವಿದುಷಾ ಚಿದರ್ಧ್ಯಃ ಸ್ತೋಮೋ ಯಜ್ಞಶ್ಚ ರಾಧ್ಯೋ ಹವಿಷ್ಮತಾ' ಇತಿ ಶ್ರುತೇಃ ।

ಕಿಂ ತದರ್ಚನೀಯಮ್ । ಧೃಷ್ಣು ಧೃಷ್ಟಂ ಪರಂ ಬ್ರಹ್ಮ ವಾಸುದೇವಾಖ್ಯಮ್ ।

ಪುರಂ ದೇಹಂ ನಾರ್ಚತ । 'ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ ವಿಧೀಯತೇ ಸಾಧು ಮಿಥಃ ಸುಮಧ್ಯಮೇ । ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನ ದೇಹಮಾನಿನೇ' ಇತಿ ಭಾಗವತೇ ।

''ಸದೇಹಮಾನಿಹರಯೇ ಪ್ರಣಮೇತ್ ಕೇವಲಾಯ ವಾ । ನ ದೇಹಾಯ ನ ತನ್ಮಾನಪರಾಯ ಚ ಕಥಂಚನ'' ಇತಿ ವ್ಯಾಸಸ್ಮೃತೌ । ಪುನರರ್ಚತೇತಿ ತಾತ್ಪರ್ಯಾರ್ಥೇ ।

ಟೀಕಾ- ಅರ್ಚತ । ಅರ್ಚನಮಿತ್ಯಾದಿನಾಽನುಪಸರ್ಗಪ್ರಕೃತ್ಯರ್ಥಾವುಕ್ತೌ । ತತ್ರ ಕುತೋ ಯಜ್ಞಾದಿತೋ ಜ್ಞಾನಾದೇಃ ಪ್ರಕರ್ಷ ಇತ್ಯತ ಆಹ ॥ ಶ್ರೇಯಾನಿತಿ ॥ ಪ್ರಿಯಮೇಧಾಸ ಇತ್ಯೇತದ್ ವ್ಯರ್ಥಮ್ । ಪ್ರಿಯೋ ಮೇಧೋ ಯಜ್ಞೋ ಯೇಷಾಮಿತಿ 'ಆಜ್ಜಸೇರಸುಕ್' । ಪ್ರಿಯಾ ಮೇಧಾ ಜ್ಞಾನಂ ಯೇಷಾಮಿತಿ ವಾ । 'ನಿತ್ಯಮಸಿಚ್ ಪ್ರಜಾಮೇಧಯೋಃ' । ದ್ವಯಮಪಿ ತಂತ್ರೇಣೋಪಾತ್ತಮಿತಿ ಭಾವೇನ ಯಥಾಯೋಗ್ಯಂ ಯೋಜಯತಿ ॥ ಪ್ರಿಯೇತಿ ॥

ನನು ಪ್ರಿಯಯಜ್ಞಾಃ ಕರ್ಮಿಣೋಽಲ್ಪಕಾಸ್ತೇಽನಾದರಣೀಯಾ ಏವ ನ ವಿಧೇಯಾ ಇತ್ಯಾಶಂಕಾನಿರಾಸಾರ್ಥತ್ವಾತ್ 'ಅರ್ಚಂತು ಪುತ್ರಕಾಃ' ಇತಿ ನ ಪುನರುಕ್ತಮಿತಿಭಾವೇನಾಹ-ಪುತ್ರಕಾಇತಿ॥ಅರ್ಚತೇತ್ಯನೇನಪುರುಷವ್ಯತ್ಯಯೋಽಯಮಿತ್ಯುಕ್ತಮ್ । ನನು ತೇಽನಾದರಣೀಯಾ ಇತ್ಯುಕ್ತಮಿತಿ ನೇತ್ಯಾಹ ॥ ನ ವೃದ್ಧೀತಿ ॥

ನನು ಪ್ರಿಯಮೇಧಾಸಃ ಪುತ್ರಕಾಃ ಅರ್ಚತ ಅರ್ಚತೇತ್ಯಾದರಾರ್ಥಾಭ್ಯಾಸತಯಾ ಕುತೋ ನ ವ್ಯಾಖ್ಯಾಯತೇ । ಏವಂ ವ್ಯಾಖ್ಯಾನೇಽಪಿ ಶಬ್ದಶ್ಚ ನಾಧ್ಯಾಹರ್ತವ್ಯ ಇತ್ಯತ ಆಹ॥ ಉತಶಬ್ದಾದಿತಿ॥ ಸಮುಚ್ಚಯಾರ್ಥಸ್ಯೋತಶಬ್ದಸ್ಯ ವಿದ್ಯಮಾನತ್ವಾತ್ ನೈಕವಾಕ್ಯತಾ । ತಸ್ಯೈವಾಪ್ಯರ್ಥತ್ವಾಚ್ಚ ನಾಧ್ಯಾಹಾರ ಇತಿ ಭಾವಃ ।

ನನು ಪ್ರಿಯಯಜ್ಞಾ ಏವ ತಾವದಲ್ಪಕಾಃ ತೇಷಾಂ ಕೈಃ ಸಹ ಸಮುಚ್ಚಯಃ । ನ ಚ ಜ್ಞಾನಿಭಿಃ । ತೇಷಾಂ ಪ್ರಾರ್ಚನಾಧಿಕಾರಿಣಾಮರ್ಚನಾಭಾವಾತ್ । ಸಮಾನವಿಷಯ ಏವ ಸಮುಚ್ಚಯ ಇತ್ಯತ ಆಹ ॥ ಜ್ಞಾನಿನಾಮಪೀತಿ ॥ ಯುಕ್ತಂ ಪ್ರಮಿತಮ್ । 'ತಸ್ಮಾತ್ ಕರ್ಮ ನ ಕುರ್ವಂತಿ ಯತಯಃ' ಇತ್ಯಾದಿವಿರೋಧಾದಿತ್ಯತ ಉಕ್ತಂ ॥ ಸ್ವಾಶ್ರಮೇತಿ ॥ ಅಸ್ವಕೀಯಕರ್ಮವಿಷಯಂ ತದಿತಿ ಭಾವಃ । ಇತಿ ಹೇತೋಃ ಸಮುಚ್ಚಯೋ ಯುಜ್ಯತ ಇತಿ ಶೇಷಃ । ಯುಕ್ತಮಿತ್ಯುಕ್ತಮುಪಪಾದಯತಿ ॥ ಅಧೇತಿ ॥ ಪರಂ ಬ್ರಹ್ಮ ಭಗವತೋಽನ್ಯದಿತಿ ಕೇಚಿತ್ ಅತ ಉಕ್ತಂ ॥ ವಾಸುದೇವಾಖ್ಯಮಿತಿ ॥ ಪುರಶಬ್ದೇನ ಕೇವಲಸ್ತದಭಿಮಾನೀ ಚೋಚ್ಯತೇ । ಧೃಷ್ಣುಶಬ್ದೇನ ನಿರ್ಭಯತ್ವ-ಸಭಯತ್ವಯುಕ್ತಿರುಕ್ತಾ । ಆಗಮಸಮ್ಮತಿಂ ಚ ಆಹ ॥ ಪ್ರತ್ಯುದ್ಗಮೇತಿ ॥ ನನ್ವೇವಮಪ್ಯರ್ಚತೇತ್ಯುಕ್ತಂ ಪದಮವಶಿಷ್ಟಮಿತ್ಯತ ಆಹ ॥ ಪುನರಿತಿ ॥

ಅನ್ವಯ :- ಪ್ರಿಯಮೇಧಸಃ ! ಅರ್ಚತ. ಪ್ರಿಯಮೇಧಾಸಃ ! ಪ್ರಾರ್ಚತ. ಪುತ್ರಕಾಃ ಅರ್ಚಂತು. ಉತ. ಧೃಷ್ಣು ಅರ್ಚತ. ಪುರಂ ನ.

''ಪ್ರಿಯಮೇಧಸಃ ಓ ಕರ್ಮ ಪ್ರೇಮಿಗಳೇ! ಅರ್ಚತ ಯಜ್ಞಗಳನ್ನು ಮಾಡಿ ಭಗವಂತನನ್ನರ್ಚಿಸಿ. ಪ್ರಿಯಮೇಧಾಸಃ ಓ ಜ್ಞಾನಪ್ರೇಮಿಗಳೇ ! ಪ್ರಾರ್ಚತ ಜ್ಞಾನಧ್ಯಾನಗಳಿಂದ ಭಗವಂತನನ್ನರ್ಚಿಸಿ.

ಪುತ್ರಕಾಃ ಅಲ್ಪಜ್ಞಾನಿಗಳಾದ ಜನರೆಲ್ಲ, ಅರ್ಚಂತು ಯಜ್ಞ-ಯಾಗಾದಿಗಳಿಂದ ಭಗವಂತನನ್ನು ಅರ್ಚಿಸಬೇಕು. ಉತ ಅಲ್ಲದೇ ಮಹಾಜ್ಞಾನಿಗಳೂ ತಮ್ಮ ತಮ್ಮ ಸನ್ಯಾಸ ಗೃಹಸ್ಥಾದಿ ಆಶ್ರಮಗಳಿಗೆ ಅನುಗುಣವಾಗಿ ಭಗವಂತನನ್ನರ್ಚಿಸಲಿ.

ಧೃಷ್ಣು-ಸಕಲರನ್ನು ಧರ್ಷಣ ಮಾಡುವ ಸಾಮರ್ಥ್ಯವುಳ್ಳ, ಎಲ್ಲರ ಧರ್ಷಣವನ್ನು ಎದುರಿಸುವ ಸರ್ವೋತ್ತಮ ಭಗವಂತನನ್ನು ಅರ್ಚತ-ಪೂಜಿಸಿರಿ. ಪುರಂ ನ ದೇಹವನ್ನು ಅಥವಾ ದೇಹಾಭಿಮಾನಿ ಜೀವನನ್ನು ಪೂಜಿಸಬೇಡಿ.''

**ಓಂ ನಿ ಷು ಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವಞ್ಚಿತ್ರಮರ್ಚ ॥** (ಋ.೧೦-೧೧೨-೯)

ಈ ಮಂತ್ರದ ಅರ್ಥ ಪ್ರಾರ್ಥನೆಯ ಕಾಲದಲ್ಲಿ ಬಂದಿದೆ.

**ಓಂ ವಯಃ ಸಪರ್ಣಾ ಉಪ ಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ । ಅಪ ಧ್ವಾಂತಮೂರ್ಣುಹಿ ಪೂರ್ಧಿ ಚಕ್ಷುರ್ಮುಮುಗ್ಧ್ಯಸ್ಮಾನ್ ನಿಧಯೇವ ಬದ್ಧಾನ್ ॥** (ಋ.೧೦-೭೩-೧೧)

**ಭಾಗವತತಾತ್ಪರ್ಯೇ** (೧೧-೪-೧೯) **ಸುಪರ್ಣಾ ಋಷಯೋ ವ್ಯಾಸಂ ನಾಥಮಾನಾ ಯಯುಃ ಸದಾ । ಭ್ರಾಂತಿಂ ನಿವಾರಯಾಸ್ಮಾಕಂ ಮುಮುಗ್ಧೀತಿ ಚ ವಾದಿನಃ ।**

**ಅನ್ವಯ :- ವಯಃ ಸುಪರ್ಣಾಃ ಪ್ರಿಯಮೇಧಾಃ ಋಷಯಃ ಇಂದ್ರಂ ನಾಧಮಾನಾಃ ಉಪಸೇದುಃ. ಧ್ವಾಂತಂ ಅಪ ಊರ್ಣುಹಿ. ಚಕ್ಷುಃ ಪೂರ್ಧಿ. ನಿಧಯಾ ಇವ ಬದ್ಧಾನ್ ಅಸ್ಮಾನ್ ಮುಮುಗ್ಧಿ.**

''**ವಯಃ** ಉತ್ತಮರಾದ, ವಿಲಕ್ಷಣರಾದ, ನಾನಾ ಯೋಗ್ಯತೆಯ **ಸುಪರ್ಣಾಃ** ಉತ್ತಮ ಸಿದ್ಧಾಂತಗಳುಳ್ಳ ಆನಂದಮಯ ಭಗವಂತನ ಭಕ್ತರಾದ **ಪ್ರಿಯಮೇಧಾಃ** ಜ್ಞಾನಮಯ ಭಗವಾನ್ ವೇದವ್ಯಾಸದೇವರನ್ನು ಪ್ರೀತಿಸುವ, ಜ್ಞಾನಮಯ ವೇದವ್ಯಾಸರಿಗೆ ಪ್ರಿಯರಾದ, ಭಗವಂತನ ಜ್ಞಾನವನ್ನೇ ಪ್ರೀತಿಸುವ, ಭಗವಂತನ ಜ್ಞಾನಕ್ಕಾಗಿಯೇ ಎಲ್ಲವನ್ನೂ ಸ್ವೀಕರಿಸುವ **ಋಷಯಃ** ಸ್ವಯಂ ಮಹಾಜ್ಞಾನ ಯೋಗ್ಯರಾದ ಋಷಿಗಳು, **ಇಂದ್ರಂ** ಸರ್ವಸ್ವಾಮಿಯಾದ ವೇದವ್ಯಾಸದೇವರನ್ನು, **ನಾಥಮಾನಾಃ** ಪರಿ ಪರಿಯಿಂದ ಯಾಚಿಸುತ್ತ, **ಉಪಸೇದುಃ** ಸಮೀಪಿಸಿದರು, ಮೊರೆ ಹೊಕ್ಕರು.''

ಮೊರೆ ಹೋದ ಮಾತು ಇದು-

''**ಧ್ವಾಂತಂ ಅಪ ಊರ್ಣುಹಿ** ಓ ಸ್ವಾಮಿ, ನಮ್ಮನ್ನು ಕವಿದ ಕತ್ತಲನ್ನು ಕಳೆ.

ಚಕ್ಷುಃ ಪೂರ್ಧಿ ನಮ್ಮ ಕಣ್ಣು ತುಂಬು, ನಮ್ಮ ಮನಗಣ್ಣು ಜ್ಞಾನಸುರಿದು ತುಂಬು. ನಿಧಯಾ ಇವ ಬದ್ಧಾನ್ ಹಗ್ಗದಿಂದ ಕಟ್ಟಿದಂತೆ ಸಂಸಾರದ ಸಂಕೊಲೆಯಿಂದ ಬದ್ಧರಾದ, ಅಸ್ಮಾನ್ ಮುಮುಗ್ಧಿ ನಮ್ಮನ್ನು ಮುಕ್ತರಾಗಿಸು.''

ಓಂ ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ । ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ ॥ (ಋ.೯-೯೪-೪)

ಅನ್ವಯ :- ಶ್ರಿಯಂ ವಸಾನಾಃ ಅಮೃತತ್ವಮಾಯನ್.ಮಿತದ್ರೌ ಸಮಿಥಾ ಸತ್ಯಾ.

ನ್ಯಾಯದೀಪಿಕಾ - ಯಃ ಪುರುಷಃ ಶ್ರೀಸಮಾರಾಧನಾರ್ಥಂ ಜಾತೋಽಸೌ ತದರ್ಥಮೇವ ಗೃಹಾನ್ನಿರ್ಗತೋ ಭವತಿ । ಸ ಶ್ರಿಯಂ ಉಪದೇಷ್ಟೃಭ್ಯೋ ಗುರುಭ್ಯ ಏವ ಸ್ವಸ್ಯ ವಯೋ ಧತ್ತೇ । ಏವಂ ಶ್ರಿಯಮುಪಾಸೀನಾಃ ಪುರುಷಾ ಅಮೃತತ್ವಂ ಯಾಂತಿ । ತಸ್ಮಿನ್ ಗುರುಶಿಷ್ಯಾಖ್ಯೇ ಮಿಥುನೇ ಸಮೀಹಿತಾನಿ ಸತ್ಯಾನಿ ಭವಂತೀತ್ಯರ್ಥಃ ।

ಪ್ರಮೇಯದೀಪಿಕಾ - ಶ್ರಿಯಂ ಪ್ರತಿ ವಸಾನಾ ವಸಂತಃ ತಾಮಾಚ್ಛಾದ್ಯ ಸ್ಥಿತಾ ವಾ ಉಪಾಸೀನಾ ಇತಿ ಯಾವತ್ । ತೇಷಾಂ ಸಮಿಥಾ ಸಮೀಹಿತಾನಿ ಸತ್ಯಾನಿ ಭವಂತಿ । ಮಿತದ್ರೌ ಸಮುದ್ರೇ ಕ್ಷೀರಾಬ್ಧೌ ।

ಈ ಪ್ರಸಂಗದಲ್ಲಿಯ ಈ ಮಂತ್ರಕ್ಕೆ ಹೀಗೆ ಅರ್ಥವನ್ನು ಹೇಳಬೇಕೆಂದು ತೋರುತ್ತದೆ.

''ಶ್ರೀ ಎನ್ನುವದಕ್ಕೆ ಭಗವಂತನ ಸ್ವರೂಪಭೂತವಾದ ಕಾಂತಿ ಎಂದು ಪರಮ ಮುಖ್ಯವಾದ ಅರ್ಥ. ಭಗವಂತನ ಕಾಂತಿಯನ್ನು ಆರಾಧಿಸುವದಕ್ಕೆ ಹುಟ್ಟಿದ ಮನುಷ್ಯನು ಆ ಭಗವಂತನ ಕಾಂತಿಯನ್ನು ಕಾಣುವದಕ್ಕೆಂದೇ ಧ್ಯಾನತಪಸ್ಸುಗಳನ್ನು ಮಾಡಲೋಸುಗ ಮನೆ ಬಿಟ್ಟು ಅಡವಿಯನ್ನು ಸೇರಿದ. ಆ ಭಗವಂತನ ರೂಪ, ಲಾವಣ್ಯ, ಮಹಿಮೆಗಳನ್ನು ಉಪದೇಶಿಸುವ ಗುರುಗಳಿಗಾಗಿ (ಗುರುಗಳು ಮಾಡುವ ದೇವರ ಮಹಿಮೆಯನ್ನು ಉಪದೇಶಿಸುವದಕ್ಕಾಗಿ ಇಡಿಯ ಜೀವನವನ್ನು ತೆತ್ತ.

ಶ್ರಿಯಂ ಹೀಗೆ ದೇವರ ರೂಪ, ಕಾಂತಿ, ಸೌಂದರ್ಯಗಳನ್ನು ವಸಾನಾಃ ಉಪಾಸನೆ ಮಾಡುವ ಭಕ್ತರು ಅಮೃತತ್ವಮಾಯನ್ ಮುಕ್ತಿಯನ್ನು ಪಡೆದರು.

ಹೀಗೆ ಮಿತದ್ರೌ ಗುರುಶಿಷ್ಯರ ಮಿಥುನದಲ್ಲಿ ಸಮಿಥಾ ಅವರು ಬಯಸಿದ್ದೆಲ್ಲ ಸತ್ಯಾ ಸತ್ಯವಾಗುವದು. ''

ಶ್ರಿಯ ಏವೈನಂ ತಚ್ಛ್ರಿಯಮಾದಧಾತಿ ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ||

ಅನ್ವಯ :- ಶ್ರಿಯಃ ಏನಂ (ಏನಾಂ) ತಚ್ಛ್ರಿಯಂ ಅದಧಾತಿ. ಸಂತತ್ಯೈ ಸಂತತಂ ಋಚಾ ವಷಟ್‌ಕೃತ್ಯಂ. ಯ ಏವಂ ವೇದ ಪ್ರಜಯಾ ಪಶುಭಿಃ ಸಂಧೀಯತೇ.

''ದೇವರು ಶ್ರಿಯಃ ತನ್ನ ಮೈ ಕಾಂತಿಯಿಂದ ಏನಂ (ಏನಾಂ) ತಚ್ಛ್ರಿಯಂ ಸಿರಿಯನ್ನು ಅದಧಾತಿ ಪೋಷಿಸುವನು. (ಲಕ್ಷ್ಮೀಯಿಂದಲೇ ಸಂಪತ್ತಿಯನ್ನು ಪಡೆಯುವದು.) ಆದುದರಿಂದ ಸಂತತ್ಯೈ ಸಂತತ ಸಂಪತ್ತಿಗಾಗಿ ಸಂತತಂ-ಯಾವಾಗಲೂ ಋಚಾ ಮಂತ್ರಗಳಿಂದ ವಷಟ್‌ಕೃತ್ಯಂ ಸ್ತುತಿಸಬೇಕು. ಯ ಏವಂ ವೇದ ಈ ತತ್ವವನ್ನು ತಿಳಿದವ ಪ್ರಜಯಾ ಪಶುಭಿಃ ಸಂಧೀಯತೇ ಜ್ಞಾನವಂತ ವೇದಸಂಪನ್ನನಾಗುವನು. ಮಕ್ಕಳು, ಪಶು, ಸಂಪತ್ತುಗಳು ಸಮೃದ್ಧವಾಗಿ ಆಗುವವು.''

ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ |
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ||★||

ಓಂ ಧ್ರುವಾ ದ್ಯೌಃ ಧ್ರುವಾ ಪೃಥಿವೀ ಧ್ರುವಾಸಃ ಪರ್ವತಾ ಇಮೇ|
ಧ್ರುವಂ ವಿಶ್ವಮಿದಂ ಜಗದ್ ಧ್ರುವೋ ರಾಜಾ ವಿಶಾಮಯಮ್ ||★||

ಅನ್ವಯ :- ದ್ಯೌಃ ಧ್ರುವಾ, ಪೃಥಿವೀ ಧ್ರುವಾ, ಇಮೇ ಪರ್ವತಾಃ ಧ್ರುವಾಃ ವಿಶ್ವಂ ಇದಂ ಜಗತ್ ಧ್ರುವಂ ವಿಶಾಂ ಅಯಂ ರಾಜಾ ಧ್ರುವಃ.

''ದ್ಯೌಃ ಧ್ರುವಾ, ಪೃಥಿವೀ ಧ್ರುವಾ, ಇಮೇ ಪರ್ವತಾಃ ಧ್ರುವಾಃ ವಿಶ್ವಂ ಇದಂ ಜಗತ್ ಧ್ರುವಂ ವಿಶಾಂ ಅಯಂ ರಾಜಾ ಧ್ರುವಃ- ನೀನು ಸೃಷ್ಟಿ ಮಾಡಿದ ಮತ್ತು ನಿಯಮಿಸುವ ದ್ಯುಲೋಕ, ಪೃಥಿವೀ ಹಾಗೂ ಪರ್ವತಗಳು ಮತ್ತು ಅಲ್ಲಿಯ ದೇವಾದಿಗಳು ಹಾಗೂ ಮಾನವಾದಿಗಳು, ಪ್ರಾಣಿಗಳು ಅಷ್ಟೇ ಏಕೆ ಇಡಿಯ ಈ ಜಗತ್ತು ಎಲ್ಲವೂ ಸ್ಥಿರವಾಗಿವೆ. ಅಂದರೆ- ದೇವರ ಸೃಷ್ಟಿ ಮಾಡುವ

ಸಾಮರ್ಥ್ಯ ಸತ್ಯ. ಐಂದ್ರಜಾಲಿಕವಲ್ಲ. ಅಲ್ಲದೇ ಭಗವಂತನ ನಿಮಯನ ಮಾಡುವ ಸಾಮರ್ಥ್ಯ ಅನಂತ ಶಾಶ್ವತ. ಅಂತೆಯೇ ಸಂಸಾರದಲ್ಲೂ ಸೃಷ್ಟಿಗಿಂತ ಪೂರ್ವದಲ್ಲೂ ಅವರವರ ಮೋಕ್ಷ, ತಮಸ್ಸು ಮುಂತಾದ ಗತಿಯನ್ನು ಹೊಂದಿದಮೇಲೂ ಎಲ್ಲ ಜೀವರಾಶಿಗಳಿಗೆ ಭಗವಂತನ ನಿಯಾಮಕತ್ವವು ಒಡೆತನವು ಸ್ಥಿರವಾಗಿದೆ.''

**ಓಂ ಧ್ರುವಂ ತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ ।**
**ಧ್ರುವಂ ತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಮ್ ॥★॥**

(ರಾಜನಿಗೆ ಪಟ್ಟಾಭಿಷೇಕ ಮಾಡಿದ ನಂತರ ಈ ಮಂತ್ರದಿಂದ ಆಶೀರ್ವಾದ.)

**ಅನ್ವಯ:- ಹೇ ರಾಜಾ! ತೇ ರಾಜಾ ವರುಣಃ ತೇ ರಾಷ್ಟ್ರಂ ಧ್ರುವಂ (ಧಾರಯತು). ತೇ ರಾಜಾ ಇಂದ್ರಶ್ಚ ಧ್ರುವಂ ಅಗ್ನಿಶ್ಚ ಧ್ರುವಂ ತೇ ರಾಷ್ಟ್ರಂ ಧಾರಯತಾಮ್ ।**

''ಹೇ ರಾಜನೇ **ತೇ ರಾಜಾ** ನೀನು ಹೆಸರಿಗೆ ರಾಜ. ವಾಸ್ತವಿಕವಾಗಿ ನಿನಗೂ ರಾಜನಾದ **ವರುಣಃ** ವರುಣದೇವರೇ **ತೇ ರಾಷ್ಟ್ರಂ ಧ್ರುವಂ** (ಧಾರಯತು) ನಿನ್ನ ರಾಷ್ಟ್ರವನ್ನು ಶಾಶ್ವತವಾಗಿ ಧಾರಣೆ ಮಾಡಲಿ. **ದೇವಃ ಬೃಹಸ್ಪತಿಃ** ಬೃಹಸ್ಪತಿ ದೇವತೆಯು **ತೇ ರಾಷ್ಟ್ರಂ ಧ್ರುವಂ** (ಧಾರಯತು) ನಿನ್ನ ರಾಷ್ಟ್ರವನ್ನು ಶಾಶ್ವತವಾಗಿ ಧಾರಣೆ ಮಾಡಲಿ. **ತೇ ರಾಜಾ** ನಿನ್ನ ಒಡೆಯರಾದ **ಇಂದ್ರಶ್ಚ ಧ್ರುವಂ ಅಗ್ನಿಶ್ಚ ಧ್ರುವಂ ತೇ ರಾಷ್ಟ್ರಂ ಧಾರಯತಾಂ** ಇಂದ್ರನೂ, ಅಗ್ನಿಯೂ ನಿನ್ನ ರಾಷ್ಟ್ರವನ್ನು ಶಾಶ್ವತವಾಗಿ ಧಾರಣೆ ಮಾಡಲಿ.''

(ಪ್ರತಿಮೆಯ ಪಾದದಲ್ಲಿ ಮೂರುಬಾರಿ, ಮಧ್ಯದಲ್ಲಿ ಮೂರುಬಾರಿ, ಮುಖದಲ್ಲಿ ಮೂರುಬಾರಿ, ಸರ್ವಾಂಗಗಳಲ್ಲಿ ಮೂರುಬಾರಿ ಹೀಗೆ ಘಂಟಾನಾದಪುರಃಸರವಾಗಿ ಮಂಗಲನೀರಾಜನವನ್ನು ಮಾಡಬೇಕು.)

ಓಂ ನಮೋ ನಾರಾಯಣಾಯ ಮಂಗಳಮಹಾನೀರಾಜನಂ ಸಮರ್ಪಯಾಮಿ.

## ಮಂತ್ರಪುಷ್ಪಮ್

**ಓಂ ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ। ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥ (ಋ.೧೦.೮೨.೩) ಸ್ವಸ್ತಿ ॥**

**ಅನ್ವಯ :- ಯಃ ನಃ ಪಿತಾ ಜನಿತಾ ಯಃ ನಃ ವಿಧಾತಾ ವಿಶ್ವಾ ಭುವನಾನಿ ವೇದ ಯಃ ಏಕ ಏವ ದೇವಾನಾಂ ನಾಮಧಾಃ ತಂ ಸಂಪ್ರಶ್ನಂ ಅನ್ಯಾ ಭುವನಾ ಯಂತಿ ॥**

''**ಯಃ ನಃ ಪಿತಾ ಜನಿತಾ** ಯಾರು ನಮ್ಮೆಲ್ಲರ ತಂದೆಯೋ, ಕೇವಲ ಸಾಕುತಂದೆಯಲ್ಲ ಜನಕ ತಂದೆಯೋ, **ಯಃ ನಃ ವಿಧಾತಾ** ಯಾರು ನಮ್ಮೆಲ್ಲರ ವಿಧ ವಿಧವಾಗಿ ಧಾರಣ, ಪೋಷಣಗಳನ್ನು ಮಾಡುವವನೋ, **ವಿಶ್ವಾ ಭುವನಾನಿ ವೇದ** ಹದಿನಾಲ್ಕು ಲೋಕಗಳನ್ನು ಅಥವಾ ಅನಾದಿ ಅನಂತ ಕಾಲದ ಅನಂತ ಬ್ರಹ್ಮಾಂಡಗಳನ್ನು ತಿಳಿದಿರುವನೋ, **ಯಃ ಏಕ ಏವ** ಯಾವ ಒಬ್ಬನೇ ಒಬ್ಬ **ದೇವಾನಾಂ ನಾಮಧಾಃ** ಎಲ್ಲ ದೇವತೆಗಳ ನಾಮಗಳಿಂದ ವಾಚ್ಯನೋ (ಉಳಿದೆಲ್ಲ ದೇವತೆಗಳಲ್ಲಿ ಆಯಾ ನಾಮಗಳ ಪ್ರವೃತ್ತಿನಿಮಿತ್ತಧರ್ಮಗಳನ್ನು ಪೋಷಿಸುವವನೋ) **ತಂ ಸಂಪ್ರಶ್ನಂ** ಅಂಥ ಯಾರ ವಿಷಯದಲ್ಲಿ ಪ್ರಶ್ನೆ ಮಾಡುವುದು (ಉತ್ತರ ತಿಳಿಯುವದು) ಸಮೀಚೀನವೋ, ಅಂಥ ದೇವರನ್ನು **ಅನ್ಯಾ ಭುವನಾ ಯಂತಿ** ಎಲ್ಲ ಲೋಕಗಳು ಹಾಗೂ ಲೋಕಾಭಿಮಾನಿ ದೇವತೆಗಳೂ, ಬ್ರಹ್ಮಾಂಡಗಳು ಆಶ್ರಯವನ್ನು ಪಡೆಯುತ್ತವೆ.''

**ಓಂ ಸಂಸೃಷ್ಟಂ ಧನಮುಭಯಂ ಸಮಾಕೃತಮಸ್ಮಭ್ಯಂ ದತ್ತಾಂ ವರುಣಶ್ಚ ಮನ್ಯುಃ । ಭಿಯಂ ದಧಾನಾ ಹೃದಯೇಷು ಶತ್ರವಃ ಪರಾಜಿತಾಸೋ ಅಪನಿಲಯಂತಾಮ್॥**
**(ಋ.೧೦.೮೪.೭)**

**ಅನ್ವಯ :- ವರುಣಃ ಮನ್ಯುಶ್ಚ ಅಸ್ಮಭ್ಯಂ ಸಂಸೃಷ್ಟಂ ಸಮಾಕೃತಂ ಉಭಯಂ ಧನಂ ದತ್ತಾಮ್ । ಶತ್ರವಃ ಹೃದಯೇಷು ಭಿಯಂ ದಧಾನಾಃ ಪರಾಜಿತಾಸಃ ಅಪನಿಲಯಂತಾಮ್ ॥**

''**ವರುಣಃ** ಕತ್ತಲೆಯಿಂದ ಹಾಗೂ ಅಜ್ಞಾನದಿಂದ ಆವರಿಸುವ, ವರ-ಉತ್ತಮರನ್ನು ಉನ ಮೇಲೆ ಮೋಕ್ಷಕ್ಕೆ ಒಯ್ಯುವ, ವರ ಉತ್ತಮ ಣ ಆನಂದವುಳ್ಳ, **ಮನ್ಯುಶ್ಚ** ಜ್ಞಾನರೂಪನಾದ, ಭಕ್ತರನ್ನು ಜ್ಞಾನದಿಂದ (ಯು ಮಿಶ್ರಣೇ) ಸಹಿತರನ್ನಾಗಿ ಮಾಡುವ, ದುರ್ಜನರನ್ನು ಜ್ಞಾನದಿಂದ (ಯು ಅಮಿಶ್ರಣೇ ಚ) ರಹಿತರನ್ನಾಗಿ ಮಾಡುವ, ಚಿನ್ಮಯ ಕ್ರೋಧರೂಪನಾದ, ಭಗವಂತನು **ಅಸ್ಮಭ್ಯಂ** ನಮಗೆ **ಸಂಸೃಷ್ಟಂ** ಪರಸ್ಪರವಾಗಿ (ವಿರುದ್ಧವಾಗದೆ) ಜೊತೆಗೂಡಿ ಇರುವ **ಸಮಾಕೃತಂ** ನ್ಯಾಯಮಾರ್ಗದಿಂದ ಲಭ್ಯವಾದ **ಉಭಯಂ ಧನಂ** ಐಹಿಕ,ಆಮುಷ್ಮಿಕ, ಜ್ಞಾನ ಸುವರ್ಣಾದಿರೂಪ, ಜ್ಞಾನ-ಯಶೋರೂಪ ಎರಡೂ ವಿಧವಾದ ಧನವನ್ನು **ದತ್ತಾಂ** ಕೊಡಲಿ. **ಶತ್ರವಃ** ಅಜ್ಞಾನ, ಮಿಥ್ಯಾಜ್ಞಾನ,

ಕಾಮಾದಿ, ಪಾಪಾದಿ, ಹಿತೈಷಿಗಳಂತೆ ತೋರುವ, ಬಂಧುಗಳಾಗಿ ಬಂದ, ಎಲ್ಲ ಶತ್ರುಗಳು ಹೃದಯೇಷು ಭಿಯಂ ದಧಾನಾಃ ಹೃದಯದಲ್ಲಿ ಭೀತಿಯನ್ನೇ ಹೊತ್ತು ಪರಾಜಿತಾಸಃ ದೇವರ, ವಾಯುದೇವರ, ದೇವತೆಗಳ, ಗುರುಗಳ ಶಕ್ತಿ, ಕರುಣೆಗಳಿಂದ ಹಾಗೂ ಅದರಿಂದ ಉಂಟಾದ ಯಥಾರ್ಥಜ್ಞಾನ, ವೈರಾಗ್ಯ, ಕ್ಷಮಾ, ವಿನಯ, ಪುಣ್ಯ, ಸಜ್ಜನರ ಸಹವಾಸ ಮುಂತಾದವುಗಳಿಂದ ಸೋಲನ್ನಪ್ಪಿ ಅಪನಿಲಯಂತಾಮ್ ಅಪ ನಮ್ಮಿಂದ ದೂರರಾಗಿ ನಿ ಎಂದಿಗೂ ಮರಳಿ ಬಾರದಂತೆ ಲಯಂತಾಂ ನಾಶಗೊಳ್ಳಲಿ.''

ಓಂ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ । ಯಜಾಮ ದೇವಾನ್ ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ॥ (ಋ.೧-೨೭-೧೩)

ಋಗ್ಭಾಷ್ಯಂ- ನಾರಾಯಣಬ್ರಹ್ಮಪುರಃಸರಾಸ್ತು ದೇವಾಃ ಮಹಾಂತಃ ಶಿಶವಃ ಸ್ಕಂದಪೂರ್ವಾಃ । ವಟುಸ್ವರೂಪಾಶ್ಚ ತ ಏವ ಕುತ್ರಚಿದ್ ಯುವಾನ ಇಂದ್ರಾದಯ ಏತ ಏವ ಚ ॥ ಮಹತ್ವಮೇಷಾಂ ಗುಣತೋಽಪಿ ಯೂನಾಂ ಇಂದ್ರಾದಯೋ ಮಧ್ಯಗುಣಾ ಯುವಾನಃ । ಆಪೇಕ್ಷಿಕಾಲ್ಪೈಲಶ್ಚ ಗುಣೈಸ್ತದೀಯೈಃ ಸಮೀರಿತಾ ಆಶಿನಾ ಅರ್ಭಕಾಶ್ಚ ॥ ಕೃತಂ ನಮಃ ಶಕ್ತಿಮಂತೋ ಯಜಾಮ ನ ಜ್ಯಾಯಸಾಂ ಸ್ತುತಿಮಾತ್ರಂ ಲುಪಾಮಃ ॥ ಏಕಸ್ಯ ವಿಷ್ಣೋರಪಿ ರೂಪಭೇದಾಃ ಅಣೀಯಾಂಸಃ ಸಂತ್ಯಥವಾ ಮಹಾಂತಃ । ಯುವತ್ವಸಾಮ್ಯೇಽಪಿ ಮಹತ್ವಭೇದಾತ್ ಯುವಾ ಮಹಾನಿತ್ಯಪಿ ಭೇದ ಉಕ್ತಃ ॥

ಟೀಕಾ- ಅತ್ರ ಮಹದಾದಿಶಬ್ದನಿರ್ದಿಷ್ಟಾನ್ ದೇವಾನಾಹ ॥ ನಾರಾಯಣೇತಿ ।। ವಟುಸ್ವರೂಪಾಶ್ಚ ಇತ್ಯನೇನ ಆಶಿನಶಬ್ದೋ ವಟುವಾಚೀತ್ಯುಕ್ತಮ್ । 'ನಮ ಆವಟುಭ್ಯ' ಇತಿ ಪುರಾಣಸಮಾಖ್ಯಾನಾತ್ । ಏತ ಏವ ಅರ್ಭಕತ್ವಾದಿನ್ಯೈವೋಕ್ತಾ ಏವ । ಸ್ಕಂದಪೂರ್ವಾ ಇತ್ಯುಕ್ತಾನೇವ ಇಂದ್ರಾದಯ ಇತಿ ಪರಾಮೃಶತಿ । ಕಥಮೇಕತ್ಯೈವ ತ್ರಿಪ್ರಕಾರತ್ವಮಿತ್ಯತ ಉಕ್ತಮ್ । ಕುತ್ರಚಿದ್ರೂಪವಿಶೇಷೇ ।

ಏತದುಕ್ತಂ ಭವತಿ । ನಾರಾಯಣಾದಯ ಇಂದ್ರಾಂತಾ ಅವಾಂತರಪಿತ್ರಾದಿ-ಸಂಬಂಧಪ್ರಸಿದ್ಧಿಶೂನ್ಯಾ ಮಹಾಂತಃ । ಶಿವಾದಿಪಿತ್ರಾದಿಸಂಬಂಧವತ್ವೇನ ಪ್ರಸಿದ್ಧಾಃ ಸ್ಕಂದೇಂದ್ರಾದಯೋಽರ್ಭಕಾಃ । ತ ಏವ ರೂಪವಿಶೇಷೇ ಯುವಾನ ಆಶಿನಾಶ್ಚೇತಿ । ಏತೇನ ನಾರಾಯಣಾದೀನಾಂ ಸರ್ವೇಷಾಮಪಿ ದೇವಾನಾಂ ನಿರ್ಜರತ್ವಾತ್ ಕಥಂ

ಮಹತ್ವಮಿತ್ಯಾಶಂಕಾಽಪಾಸ್ತಾ ಭವತಿ । ಯುವತ್ವೇಽಪಿ ಪ್ರಕಾರಭೇದೇನ ಮಹತ್ವಾದ್ಯುಕ್ತೇಃ ।

ಪ್ರಕಾರಾಂತರೇಣ ಯೂನಾಮಪಿ ನಾರಾಯಣಾದೀನಾಂ ಮಹತ್ವಂ ವ್ಯಾಖ್ಯಾತಿ ॥ ಮಹತ್ವಮಿತಿ॥ ಯೂನಾಮಪ್ಯೇಷಾಂ ಮಹತ್ವಂ ಯುಜ್ಯತೇ ಯತೋ ಗುಣತೋ ಮಹತ್ವಮುಚ್ಯತೇ ನ ಜರಸಾ ಇತ್ಯರ್ಥಃ । ತರ್ಹಿ ವಯಃಪ್ರಕರಣವಿರೋಧಃ ಸ್ಯಾದಿತ್ಯತೋ ಯುವತ್ವಾದಿಕಮಪಿ ಗುಣತ ಏವೇತ್ಯಾಹ ॥ ಇಂದ್ರಾದಯ ಇತಿ ॥ ತ ಏವ ತದೀಯೈಃ ಸ್ವೈಃ ಸ್ವೈರಾಪೇಕ್ಷಿಕಾಲ್ಪೈಃ ಗುಣೈಃ ಆಶಿನಾ ಅರ್ಭಕಾಶ್ಚ ಸಮೀರಿತಾಃ। ನಾರಾಯಣಾದಿವದನಂತಗುಣತ್ವಸ್ಯ ಅಸ್ಮದಾದಿವತ್ ಅತ್ಯಲ್ಪಗುಣತ್ವಸ್ಯ ಚ ಅಭಾವಾತ್ ಮಧ್ಯಗುಣತ್ವಾತ್ ಯುವಾನ ಏವ ಇಂದ್ರಾದಯೋ ಬ್ರಹಾದೀನ್ ಮಧ್ಯಮಗುಣಾನ್ ಯೂನೋಪೇಕ್ಷಯಾ ಅಲ್ಪಗುಣತ್ವಾತ್ । ಅಸ್ಮದಾದಿಭ್ಯೋಽತ್ಯಲ್ಪಗುಣೇಭ್ಯೋಽಧಿಕಗುಣತ್ವಾದಾಶಿನಾಃ। ನಾರಾಯಣಾದಿಭ್ಯೋಽಲ್ಪಗುಣತ್ವಾತ್ ಅರ್ಭಕಾ ಇತಿ ।

ಏವಂ ಮಹದಾದಿಪದಾರ್ಥಾನ್ ಉಕ್ತ್ವಾ ಪೂರ್ವಾರ್ಧವಾಕ್ಯಾರ್ಥಮಾಹ ॥ ಕೃತಮಿತಿ॥ ಮಹದಾದಿಭ್ಯೋ ದೇವೇಭ್ಯೋ ನಮಃ ಅಸ್ಮಾಭಿರ್ನಮಸ್ಕೃತಮ್ । ಉತ್ತರಾರ್ಧಂ ವ್ಯಾಖ್ಯಾತಿ ॥ ಶಕ್ತಿಮಂತ ಇತಿ ॥ ದೇವೈರ್ಯೂಪಾನ್ ಮೋಚಿತಾ ವಯಂ ಯದಿ ಶಕ್ನವಾಮ ಯಜನೇ ಶಕ್ತಮಂತೋ ಭವಾಮ ತರ್ಹಿ ದೇವಾನ್ ಯಜಾಮ । ಶಕ್ತ್ಯಭಾವೇಽಪಿ ಜ್ಯಾಯಸೋ ಜ್ಯಾಯಸಂ ದೇವಾನಾಮ್ । ಶಂಸಂ ಶಂಸನಮಾತ್ರಂ ಮಾಽವೃಕ್ಷಿ । 'ವ್ರಶ್ಚೀ ಛೇದನೇ' ಇತ್ಯಸ್ಯೇದಂ ರೂಪಮ್ । ನ ಲುಪಾಮಃ । ನ ಲುಪ್ತಂ ಕರಿಷ್ಯಾಮೋ ಹೇ ದೇವಾ ಇತಿ ।

ಅಸ್ತ್ವೇವಂ ಮಹತ್ವಾದಿವ್ಯಾಖ್ಯಾನಂ ಯದಾ ಸಮಸ್ತಾ ದೇವಾ ವಿವಕ್ಷಿತಾಃ ಸ್ಯುಃ । ಯದಾ ತು ವಿಷ್ಣುರೇಕ ಏವ ವಿವಕ್ಷಿತಸ್ತದಾ ಕಥಮಿತ್ಯತ ಆಹ ॥ ಏಕಸ್ಯೇತಿ ॥ ರೂಪಭೇದಾಃ ರೂಪವಿಶೇಷಾಃ । ವಾಶಬ್ದಾತ್ ಮಧ್ಯಮಪ್ರಕಾರದ್ವಯೋಪೇತಾಃ । ತತಃ ಕಿಮಿತ್ಯತ ಆಹ ॥ ಯುವತ್ವೇನೇತಿ ॥ ಮಹತ್ವಭೇದಾತ್ । ಅಪಿಶಬ್ದೇನ ಅರ್ಭಕಾಶಿನಯೋಃ ಸಮುಚ್ಚಯಃ ।

ಅನ್ವಯ :- ಮಹದ್ಭ್ಯಃ ಯುವಭ್ಯಃ ಆಶಿನೇಭ್ಯಃ ಅರ್ಭಕೇಭ್ಯಃ ನಮಃ. ಯದಿ ಶಕ್ನವಾಮ ದೇವಾನ್ ಯಜಾಮ. ಯದಿ ನ ಶಕ್ನವಾಮ ಜ್ಯಾಯಸಃ ಶಂಸಂ ಮಾ ಅವೃಕ್ಷಿ.

''ಮಹದ್ಭ್ಯಃ ಗುಣಗಳಿಂದ ಉತ್ತಮರಾದ ನಾರಾಯಣ, ಬ್ರಹ್ಮ, ರುದ್ರ ಮುಂತಾದ ದೇವತೆಗಳಿಗೆ ಯುವಭ್ಯಃ ಗುಣಗಳಿಂದ ಮಧ್ಯಮರಾದ ಇಂದ್ರಾದಿ ದೇವತೆಗಳಿಗೆ ಆಶಿನೇಭ್ಯಃ ಗುಣಗಳಿಂದ ವಟುಗಳಂತಿರುವವರಿಗೆ ಅರ್ಭಕೇಭ್ಯಃ ದೇವರ ದೃಷ್ಟಿಯಲ್ಲಿ ಗುಣಗಳಿಂದ ಚಿಕ್ಕವರಾದ ದೇವತೆಗಳಿಗೆ ನಮಃ ನನ್ನ ನಮನ.

ಅಥವಾ, ನಾರಾಯಣನ ಮಹಾ, ಯುವ, ವಟು ಹಾಗೂ ಬಾಲ ರೂಪಗಳಿಗೆ ನನ್ನ ಪ್ರಣಾಮಗಳು.

ಯದಿ ಶಕ್ನವಾಮ ನಮಗೆ ಸಾಧ್ಯವಿದ್ದರೇ ದೇವಾನ್ ಯಜಾಮ ದೇವತೆಗಳನ್ನು ಕುರಿತು ಯಜ್ಞ ಮಾಡೋಣ. ಸಾಧ್ಯವಿಲ್ಲದಿದ್ದರೇ ಜ್ಯಾಯಸಃ ನಮಗಿಂತಲೂ ತುಂಬ ಉತ್ತಮರಾದ ದೇವತೆಗಳ ಶಂಸಂ ಸ್ತುತಿಯನ್ನಾದರೂ ಕೊನೆಯ ಪಕ್ಷ ಮಾ ಅವೃಕ್ಷಿ ತಪ್ಪಿಸುವುದು ಬೇಡ.''

ಓಂ[೨೯]ಮಮತ್ತು ನಃ ಪರಿಜ್ಮಾ ವಸರ್ಹಾ ಮಮತ್ತು ವಾತೋ ಅಪಾಂ ವೃಷಣ್ವಾನ್।
ಶಿಶೀತಮಿಂದ್ರಾಪರ್ವತಾ ಯುವಂ ನಸ್ತನ್ನೋ ವಿಶ್ವೇ ವರಿವಸ್ಯಂತು ದೇವಾಃ ॥
(ಋ.೧-೧೨೨-೩)

ಅನ್ವಯ :- ವಸರ್ಹಾ ಪರಿಜ್ಮಾ ನಃ ಮಮತ್ತು. ಅಪಾಂ ವೃಷಣ್ವಾನ್ ವಾತಃ ಮಮತ್ತು. ಇಂದ್ರಾ ಪರ್ವತಾ ಯುವಂ ನಃ ಶಿಶೀತಂ. ವಿಶ್ವೇ ದೇವಾಃ ! ನಃ ವರಿವಸ್ಯಂತು.

''ವಸರ್ಹಾ ವಾಸಯೋಗ್ಯವಾದ ಪರಿಜ್ಮಾ ಭೂಮಿಯ ಮೇಲಿರುವ, ನಮ್ಮ ಈ ದೇಹದ ಅಭಿಮಾನಿ ದೇವತೆಯು ನಃ ಮಮತ್ತು ನಮ್ಮನ್ನು ಸುಖ ಪಡಿಸಲಿ. ಅಪಾಂ ಕರ್ಮಗಳನ್ನು ವೃಷಣ್ವಾನ್ (ಸುರಿಸುವ) ನಮ್ಮಿಂದ ಮಾಡಿಸುವ ವಾತಃ ವಾಯುದೇವರು ನಃ ನಮ್ಮನ್ನು ಮಮತ್ತು ಸಂತೋಷಗೊಳಿಸಲಿ.

ತತ್ ಆ ಉದ್ದೇಶ್ಯದಿಂದ ಇಂದ್ರಾ ಪರ್ವತಾ ಓ ಸಕಲ ಚೇತನಸ್ವಾಮಿಯಾದ ಭಗವಂತ, ಓ ಉತ್ತಮ ಜೀವರನ್ನು ಕಾಪಾಡಿದ ದೇವನೇ! ಯುವಂ ನೀವು ನಃ

೨೯ ಬ್ರ.ವ್ಯಾಖ್ಯಾ- 'ಪರಿತೋ ಜ್ಮಾಂ ಯತಶ್ಚರತ್ । ಪರಿಜ್ಮಾsತೋ ರಥಃ ।' ಇತಿ ಋಗ್ಭಾಷ್ಯೇ। 'ಶರೀರಂ ರಥಮೇವ ಚ' ಇತ್ಯತೋ ದೇಹೋ ರಥ ಇತಿ ಅಧ್ಯಾತ್ಮವಿದಾಂ ದರ್ಶನಮ್ । ವಾಸಸ್ಯ ಅರ್ಹಃ ವಸರ್ಹಃ । 'ಪರಾವನಾತ್ ಪರ್ವತನಾಮ' ಇತಿ ನಿರ್ಣಯೋಕ್ತನಿರುಕ್ತೇಃ ।

ಮಹತ್ವಮಿತ್ಯಾಶಂಕಾಽಪಾಸ್ತಾ ಭವತಿ । ಯುವತ್ವೇಽಪಿ ಪ್ರಕಾರಭೇದೇನ ಮಹತ್ವಾದ್ಯುಕ್ತೇಃ ।

ಪ್ರಕಾರಾಂತರೇಣ ಯೂನಾಮಪಿ ನಾರಾಯಣಾದೀನಾಂ ಮಹತ್ವಂ ವ್ಯಾಖ್ಯಾತಿ ॥ ಮಹತ್ವಮಿತಿ॥ ಯೂನಾಮಪ್ಯೇಷಾಂ ಮಹತ್ವಂ ಯುಜ್ಯತೇ ಯತೋ ಗುಣತೋ ಮಹತ್ವಮುಚ್ಯತೇ ನ ಜರಸಾ ಇತ್ಯರ್ಥಃ । ತರ್ಹಿ ವಯಃಪ್ರಕರಣವಿರೋಧಃ ಸ್ಯಾದಿತ್ಯತೋ ಯುವತ್ವಾದಿಕಮಪಿ ಗುಣತ ಏವೇತ್ಯಾಹ ॥ ಇಂದ್ರಾದಯ ಇತಿ ॥ ತ ಏವ ತದೀಯೈಃ ಸ್ವೈಃ ಸ್ವೈರಾಪೇಕ್ಷಿಕಾಲ್ಪೈಃ ಗುಣೈಃ ಆಶಿನಾ ಅರ್ಭಕಾಶ್ಚ ಸಮೀರಿತಾಃ। ನಾರಾಯಣಾದಿವದನಂತಗುಣತ್ವಸ್ಯ ಅಸ್ಮದಾದಿವತ್ ಅತ್ಯಲ್ಪಗುಣತ್ವಸ್ಯ ಚ ಅಭಾವಾತ್ ಮಧ್ಯಗುಣತ್ವಾತ್ ಯುವಾನ ಏವ ಇಂದ್ರಾದಯೋ ಬ್ರಹಾದೀನ್ ಮಧ್ಯಮಗುಣಾನ್ ಯೂನೋಪೇಕ್ಷಯಾ ಅಲ್ಪಗುಣತ್ವಾತ್ । ಅಸ್ಮದಾದಿಭ್ಯೋಽತ್ಯಲ್ಪಗುಣೇಭ್ಯೋಽಧಿಕಗುಣತ್ವಾದಾಶಿನಾಃ । ನಾರಾಯಣಾದಿಭ್ಯೋಽಲ್ಪಗುಣತ್ವಾತ್ ಅರ್ಭಕಾ ಇತಿ ।

ಏವಂ ಮಹದಾದಿಪದಾರ್ಥಾನ್ ಉಕ್ತ್ವಾ ಪೂರ್ವಾರ್ಧವಾಕ್ಯಾರ್ಥಮಾಹ ॥ ಕೃತಮಿತಿ॥ ಮಹದಾದಿಭ್ಯೋ ದೇವೇಭ್ಯೋ ನಮಃ ಅಸ್ಮಾಭಿರ್ನಮಸ್ಕೃತಮ್ । ಉತ್ತರಾರ್ಧಂ ವ್ಯಾಖ್ಯಾತಿ ॥ ಶಕ್ತಿಮಂತ ಇತಿ ॥ ದೇವೈರ್ಯೂಪಾನ್ ಮೋಚಿತಾ ವಯಂ ಯದಿ ಶಕ್ನವಾಮ ಯಜನೇ ಶಕ್ತಮಂತೋ ಭವಾಮ ತರ್ಹಿ ದೇವಾನ್ ಯಜಾಮ । ಶಕ್ತ್ಯಭಾವೇಽಪಿ ಜ್ಯಾಯಸೋ ಜ್ಯಾಯಸಂ ದೇವಾನಾಮ್ । ಶಂಸಂ ಶಂಸನಮಾತ್ರಂ ಮಾಽವೃಕ್ಷಿ । 'ವ್ರಶ್ಚೀ ಛೇದನೇ' ಇತ್ಯಸ್ಯೇದಂ ರೂಪಮ್ । ನ ಲುಪಾಮಃ । ನ ಲುಪ್ತಂ ಕರಿಷ್ಯಾಮೋ ಹೇ ದೇವಾ ಇತಿ ।

ಅಸ್ತ್ವೇವಂ ಮಹತ್ವಾದಿವ್ಯಾಖ್ಯಾನಂ ಯದಾ ಸಮಸ್ತಾ ದೇವಾ ವಿವಕ್ಷಿತಾಃ ಸ್ಯುಃ । ಯದಾ ತು ವಿಷ್ಣುರೇಕ ಏವ ವಿವಕ್ಷಿತಸ್ತದಾ ಕಥಮಿತ್ಯತ ಆಹ ॥ ಏಕಸ್ಯೇತಿ ॥ ರೂಪಭೇದಾಃ ರೂಪವಿಶೇಷಾಃ । ವಾಶಬ್ದಾತ್ ಮಧ್ಯಮಪ್ರಕಾರದ್ವಯೋಪೇತಾಃ । ತತಃ ಕಿಮಿತ್ಯತ ಆಹ ॥ ಯುವತ್ವೇನೇತಿ ॥ ಮಹತ್ವಭೇದಾತ್ । ಅಪಿಶಬ್ದೇನ ಅರ್ಭಕಾಶಿನಯೋಃ ಸಮುಚ್ಚಯಃ ।

ಅನ್ವಯ :- ಮಹದ್ಭ್ಯಃ ಯುವಭ್ಯಃ ಆಶಿನೇಭ್ಯಃ ಅರ್ಭಕೇಭ್ಯಃ ನಮಃ. ಯದಿ ಶಕ್ನವಾಮ ದೇವಾನ್ ಯಜಾಮ. ಯದಿ ನ ಶಕ್ನವಾಮ ಜ್ಯಾಯಸಃ ಶಂಸಂ ಮಾ ಅವೃಕ್ಷಿ.

''ಮಹದ್ಭ್ಯಃ ಗುಣಗಳಿಂದ ಉತ್ತಮರಾದ ನಾರಾಯಣ, ಬ್ರಹ್ಮ, ರುದ್ರ ಮುಂತಾದ ದೇವತೆಗಳಿಗೆ ಯುವಭ್ಯಃ ಗುಣಗಳಿಂದ ಮಧ್ಯಮರಾದ ಇಂದ್ರಾದಿ ದೇವತೆಗಳಿಗೆ ಆಶಿನೇಭ್ಯಃ ಗುಣಗಳಿಂದ ವಟುಗಳಂತಿರುವವರಿಗೆ ಅರ್ಭಕೇಭ್ಯಃ ದೇವರ ದೃಷ್ಟಿಯಲ್ಲಿ ಗುಣಗಳಿಂದ ಚಿಕ್ಕವರಾದ ದೇವತೆಗಳಿಗೆ ನಮಃ ನನ್ನ ನಮನ.

ಅಥವಾ, ನಾರಾಯಣನ ಮಹಾ, ಯುವ, ವಟು ಹಾಗೂ ಬಾಲ ರೂಪಗಳಿಗೆ ನನ್ನ ಪ್ರಣಾಮಗಳು.

ಯದಿ ಶಕ್ನವಾಮ ನಮಗೆ ಸಾಧ್ಯವಿದ್ದರೇ ದೇವಾನ್ ಯಜಾಮ ದೇವತೆಗಳನ್ನು ಕುರಿತು ಯಜ್ಞ ಮಾಡೋಣ. ಸಾಧ್ಯವಿಲ್ಲದಿದ್ದರೇ ಜ್ಯಾಯಸಃ ನಮಗಿಂತಲೂ ತುಂಬ ಉತ್ತಮರಾದ ದೇವತೆಗಳ ಶಂಸಂ ಸ್ತುತಿಯನ್ನಾದರೂ ಕೊನೆಯ ಪಕ್ಷ ಮಾ ಅವೃಕ್ಷಿ ತಪ್ಪಿಸುವುದು ಬೇಡ.''

ಓಂ[೨೯]ಮಮತ್ತು ನಃ ಪರಿಜ್ಮಾ ವಸರ್ಹಾ ಮಮತ್ತು ವಾತೋ ಅಪಾಂ ವೃಷಣ್ವಾನ್। ಶಿಶೀತಮಿಂದ್ರಾಪರ್ವತಾ ಯುವಂ ನಸ್ತನ್ನೋ ವಿಶ್ವೇ ವರಿವಸ್ಯಂತು ದೇವಾಃ ॥ (ಋ.೧-೧೨೨-೩)

ಅನ್ವಯ :- ವಸರ್ಹಾ ಪರಿಜ್ಮಾ ನಃ ಮಮತ್ತು. ಅಪಾಂ ವೃಷಣ್ವಾನ್ ವಾತಃ ಮಮತ್ತು. ಇಂದ್ರಾ ಪರ್ವತಾ ಯುವಂ ನಃ ಶಿಶೀತಂ. ವಿಶ್ವೇ ದೇವಾಃ ! ನಃ ವರಿವಸ್ಯಂತು.

''ವಸರ್ಹಾ ವಾಸಯೋಗ್ಯವಾದ ಪರಿಜ್ಮಾ ಭೂಮಿಯ ಮೇಲಿರುವ, ನಮ್ಮ ಈ ದೇಹದ ಅಭಿಮಾನಿ ದೇವತೆಯು ನಃ ಮಮತ್ತು ನಮ್ಮನ್ನು ಸುಖ ಪಡಿಸಲಿ. ಅಪಾಂ ಕರ್ಮಗಳನ್ನು ವೃಷಣ್ವಾನ್ (ಸುರಿಸುವ) ನಮ್ಮಿಂದ ಮಾಡಿಸುವ ವಾತಃ ವಾಯುದೇವರು ನಃ ನಮ್ಮನ್ನು ಮಮತ್ತು ಸಂತೋಷಗೊಳಿಸಲಿ.

ತತ್ ಆ ಉದ್ದೇಶ್ಯದಿಂದ ಇಂದ್ರಾ ಪರ್ವತಾ ಓ ಸಕಲ ಚೇತನಸ್ವಾಮಿಯಾದ ಭಗವಂತ, ಓ ಉತ್ತಮ ಜೀವರನ್ನು ಕಾಪಾಡಿದ ದೇವನೇ! ಯುವಂ ನೀವು ನಃ

---

೨೯ ಬ್ರ.ವ್ಯಾಖ್ಯಾ- 'ಪರಿತೋ ಜ್ಮಾಂ ಯತಶ್ಚರತ್ । ಪರಿಜ್ಮಾऽತೋ ರಥಃ ।' ಇತಿ ಋಗ್ಭಾಷ್ಯೇ। 'ಶರೀರಂ ರಥಮೇವ ಚ' ಇತ್ಯತೋ ದೇಹೋ ರಥ ಇತಿ ಅಧ್ಯಾತ್ಮವಿದಾಂ ದರ್ಶನಮ್ । ವಾಸಸ್ಯ ಅರ್ಹಃ ವಸರ್ಹಃ । 'ಪರಾವನಾತ್ ಪರ್ವತನಾಮ' ಇತಿ ನಿರ್ಣಯೋಕ್ತನಿರುಕ್ತೇಃ ।

ನಮ್ಮನ್ನು, ನಮ್ಮ ಬುದ್ಧಿಗಳನ್ನು ಶಿಶೀತಂ ತೀಕ್ಷ್ಣಗೊಳಿಸಿರಿ. ವಿಶ್ವೇ ದೇವಾಃ ಓ ಎಲ್ಲ ದೇವತೆಗಳೇ ನಃ ನಮ್ಮನ್ನು ವರಿವಸ್ಯಂತು ಸಲಹಿರಿ.''

**ಓಂ [೩೦]ಕಥಾ ತೇ ಅಗ್ನೇ ಶುಚಯಂತ ಆಯೋರ್ದದಾಶುರ್ವಾಜೇಭಿ- ರಾಶುಷಾಣಾಃ । ಉಭೇ ಯತ್ ತೋಕೇ ತನಯೇ ದಧಾನಾ ಋತಸ್ಯ ಸಾಮನ್ ರಣಯಂತ ದೇವಾಃ ॥** (ಋ.೧-೧೪೭-೧)

**ಅನ್ವಯ :- ಅಗ್ನೇ ! ಯತ್ ತೇ ಕಥಾ ಶುಚಯಂತಃ. ವಾಜೇಭಿಃ ಆಶುಷಾಣಾಃ. ಆಯೋಃ ದದಾಶುಃ. (ತತ್) ದೇವಾಃ ಉಭೇ ತೋಕೇ ತನಯೇ ಕಥಾಃ ದಧಾನಾಃ ಋತಸ್ಯ ಸಾಮನ್ ರಣಯಂತ.**

''ಅಗ್ನೇ ಭಗವನ್! **ಯತ್** ಯಾವ ಕಾರಣ **ತೇ ಕಥಾ** ನಿನ್ನ ಕಥೆಗಳು **ಶುಚಯಂತಃ** ಕೇಳುವವರ ದೇಹ, ಇಂದ್ರಿಯ, ಮನಸ್ಸು, ಚೈತನ್ಯಗಳನ್ನು ಶುಚಿ ಮಾಡುತ್ತವೋ, **ವಾಜೇಭಿಃ** ಜ್ಞಾನವನ್ನು **ಆಶುಷಾಣಾಃ** ತುಂಬ ಬೇಗನೆ ನೀಡುತ್ತವೋ, **ಆಯೋಃ** ದೇವರ ಸಖ್ಯವನ್ನು, ಒಡನಾಟವನ್ನು, ಕೊನೆಯಲ್ಲಿ ಸಾಯುಜ್ಯವನ್ನು **ದದಾಶುಃ** ದಯಪಾಲಿಸುತ್ತವೋ,

(ತತ್)- ಆದುದರಿಂದ **ದೇವಾಃ** ದೇವತೆಗಳು **ಉಭೇ ತೋಕೇ** ತಮ್ಮ ಮಕ್ಕಳಲ್ಲೂ (ಅಂದರೆ ಋಷಿಮುನಿಗಳಲ್ಲೂ) **ತನಯೇ** ಅವರ ಸಂತತಿಯಲ್ಲೂ (ಅಂದರೆ ಮಾನವಾದಿಗಳಲ್ಲೂ) **ಕಥಾಃ ದಧಾನಾಃ** ಭಗವಂತನ ಕಥೆಗಳನ್ನು ಉಪದೇಶಿಸುತ್ತ **ಋತಸ್ಯ** ಭಗವಂತನ **ಸಾಮನ್** ಕಥೆಯ ಗಾನಗಳಲ್ಲಿ **ರಣಯಂತ** ರಾಗ ತೆಗೆದರು; ಹಾಡಿ ಹಾಡಿ ಸಂತಸ ಪಟ್ಟರು.''

**ಓಂ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್। ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥**

---

೩೦ ಬ್ರ.ವ್ಯಾಖ್ಯಾ- ಕಥಾ ಇತ್ಯಸ್ಯ ಕಥಮಿತ್ಯರ್ಥಃ । ಕಥಾ ಇತ್ಯಪ್ಯರ್ಥೋ ಭವತಿ । ಬಹುವಚನಸ್ಯ 'ಸುಪಾಂ' ಇತ್ಯನೇನ ಲುಕ್ । ಶುಚಿಂ ಕುರ್ವಂತಃ । 'ಯು ಮಿಶ್ರಣೇ' ಇತ್ಯತಃ ಭಾವೇ ಕ್ವಿಪ್ । ತುಗಭಾವಃ ಛಾಂದಸಃ । ತೇನ ಸಖ್ಯಂ ಸಹವಾಸಃ ಸಾಯುಜ್ಯಂ ಇತ್ಯರ್ಥತ್ರಯಪ್ರಸವಃ । 'ವಜ ಗತೌ' ಇತ್ಯತೋ ವಾಜಂ ಜ್ಞಾನಮ್ । ಆಶು ಸನಂತಿ 'ಸನ ಸಂಭಕ್ತೌ' ಇತ್ಯತಃ ದದತಿ ಇತಿ ಆಶುಷಾಣಾಃ । ತೋಕಃ ಪುತ್ರಃ । ತನಯಃ ತತ್ಪುತ್ರಃ। 'ತನು ವಿಸ್ತಾರೇ' ಇತ್ಯತಃ ವಂಶವಿಸ್ತಾರಕಃ । ಸಮಾನ ಸಾಮ್ನಿ । ಸಪ್ತಮ್ಯಾಃ ಲುಕ್ । 'ರಣ ಶಬ್ದೇ' । 'ರಮು ಕ್ರೀಡಾಯಾಂ' ಇತ್ಯಸ್ಯ ವಾ ವರ್ಣವಿಪರ್ಯಯೇಣ ರಣಯಂತ ।

